ಮಿಂಚಿನ ಬಳ್ಳಿಯ ಎರಡನೆಯ ವರುಷದ ಮೊದಲನೆಯ ಕುಡಿ

# ಭಾರತೀಯ
# ಸ್ವಾತಂತ್ರ್ಯದ ಹೆಜ್ಜೆಗಳು

ಬರೆದವರು :

**ಬುರ್ಲಿ ಬಿಂದುಮಾಧವ**

ಚಾಲುಕ್ಯ ವಿಕ್ರಮ ಶಕೆ ೮೬೫

ಫಾ. ವ. ೫] ಬೆಲೆ ೧। ರೂ. [ಮಾರ್ಚ ೧೯೩೯

ಪ್ರಕಾಶಕರು :—
ಬಾಳಾಚಾರ್ಯ ಗುರಾಚಾರ್ಯ ಅವಧಾನಿ
ಮಿಂಚಿನಬಳ್ಳಿಯ ಚಾವಡಿ,
ಜವಳೀ ಪೇಟೆ ಧಾರವಾಡ







ಮಿಂಚಿನ ಬಳ್ಳಿಯ -

ಮುಂದಿನ ಪುಸ್ತಕ



(ಜೂನ ತಿಂಗಳಲ್ಲಿ ಪ್ರಸಿದ್ಧವಾಗುವದು)

# ಮುಂದುವರಿದ ಜಪಾನ

ಬರೆದವರು :

**ಶ್ರೀ. ಕರಾಜೂರ, ಎಲ್. ನಂಜಪ್ಪ**

ವಾಣಿಜ್ಯ ವಿಶ್ವವಿದ್ಯಾನಿಲಯ

ಟೋಕಿಯೋ, ಜಪಾನ

ಮುದ್ರಕರು :—
ಶೇಷಗಿರಿರಾವ ಗೋವಿಂದರಾವ ಕುಲಕರಣಿ
ಸಾಧನಪ್ರೆಸ್, ಧಾರವಾಡ
೩೯—೩೯

# ಒಂದೆರಡು ಮಾತುಗಳು

ಮಿಂಚಿನ ಬಳ್ಳಿಯು ಎರಡನೇ ವರ್ಷದಲ್ಲಿ ಕಾಲಿಟ್ಟಿದೆ. ಸಂಕಲ್ಪದಂತೆ ಮೊದಲಿನ ವರ್ಷದ ನಾಲ್ಕೂ ಪುಸ್ತಕಗಳು ಹೋದ ವರ್ಷವೇ ಅರ್ಪಿಸಲ್ಪಟ್ಟವು. ನಾನು ತುಳಿಯುತ್ತಿರುವ ಹಾದಿ ಹೊಸದು, ಕ್ಷೇತ್ರವೂ ಹೊಸದು. ಹಲವು ಬಗೆಯ ಹೊಸ ಅನುಭವಗಳೂ ಬರುತ್ತಲಿವೆ. ೩೦೦ ರೂ. ಗಳ ನಷ್ಟವೂ ಆಗಿದೆ. ಆದರೆ **ಬಳ್ಳಿಯು** ವಿಚಾರ ಕ್ರಾಂತಿಯನ್ನು ಮಾಡಿದೆ ಎಂಬ ಅನುಭವವೂ ಬಂದದ್ದರಿಂದ, ಕನ್ನಡಿಗರು ನೆರವಾಗುವರೆಂಬ ನಂಬುಗೆಯಿಂದ, ೩ ವರ್ಷ ನಡೆಯಿಸಿಯೇ ತೀರಬೇಕೆಂದು ನಿಶ್ಚಯಿಸಿದ್ದೇನೆ.

ಮೊದಲಿನ ವರ್ಷ 'ಕರ್ನಾಟಕ ದರ್ಶನ' ದಿಂದ ಮೊದಲು ಮಾಡಿದಂತೆ, **ಭಾರತೀಯ ಸ್ವಾತಂತ್ರ್ಯದ ಹೆಜ್ಜೆಗಳು,** ಎಂಬುದರಿಂದ ಈ ವರ್ಷದ ಮೊದಲು ಮಾಡಿದೆ. ಭಾರತದ ಹೋರಾಟದ ದರ್ಶನ ಮಾಡಿಸಬೇಕೆಂಬುದೇ ಈ ಬರವಣಿಗೆಯ ಗುರಿಯು. ಇದೇ ಉದ್ದೇಶದಿಂದಲೇ **ರಶಿಯದ ರಾಜಕ್ರಾಂತಿ**ಯನ್ನು ಮುಂದೆ ಹಾಕಿದೆ. ೩೦ ನೇ ಇಸ್ವಿಯಲ್ಲಿ. ಸೆರೆಮನೆಯಲ್ಲಿರುವಾಗ ರಾಷ್ಟ್ರದ ಹೋರಾಟದ ದೃಷ್ಟಿಯಿಂದ ಈ ಬಗೆಯ ಪುಸ್ತಕದ ಅವಶ್ಯಕತೆಯು ಕನ್ನಡಿಗರಿಗೆ ಇದೆ ಎಂದು ಅನಿಸಿತು. ಅಲ್ಲಿಯೇ ಬಹುಭಾಗವನ್ನು ಬರೆದೆ.

ಇದನ್ನು ಬರೆಯುವಾಗ ನನ್ನೆದುರು ಎರಡು ದೃಷ್ಟಿಗಳು ಇದ್ದವು ನಮ್ಮ ಹೋರಾಟದ ಮೆಟ್ಟಲುಗಳ ಸ್ಪಷ್ಟಕಲ್ಪನೆಯು ಮೊದಲಿನದು.

ರಾಷ್ಟ್ರವು ಆ ಮೆಟ್ಟಲುಗಳನ್ನು ಹೇಗೆ ಹತ್ತಿತು ಎಂಬುದು ಎರಡನೆಯದು. ಪೂರ್ವಾರ್ಧದಲ್ಲಿ ಸ್ವಾತಂತ್ರ್ಯದ ಹೆಜ್ಜೆಗಳನ್ನು ತೋರಿಸಿದೆ. ಉತ್ತರಾರ್ಧದಲ್ಲಿ ಸ್ವಾತಂತ್ರ್ಯದ ಹೆಜ್ಜೆಗಳನ್ನು ರಾಷ್ಟ್ರದ ನಾಯಕರು ಹೇಗೆ ಹಾಕಿಸಿದರೆಂಬುದನ್ನು ಅವರ ಚರಿತ್ರೆಗಳಿಂದ ವಿಸ್ತರಿಸಿದೆ. ಮುಂದಣ ಹೋರಾಟವು ಹಣಿಕೆ ಹಾಕುತ್ತಿರುವ ಈ ಸಮಯದಲ್ಲಿ ಕನ್ನಡಿಗರಿಗೆ ಇದು ನೆರವಾಗುವವೆಂದು ಬಗೆದಿದ್ದೇನೆ. ಇದರಿಂದ ಒಬ್ಬಿಬ್ಬ ಕನ್ನಡಿಗರಿಗಾದರೂ ಹೋರಾಟದ ಕಲ್ಪನೆಯು ಹೊಳೆದರೆ, ನನ್ನ ಬರವಣಿಗೆಯು ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ನಾನು ಸ್ವತಂತ್ರವಾಗಿ ಬರೆದುದು ಇದೇ ಮೊದಲಿನ ಪುಸ್ತಕ. ನಾನು ಭಾಷೆ ಬರವಣಿಗೆಗಳನ್ನರಿಯದವನು. ಹಲವು ತಪ್ಪುತಡೆಗಳು ಆಗಿರಬಹುದು. ಅವುಗಳನ್ನು ಕನ್ನಡಿಗರು ಕ್ಷಮಿಸುವರೆಂದು ಆಶಿಸುತ್ತೇನೆ. ನನ್ನ ತಪ್ಪುಗಳನ್ನು ನನಗೆ ತಿಳಿಸಿ ನನ್ನನ್ನು ತಿದ್ದಬೇಕು. ನಾನು ನಿಮ್ಮ ಸೇವಕನು; ತಿಳಿದು ಬೆಳೆಯಬೇಕೆನ್ನುವವನು.

ಶ್ರೀಮಾನ್ ಅಪ್ಪೂರಾವ ನಾಡಿಗೇರರೂ, ಡಾ। ಕಾಮಲಾಪೂರರೂ ನೆರವಾಗದಿದ್ದರೆ ಮಿಂಚಿನ ಬಳ್ಳಿಯು ಹೊಸ ವರ್ಷವನ್ನು ಕಾಣುತ್ತಲೇ ಇರಲಿಲ್ಲ. ಅದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ. ಶ್ರೀ. ಜಿ. ಎನ್. ಗುಪ್ತರೂ ಶ್ರೀ. ಘಾಣೇಕರ ಭಾಲಚಂದ್ರರಾಯರೂ ಪಡಿಯಚ್ಚುಗಳನ್ನು ಕೊಟ್ಟು ಸಹಾಯ ಮಾಡಿದ್ದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ತಮ್ಮ ಅಡಿಯಾಳು,

**ಬುರ್ಲಿ ಬಿಂದುಮಾಧವ**

# ಮುನ್ನುಡಿ

ನಮಗೆ ಕಂಡುಬರುತ್ತಿರುವ ವಿಶ್ವದ ಸರ್ವವ್ಯಾಪಾರಗಳೂ ನಿಸರ್ಗದ ಚಮತ್ಕಾರದ ಮೂಲಕ ನಡೆದಿವೆ. ಮನುಷ್ಯರು ಮೊದಲಾದ ಸರ್ವಪ್ರಾಣಿಗಳು ಹುಟ್ಟುತ್ತವೆ, ಸಾಯುತ್ತವೆ. ಎಲ್ಲವೂ ಒಂದೇ ತರಹದ ವ್ಯಾಪಾರ, ಎಲ್ಲದಕ್ಕೂ ಅಷ್ಟೇ ಮಹತ್ವ. ರಾಜನ ಮರಣಕ್ಕೂ ಒಂದು ಕ್ರಿಮಿಯ ಸಾವಿಗೂ ಏನೂ ಭೇದವಿಲ್ಲ.

ತಗಣಿಚಿಕ್ಕಾಡುಗಳನ್ನು ಕೊಂದರೆ ಗೊತ್ತೂ ಆಗುವದಿಲ್ಲ. ಗೊತ್ತಾದರೆ ಅದಕ್ಕಾವ ದಂಡನೆಯೂ ಇಲ್ಲ. ಬೀದಿಯಲ್ಲಿ ಅಲೆದಾಡುವ ನಾಯಿಯನ್ನು ಸಂಹರಿಸಿದರೆ ಭಯವೇನೂ ಇಲ್ಲ. ಆದರೆ ಅದೇ ಒಂದು ಸಾಕಿದ ನಾಯಿಯನ್ನು ಕೊಲ್ಲುವದಾದರೆ ಅದರ ಒಡೆಯನ ಕೋಪಕ್ಕೆ ಗುರಿಯಾಗಬೇಕಾಗುತ್ತದೆ. ಮನುಷ್ಯನನ್ನು ಕೊಲ್ಲಲು ಅಪ್ಪಣೆ ಇಲ್ಲ. ಆದರೆ ಇಂದಿನ ಯುದ್ಧಗಳನ್ನು ನೋಡಿದರೆ, ಅಲ್ಲಿಯ ಮನುಷ್ಯಪ್ರಾಣಿಯ ವಧೆಯು, ಗ್ರಾಮದೇವತೆಯ ಮುಂದೆ ನಡೆಯುವ ಕುರಿಕೋಣಗಳ ಬಲಿಯಂತೆ ತೋರುತ್ತದೆ.

ಈ ವಿಶ್ವದಲ್ಲಿ ಯಾವುದೇ ವಸ್ತುವಿನ ಮೇಲೆ ಯಾವ ಪ್ರಾಣಿಯ ಅಧಿಕಾರವೂ ಇಲ್ಲ. ಇಲಿಗಳನ್ನು ತಿನ್ನುವದಕ್ಕೆ ಬೆಕ್ಕಿಗೆ, ಚಿಗರೆಗಳನ್ನು ಭಕ್ಷಿಸುವದಕ್ಕೆ ಹುಲಿಗೆ, ಕುರಿಕೋಳಿಗಳನ್ನು ಮುರಿಯಲಿಕ್ಕೆ ತೋಳಕ್ಕೆ ಯಾರೂ ಅಧಿಕಾರವನ್ನು ಕೊಟ್ಟಿಲ್ಲ. ಅದೇ ಪ್ರಕಾರ ಇತರರ ಮೇಲೆ ಅಧಿಕಾರ ಮಾಡುವದಕ್ಕೆ ಯಾರು ಯಾರಿಗೂ ಹೇಳಿಲ್ಲ. ಶ್ರೀಮಂತರನ್ನು ಸೇವಿಸಬೇಕೆಂದು ಬಡವರಿಗೆ ಯಾರಾದರೂ ಆಜ್ಞೆಮಾಡಿರುವರೇ? ಹಾಗಾದರೆ ಇವೆಲ್ಲವುಗಳ ಅರ್ಥವೇನು? ಜೀವನಕ್ಕಾಗಿ ಸರ್ವಪ್ರಾಣಿಗಳು ನಡೆಸಿರುವ ಹೋರಾಟವೂ ಇದೇ.

ಪ್ರತಿಯೊಂದು ಪ್ರಾಣಿಯೂ ತನ್ನ ಸುಖಸಾಮ್ರಾಜ್ಯವನ್ನು

ಬೆಳೆಯಿಸಿಕೊಳ್ಳಲು ಹೆಣಗುತ್ತಿದೆ. ಅದರ ಯತ್ನಕ್ಕೆ ಒಮ್ಮೆ ಯಶಬರುವ ದುಂಟು, ಒಮ್ಮೆ ಒರುವದಿಲ್ಲ. ಜಯಾಪಜಯಗಳು ಆಯಾ ಪ್ರಾಣಿಗಳ ಶಕ್ತಿಯನ್ನು ಅವಲಂಬಿಸಿವೆ. ಈ ಯಶಾಪಯಶಗಳ ಮೇಲೆಯೇ ಆಯಾ ಪ್ರಾಣಿಗಳ ಊರ್ಜಿತಾವಸ್ಥೆಯು ಅವಲಂಬಿಸಿದೆ.

ಮನುಷ್ಯನು ಇತರ ಪ್ರಾಣಿಗಳಿಗಿಂತ ತನ್ನ ಬುದ್ಧಿಯ ಮೂಲಕ ಹೆಚ್ಚು ಸಮರ್ಥನಿದ್ದಾನೆ, ಆದ್ದರಿಂದ ತನ್ನ ಸುಖಗಳನ್ನು ಬೆಳೆಸಿಕೊಳ್ಳಲು ಹೆಚ್ಚು ಮಾರ್ಗಗಳನ್ನು ಶೋಧಿಸಿದ್ದಾನೆ. ಮನುಷ್ಯರಲ್ಲಿ ಹೆಚ್ಚು ಬಲಶಾಲಿಯೂ, ಮಹತ್ವಾಕಾಂಕ್ಷಿಯೂ, ಮತ್ತು ಸ್ವಾರ್ಥಿಯೂ ಆದವನು ತನ್ನ ಸುಖದ ಕ್ಷೇತ್ರವನ್ನು ಬೆಳೆಸುತ್ತ, ಧುರೀಣನಾಗಿ ಆ ದೇಶದ ಜನರನ್ನೆಲ್ಲ ತನ್ನ ಅಂಕಿತದಲ್ಲಿ ಇಟ್ಟುಕೊಳ್ಳುತ್ತ ಬಂದಿದ್ದಾನೆ. ಅಷ್ಟಕ್ಕೇ ತೃಪ್ತನಾಗದೆ ಇತರ ರಾಷ್ಟ್ರಗಳನ್ನೂ ಪಾದಾಕ್ರಾಂತ ಮಾಡಿಕೊಂಡು, ಆ ದೇಶದ ಜನರ ಸ್ವಾತಂತ್ರ್ಯವನ್ನು ಹರಣಮಾಡು ತ್ತಾನೆ. ತನಗಿಂತ ಬಲಿಷ್ಠರು ಬಂದರೆ ತನ್ನ ರಾಜ್ಯವನ್ನು ಬಿಟ್ಟು ಓಡಿ ಹೋಗುತ್ತಾನೆ; ಅಥವಾ ಅವರ ಅಧೀನನಾಗುತ್ತಾನೆ.

ಸರ್ವ ರಾಷ್ಟ್ರಗಳ ಇತಿಹಾಸವನ್ನು ನೋಡಿದರೆ, ಅವುಗಳು ಮಾನವನ ಸುಖಾನ್ವೇಷಣೆಯ ಬಲಿಗೆಬಿದ್ದು, ಎಷ್ಟೋ ಸಾರೆ ಸ್ವಾತಂತ್ರ್ಯ ವನ್ನು ಕಳೆದುಕೊಂಡ ಮತ್ತೆ ಪುನಃ ದೊರಕಿಸಿದ ಸಂಗತಿಗಳು ಕಂಡು ಬರುತ್ತವೆ. ಇದೇ **ಸ್ವಾತಂತ್ರ್ಯದ ಹೋರಾಟವು.**

ಇದೇ ಸ್ಥಿತಿಯು ನಮ್ಮ ಹಿಂದುಸ್ಥಾನ ದೇಶದ್ದು. ಇಂದು ನಮ್ಮ ದೌರ್ಬಲ್ಯದ ಮೂಲಕ ನಾವು ಪರಾವಲಂಬಿಗಳಾಗಿ ದುಃಖಕ್ಕೆ ಗುರಿ ಯಾಗಿದ್ದೇವೆ. ಸುಖಿಗಳಾದ ದೇಶದಿಂದ ಈ ದೌರ್ಬಲ್ಯವನ್ನು ಹೊಡೆ ದೋಡಿಸಿ ನಾವು ಕಳೆದುಕೊಂಡ ಸ್ವಾತಂತ್ರ್ಯವನ್ನು ಪುನಃ ದೊರಕಿಸಲು ಹೊರಟಿದ್ದೇವೆ. ನಮ್ಮಲ್ಲಿ ಬಲವಿದ್ದರೆ ನಾವು ಸುಖಿಗಳಾಗುವೆವು. ಆ ಸುಖವೇ ನಮ್ಮ ಸ್ವಾತಂತ್ರ್ಯವು.

ಯಾವುದೇ ದೇಶವು ತನ್ನ ಸ್ವಾತಂತ್ರ್ಯವನ್ನು ತಿರುಗಿ ಗಳಿಸಬೇಕಾದರೆ

ಅಲ್ಲಿಯ ಜನರು ಸಮರ್ಥರಾಗುವಂತೆ ಕೆಲವು ಮುಖಂಡರು ದುಡಿಯ ಬೇಕಾಗುತ್ತದೆ. ಇಂದಿನ ಹೋರಾಟಕ್ಕೆ ನಮ್ಮನ್ನು ಹುರಿಗೊಳಿಸಿದವರಲ್ಲಿ ಮುಖ್ಯಸ್ಥರೆಂದರೆ ದಿವಂಗತ ಲೋಕಮಾನ್ಯ 'ಟಿಳಕರವರು' ಮತ್ತು ಇಂದಿಗೂ ನಮ್ಮ ಸೇನಾನಾಯಕರಾದ ಮಹಾತ್ಮಾ ಗಾಂಧಿಯವರು ಇವರೇ ಮೊದಲಾದವರು. ಇವರ ದುಡಿಮೆಯ ಫಲದಿಂದಲೇ ನಾವು ಇಂದಿನ ವಾತಾವರಣವನ್ನು ಕಾಣುತ್ತಿದ್ದೇವೆ. ಈ ವಾತಾವರಣವನ್ನು ಅವರು ಹೇಗೆ ಉಂಟುಮಾಡಿದರು ಮತ್ತು ಅದಕ್ಕಾಗಿ ಅವರು ಎಷ್ಟು ಕಷ್ಟಬಟ್ಟರು ಎಂಬ ಸಂಗತಿಗಳು ಜನರಿಗೆ ಗೊತ್ತಾಗುವದು ಅವಶ್ಯಕವು. ಇವರ ಚರಿತ್ರೆಯನ್ನು ಓದಿ ಸ್ಫೂರ್ತಿಗೊಂಡು ಅವರಂತೆ ದೇಶದಲ್ಲಿಯ ಬಹುಜನರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದರೆ ನಮ್ಮ ಗುರಿಯು ಬೇಗನೆ ಸಾಧಿಸುವದು.

ನಮ್ಮ ದೇಶದ ರಾಷ್ಟ್ರನಾಯಕರ ಪ್ರೇರಣೆಯಿಂದ ಪ್ರೇರಿತರಾಗಿ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಭಾಗವಹಿಸಿದ ಜನರಲ್ಲಿ ಓರ್ವರಾದ ಶ್ರೀ ಜಂಗುಮಾಧವ ಬುರ್ಲಿಯವರು, ನಮ್ಮನ್ನು ಮೊದಲಿನಿಂದ ಇದು ವರೆಗೂ ಸ್ವಾತಂತ್ರ್ಯ ಪಥದಲ್ಲಿ ಕರೆದುಕೊಂಡು ಬಂದ ಮುಖಂಡರ ಚರಿತ್ರೆಗಳನ್ನೂ ಮತ್ತು ನಮ್ಮ ದೇಶವು ಈ ಸಂಬಂಧವಾಗಿ ಇಟ್ಟ ಹೆಜ್ಜೆಗಳ ವಿವರಣೆಯನ್ನೂ ಮುಂದಣ ಹೋರಾಟದ ಸಾಮಾನ್ಯಕಲ್ಪನೆ ಯನ್ನೂ ಬರೆದು ಪ್ರಸಿದ್ಧಮಾಡಿದ್ದಕ್ಕಾಗಿ ನಾನು ಅವರನ್ನು ಅಭಿನಂದಿಸದೆ ಇರಲಾರೆನು. ನಮ್ಮ ಹೋರಾಟವು ಇವತ್ತಿನಂತಹ ಉತ್ಕ್ರಾಂತಿಯ ಸ್ಥಿತಿಗೆ ಬಂದು ಮುಟ್ಟಿದ ವೇಳೆಯಲ್ಲಿ '**ಸ್ವಾತಂತ್ರ್ಯದ ಹೆಜ್ಜೆಗಳು**' ಈ ಪುಸ್ತಕವು ಪ್ರಸಿದ್ಧವಾದದ್ದನ್ನು ಕಂಡು ಆನಂದದಿಂದ ಈ ಮುನ್ನುಡಿ ಯನ್ನು ಬರೆದಿದ್ದೇನೆ. ಈ ಪುಸ್ತಕವು ಕರ್ನಾಟಕದ ಜನತೆಗೆ ಮಾರ್ಗ ದರ್ಶಕವಾಗಲೆಂದು ಹಾರೈಸುತ್ತೇನೆ.

ಹುಬ್ಬಳ್ಳಿ
ತಾ. ೧-೩-೧೯೩೮

**ನಾ. ಸು. ಹರ್ಡೀಕರ**

# ಪರಿವಿಡಿ



## ಪೂರ್ವಾರ್ಧ



## ಉತ್ತರಾರ್ಧ

ಓಂ

# ಭಾರತೀಯ ಸ್ವಾತಂತ್ರ್ಯದ ಹೆಜ್ಜೆಗಳು

## ಮೊದಲನೆಯ ಹೆಜ್ಜೆ

ಸ್ವಾತಂತ್ರ್ಯದ ಕಲ್ಪನೆ

೧೮೫೮ರ ಬಂಡಾಯದ ನಂತರ ಭಾರತದ ಸ್ವಾತಂತ್ರ್ಯದ ರವಿಯು ಪೂರ್ಣವಾಗಿ ಅಸ್ತಂಗತನಾದನು. ಯಾವುದೇ ರಾಷ್ಟ್ರದ ಅಧಃಪತನದಲ್ಲಿಯೇ ಅದರ ಉದಯದ ಬೀಜಗಳೂ ಇರುತ್ತವೆಂಬ ಮಾತು ಸುಳ್ಳಲ್ಲ. ಅನೇಕ ತಂತ್ರಕ್ಕೊಳಗಾದ ಭಾರತವು, ಏಕತಂತ್ರಕ್ಕೊಳಗಾಗಿ ಏಕ ರಾಷ್ಟ್ರೀಯವಾಗದೆ ಭಾರತದ ಪುನರುದ್ಧಾರವಿಲ್ಲೆಂಬ ರಾಷ್ಟ್ರೀಯತೆಯ ಕಲ್ಪನೆಯು ಮಾತ್ರ ಈ ಬಂಡಾಯದಲ್ಲಿಯೇ ಹೊಳೆಯಿತು. ಏಕರಾಷ್ಟ್ರೀಯತ್ವದ ಭಾವನೆಯ ಅಭಾವದಿಂದಲೇ ಭಾರತದ ಸ್ವಾತಂತ್ರ್ಯವು ನಾಶವಾಯಿತೆಂದು ಬಗೆದೇ ಜಾತಿ, ಮತ, ಪಂಥಗಳನ್ನು ತೊರೆದು ಸ್ವಾತಂತ್ರ್ಯಕ್ಕಾಗಿ ಸಿಪಾಯಿಯರು ಹೋರಾಡಿದರು. ತಮ್ಮ ಪ್ರಾಣಗಳನ್ನು ನೀಡಿದರು. ವೀರ ಸ್ವರ್ಗವನ್ನೈದಿದರು. ತಮ್ಮ ರಕ್ತದಲ್ಲಿಯೇ ನವಭಾರತದ **ರಾಷ್ಟ್ರೀಯ ಭಾವನೆಯ** ಬೀಜವನ್ನು ಬಿತ್ತಿ ಹೋದರು. ಆ ಸಸಿಯೇ ಇನ್ನೂ ಬೆಳೆಯುತ್ತಲಿದೆ. **ಈ ಬಂಡಾಯವೇ ನಮ್ಮ ಸ್ವಾತಂತ್ರ್ಯ ಕಲ್ಪನೆಯ ಜನನಿಯು**.

ಬಂಡಾಯದ ನಂತರ ಕಂಪನಿಯ ಆಳಿಕೆಯು ಕೊನೆಗಂಡಿತು. ವಿಕ್ಟೋರಿಯಾ ಮಹಾರಾಣಿಯ ಸವಿಮಾತಿನ ಜಾಹೀರನಾಮೆಯು ಸಾರಲ್ಪಟ್ಟಿತು. ಸಕ್ಕರಿಯಂತಹ ಸವಿ ಮಾತುಗಳಿಗೆ ಭಾರತೀಯರು ಮರುಳಾದರು. ಬ್ರಿಟಿಶ ಪಾರ್ಲಿಮೆಂಟಿನ ರಾಜ್ಯವೆಂದರೆ ದೇವಲೋಕದ ರಾಜ್ಯ

ಪಶ್ಚಿಮದ ಪ್ರಭಾವ

ವೆಂಬ ಭಾವನೆಯಾಯಿತು. ಅವರ ಮೋಹಕವಾದ ಆದಿಭೌತಿಕ ಸುಧಾರಣೆಗಳಿಗೆ ಭಾರತೀಯರು ಮೊದಲೇ ಮನಸೋತಿದ್ದರು. ಎಲ್ಲರ ಅಂತಃಕರಣಗಳು ಪಶ್ಚಿಮದ ಕಡೆಗೇ ಹರಿಯ ಹತ್ತಿದವು. ಅನುಕರಣಕ್ಕೆ ಪ್ರಾರಂಭವಾಯಿತು. ಇಂಗ್ಲೀಷ ಅಭ್ಯಾಸಕ್ಕೆ ಮೊದಲಾಯಿತು. ಅವರ ಸಭ್ಯತೆಗೆ ಸ್ವಾಗತವಾಯಿತು. ಆದರೆ ಅದರೊಡನೆಯೇ ಪಾಶ್ಚಾತ್ಯರ ರಾಜ್ಯಶಾಸ್ತ್ರಗಳ ಅಧ್ಯಯನವೂ ಸುರುವಾಯಿತು. ಇಂಗ್ಲಂಡ, ಫ್ರಾನ್ಸ, ಅಮೇರಿಕಾ ದೇಶಗಳ ಇತಿಹಾಸದಲ್ಲಿ ಅಡಕವಾಗಿರುವ **ಸ್ವಾತಂತ್ರ್ಯ ಪ್ರೇಮ, ದೇಶಕ್ಕಾಗಿ ಮಾಡುವ ಬಲಿದಾನ, ನಮ್ಮ ದೇಶ, ನಮ್ಮ ರಾಷ್ಟ್ರ, ನಮ್ಮ ಶಾಸನ** ಇವೇ ಮೊದಲಾದ ರಾಷ್ಟ್ರೀಯ ಭಾವನೆಗಳು ಭಾರತೀಯರ ಹೃದಯದಲ್ಲಿಯೂ ಮೂಡಿದವು. ಭಾರತೀಯರೂ ಸ್ವಾತಂತ್ರ್ಯದ ಸ್ವಪ್ನಗಳನ್ನು ಕಾಣಹತ್ತಿದರು. ಭಾರತದಲ್ಲಿಯೂ ಸಾರ್ವಜನಿಕ ಜೀವನಕ್ಕೆ ಪ್ರಾರಂಭವಾಯಿತು. ಪಾಶ್ಚಾತ್ಯ ಪದ್ಧತಿಯಂತೆ **ಬ್ರಿಟಿಶ ಇಂಡಿಯನ್ ಅಸೋಸಿಏಶನ್, ಬಾಂಬೆ ಅಸೋಸಿಏಶನ್, ಸಾರ್ವಜನಿಕ ಸಭೆ, ಮಹಾಜನ ಸಭೆ, ಇಂಡಿಯನ್ ಅಸೋಸಿಏಶನ್** ಮೊದಲಾದ ಸಂಸ್ಥೆಗಳು ಜನ್ಮ ತಾಳಿದವು. ಭಾರತದ ಜೀವನವನ್ನೂ ರಾಜಕಾರಣವನ್ನೂ ಕುರಿತು ಚರ್ಚಿಸಹತ್ತಿದವು. ಸರಕಾರಕ್ಕೆ ಸೂಚನೆಗಳನ್ನು ಮಾಡಹತ್ತಿದವು. **ಇದೇ ಭಾರತೀಯ ಸ್ವಾತಂತ್ರ್ಯದ ಮೊದಲನೇ ಹೆಜ್ಜೆಯು.**

## ಎರಡನೆಯ ಹೆಜ್ಜೆ

ಬ್ರಿಟಿಶರ ಆಳಿಕೆಯು ಮುಂದೆ ಮುಂದೆ ಸಾಗಿದಂತೆ, ಅದರ ಸ್ವಸ್ವರೂಪವು ಪ್ರಕಟವಾಗಹತ್ತಿತು. ಇವರೇನೂ ದೇವತೆಗಳಲ್ಲ. ನಮ್ಮಂತೆ ಮಾನವರಿರುವರು. ಸ್ವಾರ್ಥಕ್ಕಾಗಿಯೇ ರಾಜ್ಯವನ್ನು ಆಳುತ್ತಿರುವರು.

ಭ್ರಮ ನಿರಸನ

ಎಂಬ ಮಾತುಗಳು ತಿಳಿಯ ಹತ್ತಿದವು. **ಭಾರತ ದಿಂದ ಇಂಗ್ಲಂಡಕ್ಕೆ ಹರಿಯುವ ಹೊನ್ನಿನ ಹೊಳೆಯ ಜ್ಞಾನವನ್ನು** ದೇ. ಭ. ದಾದಾ ಭಾಯಿಯವರು ಮಾಡಿಕೊಟ್ಟ ಕೂಡಲೆ ಸುಶಿಕ್ಷಿತರ ಕಣ್ಣುಗಳು ತೆರೆದವು. ಭಾರತದ ಬಡತನಕ್ಕೆ ಬ್ರಿಟಿಶರ ಆಳಿಕೆಯೇ ಕಾರಣವೆಂದು ಸ್ಪಷ್ಟವಾಗಿ ಹೋಯಿತು. ಆದರೆ ಬ್ರಿಟಿಶರ ಸಮತೆ, ಸ್ವಾತಂತ್ರ್ಯ, ಸುಧಾರಣೆಗಳ ಮೋಹವು ಇನ್ನೂ ತೊಲಗಿರಲಿಲ್ಲ. ಅದಕ್ಕೇನು ಬಹು ಕಾಲ ಬೇಕಾಗಲಿಲ್ಲ. **ಲಾರ್ಡ ಲಿಟನ್ನರ** ಆಳಿಕೆಯು ಬಂದಿತು. ರಾಣೀ ಜಾಹೀರನಾಮೆಯಲ್ಲಿ ದೇವರಿಗೆ ಮಾಡಿದ ಪ್ರಾರ್ಥನೆಗಳೆಲ್ಲ ಸುಳ್ಳಾಗಿ ಬ್ರಿಟಿಶರ ಮೂಲಸ್ವರೂಪವು ಪ್ರಕಟವಾಯಿತು. ರಾಣಿಯ ಜಾಹೀರ ನಾಮೆಯನ್ನು ಕುರಿತು '**ಹಿಂದೀ ಜನರ ಈ ವಿಷಯದಲ್ಲಿಯ ಆಶೆಗಳನ್ನು ಪೂರೈಸುವದು ಸಾಧ್ಯವಿದ್ದಿಲ್ಲವೆಂಬುದು ನಮ್ಮೆಲ್ಲ ರಿಗೂ ಗೊತ್ತೇ ಆಯಿತು. ಅವರಿಗೆ ಇಲ್ಲವೆಂದಾದರೂ ಹೇಳ ಬೇಕಿತ್ತು, ಇಲ್ಲವೆ ಮೋಸಗೊಳಿಸಬೇಕಿತ್ತು; ಇವೆರಡರಲ್ಲಿ ವಾಮಮಾರ್ಗವನ್ನೇ ನಾವು ಹಿಡಿದೆವು**' ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಆಶ್ವಾಸನಗಳು ಮುಂಜಾವಿನ ಮಂಜಿನಂತೆ ಮಾಯ ವಾದವು. ಆಗ ಎಲ್ಲರ ಕಣ್ಣುಗಳೂ ತೆರೆದವು. **ಲಿಟನ್ನರ** ದುಸ್ವಾಳಿಕೆಯ ಆಳಿಕೆಯೂ ನಮ್ಮನ್ನು ಚನ್ನಾಗಿ ಎಚ್ಚರಿಸಿತು. ಸಿವ್ಹಿಲ್ ಸರ್ವೀಸ ಪರೀಕ್ಷೆಯ ವಯೋಮರ್ಯಾದೆಯನ್ನು ಕಡಿಮೆಮಾಡಿದರು. ವೃತ್ತಪತ್ರ ಗಳ ಕಾಯಿದೆಯಿಂದ ಮುದ್ರಣಸ್ವಾತಂತ್ರ್ಯವು ಹರಣಮಾಡಲ್ಪಟ್ಟಿತು. ಮುಂಬಯಿ ಮದ್ರಾಸಗಳಲ್ಲಿ ಭೀಕರವಾದ ಬರಗಾಲಬಿದ್ದರೂ ಲಕ್ಷಾವಧಿ ಜನರ ಪ್ರಾಣಗಳು ಹೋದರೂ ಯೋಗ್ಯ ವ್ಯವಸ್ಥೆಯು ಆಗಲಿಲ್ಲ. ಹಸಿವೆ ಯಿಂದ ಕಂಗೆಟ್ಟ ರೈತರು ಬಂಡಾಯವನ್ನು ಹೂಡಿದರು. (ಬಂಡಾಯವು ಚಿಕ್ಕದಾದರೂ ಬ್ರಿಟಿಶರನ್ನು ನಡುಗಿಸಿಬಿಟ್ಟಿತು). ರಾಷ್ಟ್ರದಲ್ಲಿ ಹಾಹಾ ಕಾರವುಂಟಾಯಿತು. ತಾವೆಲ್ಲಿರುವೆವು? ತಮ್ಮ ಸ್ಥಾನವೇನು? ತಾವೆಂಥ ಪರೀಕ್ಷೆಗಳನ್ನು ಕೊಟ್ಟರೂ ತಮ್ಮನ್ನು ಕಡೆಗಣ್ಣಿನಿಂದ ಹೇಗೆ ನೋಡು

ವರು ? **ಎಂಬ ಮಾತುಗಳ ಅರಿವು ಉಂಟಾಯಿತು**. ಭಾರತೀಯರ ಭ್ರಮನಿರಸನವಾಯಿತು.

ಐ. ಸಿ. ಎಸ್. ಪರೀಕ್ಷೆಯ ವಿಷಯವಾಗಿ, ದಾದಾಭಾಯಿಯವರು ಅಖಂಡವಾಗಿ ೨೦ ವರ್ಷ ಚಳವಳಿಯನ್ನು ನಡೆಯಿಸಿದರೂ, ಸರಕಾರವು ಚಳ್ಳಹಣ್ಣು ತಿನಿಸುತ್ತಿರುವದನ್ನೂ ದಿನದಿನಕ್ಕೆ ಆ ಪ್ರಶ್ನೆಯನ್ನು ಬಿಗಿ ಮಾಡುತ್ತಿರುವದನ್ನೂ ಕಂಡು ರಾಷ್ಟ್ರವು ವಿಚಾರಕ್ಕೆ ಒಳಗಾಯಿತು. ಸರಕಾರದ ಅನ್ಯಾಯಗಳಾದರೋ ದಿನವೊಂದಕ್ಕೆ ಹೆಚ್ಚುತ್ತ ನಡೆದವು. ಚಳವಳಿಯು ಬೇಕೆಂದು ಅನಿಸಹತ್ತಿತು. ೧೮೭೬ ರಲ್ಲಿಯೇ ಬಬ್ರುದ್ದೀನ ತಯ್ಯಬಜಿ ಯವರು 'ಯಾವುದೊಂದು ಬಗೆಯ ರಾಜಕೀಯ ಆಂದೋಲನವನ್ನು ಧೈರ್ಯದಿಂದ ಹೂಡುವ ಕಾಲ ಬಂದೊದಗಿದೆ' ಎಂದು ಭವಿಷ್ಯವನ್ನು ಹೇಳಿದ್ದರು. ಭಾರತೀಯರ ಈ ಭಾವನೆಗಳಿಗೆ, **ಲಿಟನ್ನರು** ರೂಪ ಕೊಡಲು ಹಚ್ಚಿದರು. ಐ. ಸಿ. ಎಸ್. ಪರೀಕ್ಷೆಯ ವಯೋಮರ್ಯಾದೆ ಯನ್ನು ಕಡಿಮೆ ಮಾಡಿದ ಕೂಡಲೆ, ಸುರೇಂದ್ರನಾಥ ಬಾನರ್ಜಿಯವರು, ಲಾಹೋರ, ಆಗ್ರಾ, ದಿಲ್ಲಿ ಮೊದಲಾದ ಸ್ಥಳಗಳಲ್ಲಿ ತಿರುಗಾಡಿ ಜಾಗೃತಿ ಯನ್ನು ಮಾಡಿದರು. ಈ ರೀತಿಯಾಗಿ ಅಖಿಲ ಭಾರತೀಯ ಚಳವಳಿ ಯಾದುದು ಇದೇ ಮೊದಲು. ಆದರೂ ಅದರ ಉಪಯೋಗವೇನೂ ಆಗ ಲಿಲ್ಲ. ಆಗ ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಪ್ರಯತ್ನವು ಚಟುಪಟಿಕೆ ಗಳು ಅವಶ್ಯವೆಂದೂ, ಇದರ ಪರಿಣಾಮವು ಇಂಗ್ಲಂಡದ ಮೇಲೆಯೂ ಆಗಬೇಕಾದರೆ, ದೊಡ್ಡ ಪ್ರಮಾಣದಲ್ಲಿಯೇ ಆಂದೋಲನವನ್ನು ಹೂಡ ಬೇಕೆಂದೂ ಸುಶಿಕ್ಷಿತರಿಗೆ ಅನಿಸಹತ್ತಿತು.

ಆಂದೋಲನವು ಅವಶ್ಯ

ತರುಣರಲ್ಲಿ ಬಗೆಬಗೆಯ ಆಕಾಂಕ್ಷೆಗಳು ಉದಯವಾಗಿದ್ದವು. ಆಂದೋಲನವನ್ನು ಹೂಡದೆ ಯಾವ ಮಾತೂ ಸಿದ್ಧಿಸಲಾರದೆಂದು ಸ್ಪಷ್ಟ ವಾಗಿತ್ತು. ವಿಚಾರಕ್ಕೆ ಪ್ರಾರಂಭವಾಯಿತು. **ಲಾಲ ಮೋಹನ ಘೋಷರು** ಲಂಡನ್ನಿನಲ್ಲಿ ಮಾತನಾಡುವಾಗ ಲಾರ್ಡ ಲಿಟನ್ನರ ಆಳಿಕೆ ಯನ್ನು ನಿಷೇಧಿಸಿ, 'ನಾನು ಇದುವರೆಗೆ ವಿವೇಚಿಸಿದ ಎಲ್ಲ ಕುಂದು

ಕೊರತೆಗಳಿಗೆ ಮೂಲಾಧಾರದಂತಿರುವ ಮಾತೆಂದರೆ ಹಿಂದುಸ್ತಾನದ ಆಡಳಿತೆಯಲ್ಲಿ ಪ್ರಜೆಗಳಿಗೆ ಏನೂ ಪ್ರಾತಿನಿಧ್ಯವಿಲ್ಲ. ಯಾವುದೊಂದು ಬಗೆಯ ಪ್ರಜಾಪದ್ಧತಿಯ ಆಡಳಿತೆ ಬೇಕೆಂಬುದೇ ಸುಶಿಕ್ಷಿತರ ಕೂಗು' ಎಂದು ಸ್ಪಷ್ಟವಾಗಿಯೇ ಹೇಳಿದರು (೧೮೭೯). ಈ ಯುಗದ ಮುಖ್ಯ ನಾಯಕರಾದ ದಾದಾಭಾಯಿಯವರು ಸರಕಾರಕ್ಕೆ ಒಂದು ದೀರ್ಘವಾದ ಪತ್ರ ಬರೆದು 'ಬ್ರಿಟಿಶರ ವಚನಗಳು ಗಾಳಿ ಪಾಲಾದವು. ಈ ಎಲ್ಲ ಅಪಕೃತ್ಯಗಳ ಫಲವನ್ನು ಬ್ರಿಟಿಶರು ಅನುಭವಿಸಬೇಕಾಗುವದು. ಸುಶಿಕ್ಷಿತರ ಕೂಗಾಟವು ನಡೆದಿವೆ. ಅವರ ವಿಚಾರಗಳು ಇನ್ನೂ ಸ್ಥಿರವಾಗಿಲ್ಲ. ಹೀಗೆಯೇ ದುರ್ಲಕ್ಷಿಸಿದರೆ, ಕ್ಷೋಭ ಉಂಟಾಗಿ **ಭಾರತವು ನಾಶವಾಗಬಹುದು. ಇಲ್ಲವೆ ದಬ್ಬಾಳಿಕೆಯನ್ನು ನಡೆಯಿಸುವ ಆಳರಸರ ಅಧಿಕಾರವನ್ನು ನಾಶಮಾಡಬಹುದು**' ಎಂದು ಎಚ್ಚರಿಸಿದ್ದರು. ೧೮೮೦.

ಹೃದಯದ ಕೂಗು

ಈ ಎಲ್ಲ ವಿವರಣೆಯು ಭಾರತೀಯರ ಹೃದಯವನ್ನು ಚಿತ್ರಿಸುತ್ತದೆ. ಮುಂದಿನ ಯುಗದ ಗರ್ಭದ ಸ್ಪಷ್ಟವಾದ ಲಕ್ಷಣಗಳನ್ನು ಹೇಳುತ್ತದೆ. ಈ ಎಲ್ಲ ಭಾವನೆಗಳಿಗೆ ಮೂರ್ತಸ್ವರೂಪ ಕೊಟ್ಟು ಏಕಮುಖವಾಗಿ ಹೇಗೆ ಆಂದೋಲನವನ್ನು ಹೂಡಬೇಕೆಂಬುದೇ ಮುಖ್ಯ ಪ್ರಶ್ನೆಯಾಗಿತ್ತು. ಭಾರತೀಯ ಮುಖಂಡರು ಈ ದಿಶೆಯಲ್ಲಿಯೇ ಮುಂದುವರಿದರು. ೧೮೮೩ರಲ್ಲಿ ಕಲಕತ್ತೆಯಲ್ಲಿ ಸಭೆ ಸೇರಿತು. ಭಾರತೀಯರ ಹಕ್ಕುಗಳನ್ನು ದೊರಕಿಸುವದಕ್ಕಾಗಿ, ಭಾರತದಲ್ಲಿಯೂ ಇಂಗ್ಲಂಡದಲ್ಲಿಯೂ ಚಳವಳಿಯನ್ನು ನಡೆಯಿಸುವುದಕ್ಕೆ **ರಾಷ್ಟ್ರೀಯನಿಧಿ**ಯನ್ನು ಏರ್ಪಡಿಸಬೇಕೆಂದು ನಿಶ್ಚಯಿಸಿದರು. ಈ ಚಳವಳಿಯು ಅಖಿಲ ಭಾರತೀಯವಾಗಬೇಕೆಂಬ ಬುದ್ಧಿಯಿಂದ **ಹಿಂದೀ ರಾಷ್ಟ್ರೀಯ** ಪರಿಷತ್ತನ್ನು ಡಿಶೆಂಬರದಲ್ಲಿ ಕಲಕತ್ತೆಯಲ್ಲಿಯೇ ಕೂಡಿಸಿದರು. ಆ ಪರಿಷತ್ತಿನಲ್ಲಿ ಭಾರತೀಯರ ಹಕ್ಕುಗಳು, ಶಿಕ್ಷಣ, ಇವೇ ವಿಷಯಗಳು ಪ್ರಾಮುಖ್ಯವಾಗಿ ಚರ್ಚಿಸಲ್ಪಟ್ಟವು.

ಈ ಜಾಗೃತಿಯ ಪರಿಣಾಮವು ಅಧಿಕಾರಿಗಳ ಮೇಲೆಯೂ ಆಗದೆ ಹೋಗಲಿಲ್ಲ, ಅವರಿಗೆ ಈ ಜಾಗೃತಿಯು ಹಿಂದೆ ಬಂಡಾಯದ ವಾಸನೆಯು ಬಡಿಯಹತ್ತಿತು. ರೈತರ ಬಂಡೂ ಅವರ ಕಣ್ಣೆದುರಿಗೆ ಇದ್ದಿತು. ಜನರ ಅಂತಃಕರಣದಲ್ಲಿ ದಬ್ಬಲ್ಪಟ್ಟ ಭಾವನೆಗಳಿಗೆ ಹೊರಗೆ ಬರಲು ಯೋಗ್ಯವಾದ ಮಾರ್ಗವನ್ನು ಮಾಡಿಕೊಡದಿದ್ದರೆ, ಅವು ರಾಜ್ಯಕ್ರಾಂತಿಯ ರೂಪದಿಂದ ಸ್ಫೋಟವಾಗಬಹುದೆಂದೂ ಕ್ರಾಂತಿಕಾರಕ ವಿಚಾರಗಳಿಗೆ ಒಲಿಯದಂತೆ, ಅವುಗಳನ್ನು ಯೋಗ್ಯಮಾರ್ಗಕ್ಕೆ ಹಚ್ಚುವದು ಅವಶ್ಯವೆಂದೂ ಯುರೋಪಿಯನ್ನರಿಗೆ ಅನಿಸಹತ್ತಿತು. ಹೀಗೆ ಮಾಡುವದರಿಂದಲೇ ಸರಕಾರಕ್ಕೂ, ಪ್ರಜೆಗಳಿಗೂ ಹಿತವಾಗುವದೆಂದು ಬಗೆದು **ಸರ್ ಹ್ಯೂಮ ಸಾಹೇಬರು** ಕಾಂಗ್ರೆಸ್ಸಿನ ಘಟನೆಗೆ ಕೈಹಾಕಿದರು.

ಭಾರತೀಯರು ಸಶಸ್ತ್ರಬಂಡಾಯವನ್ನು ಹೂಡಬೇಕೆಂದು ಬಗೆದರೂ ಅಶಕ್ಯವಿತ್ತು. ಇದಲ್ಲದೆ ಸುಶಿಕ್ಷಿತರಲ್ಲಿ ಮಾತ್ರ ಜಾಗೃತಿಯಿದ್ದಿತು. ಸಾಮಾನ್ಯ ಜನತೆಯು ಇನ್ನೂ ನಿದ್ರಾವಸ್ಥೆಯಲ್ಲಿಯೇ ಇದ್ದಿತು.

**ಕಾಂಗ್ರೆಸ್ಸಿನ ಜನ್ಮ**

**ಹ್ಯೂಮ ಸಾಹೇಬರ** ವಿಚಾರ ಸರಣಿಯು ಆ ಕಾಲದ ನಾಯಕರಾದ ದಾದಾಭಾಯಿ ನವರೋಜಿ ಮೊದಲಾದವರಿಗೆ ಸಮಂಜಸವೆನಿಸಿತು. ದಾದಾಭಾಯಿಯವರಂತೂ ಈ ದಿಶೆಯಿಂದಲೇ ಮೊದಲಿನಿಂದ ಯತ್ನಿಸುತ್ತಿದ್ದರು. ಹ್ಯೂಮ ಸಾಹೇಬರು ಭಾರತದ ಎಲ್ಲ ಮುಖಂಡರೊಡನೆ ವಿಚಾರವಿನಿಮಯ ಮಾಡಿದರು. ಆ ಕಾಲದ **ವ್ಹಾಯಿಸರಾಯರಾದ ಲಾರ್ಡ ಡಫರಿನ್**ರ ಸಲಹೆಗಳನ್ನು ಕೇಳಿಕೊಂಡರು. ಕಾಂಗ್ರೆಸ್ಸಿನ ಕಾರ್ಯಕ್ಕೆ ಪ್ರಾರಂಭಿಸಿದರು. ೧೮೮೫ ರ ಮಾರ್ಚಿನಲ್ಲಿ ಒಂದು ಪ್ರಕಟನೆಯನ್ನು ತೆಗೆದರು. ಅದರಲ್ಲಿ ಕಾಂಗ್ರೆಸ್ಸಿನ ಉದ್ದೇಶವನ್ನು 'ರಾಷ್ಟ್ರೀಯ ಏಳಿಗೆಗಾಗಿ ದುಡಿಯುತ್ತಿರುವ ಎಲ್ಲ ಕಾರ್ಯಕರ್ತರಲ್ಲಿ ಪರಸ್ಪರ ಪರಿಚಯವನ್ನುಂಟುಮಾಡುವದು. ಮತ್ತು ಮರುವರ್ಷದಲ್ಲಿ ಕೈಕೊಳ್ಳಬೇಕಾದ ರಾಜಕೀಯ ಚಟುವಟಿಕೆಗಳನ್ನು ಕುರಿತು ನಿಶ್ಚಯಮಾಡುವದು.' ಎಂದು ಕಾಣಿಸಿದ್ದರು. ಮತ್ತು ಪುಣೆಯಲ್ಲಿ ಈ ಕಾಂಗ್ರೆಸ್ಸು ಸೇರುವದು. ಇಂಗ್ಲಿಷ

ಬಲ್ಲ ಎಲ್ಲ ಭಾರತೀಯರು ಪರಿಷತ್ತಿಗೆ ಬರಬೇಕೆಂದು ಆಮಂತ್ರಿಸಿ, ಪ್ರತಿಯೊಂದು ಪ್ರಾಂತಕ್ಕೂ ಪ್ರಾತಿನಿಧ್ಯವನ್ನು ನಿಶ್ಚಿತಪಡಿಸಿದ್ದರು. ಆದರೆ ಪ್ಲೇಗಿನ ಮೂಲಕ ಪುಣೆಯಲ್ಲಿ ಕೂಡಲಿಲ್ಲ. ಮುಂಬಯಿಯಲ್ಲಿ ಕಲಕತ್ತೆಯ ನಾಮಾಂಕಿತ ಬ್ಯಾರಿಸ್ಟರರಾದ **ಉಮೇಶ್ಚಂದ್ರ** ಬ್ಯಾನರ್ಜಿಯವರ ಅಧ್ಯಕ್ಷತೆಯಲ್ಲಿ **ಕಾಂಗ್ರೆಸ್ಸು ಜನ್ಮತಾಳಿತು.** ಭಾರತೀಯ ಚಳವಳಿಯನ್ನು ಮಾಡುವ ಸಂಘವಾಯಿತು. **ಇಲ್ಲಿಂದಲೆ ರಾಷ್ಟ್ರೀಯತ್ವದ ಬೆಳವಣಿಗೆಗೆ ಪ್ರಾರಂಭ.** ಭಾರತದ ಮುಖಂಡರೆಲ್ಲರೂ ಒಂದೆಡೆ ಕುಳಿತು ಅಖಂಡ ಭಾರತದ ವಿಷಯಕ್ಕೆ ಜಾತಿ, ಮತ, ಪಂಥಗಳ ಭೇದವಿಲ್ಲದೆ ವಿಚಾರ ಮಾಡಹತ್ತಿದರು. **ಭಾರತದ ನವಯುಗಕ್ಕೆ ಪ್ರಾರಂಭವಾಯಿತು. ಇದೇ ಸ್ವಾತಂತ್ರ್ಯದ ಎರಡನೆಯ ಹೆಜ್ಜೆಯು.**

## ಮೂರನೆಯ ಹೆಜ್ಜೆ

ಭಾರತೀಯರ ರಾಷ್ಟ್ರೀಯ ಆಕಾಂಕ್ಷೆಗಳಿಗೆ ಜನ್ಮತಾಳಿದ ಕಾಂಗ್ರೆಸ್ಸು ಸಾರ್ವಜನಿಕ ಜೀವನದಲ್ಲಿ ಮಹತ್ವವಾದ ಪರಿವರ್ತನೆಯನ್ನುಂಟುಮಾಡಿದೆ. ಮೊದಮೊದಲು ಸರಕಾರದ ಮನವೊಲಿಸಿ, ಅವರ ಪ್ರೇಮವನ್ನು ಸಂಪಾದಿಸಿ, ಕಾರ್ಯಸಾಧಿಸುವ ಶಾಂತಾ ಸಮ್ಮತಿಯ ಮಾರ್ಗದಿಂದ ಮುಂದರಿಯುತ್ತ ವ್ಹಾಯಿಸರಾಯ, ಗವ್ಹರ್ನರ, ಸರಕಾರೀ ಅಧಿಕಾರಿಗಳ ಕೃಪಾಛತ್ರದಲ್ಲಿಯೇ ಬೆಳೆಯಿತು. ಆದರೆ ಈ ಪರಿಸ್ಥಿತಿಯು ಕೊನೆಯವರೆಗೂ ಉಳಿಯುವದು ಶಕ್ಯವಿದ್ದಿಲ್ಲ. ಪರಸ್ಪರ ವಿರುದ್ಧ ಗುಣಧರ್ಮಗಳುಳ್ಳ ಬೆಂಕಿ ನೀರುಗಳು ಒಂದೆಡೆ ಕೂಡುವದು ಶಕ್ಯವಿದೆಯೇ? ಇದು ಅಸ್ವಾಭಾವಿಕವು. ಸಾರ್ವಜನಿಕ ಮತಗಳ ಪ್ರತಿನಿಧಿತ್ವವನ್ನು ವಹಿಸಿದ ಸಂಸ್ಥೆಯು, ಪರಕೀಯ ಶಾಸನ ಸಂಸ್ಥೆಯ ನೆರವಿನಿಂದ ಎಂದಾದರೂ ಬೆಳೆಯುವದು ಶಕ್ಯವಿದೆಯೇ? ಪರಕೀಯ ಶಾಸನ ಸಂಸ್ಥೆಯು ಭೌತಿಕ ದೃಷ್ಟಿಯಿಂದ ತನ್ನ ಸರ್ವಾಧಿಕಾರದೊಡನೆ ನಡೆಯುತ್ತದೆ. ಆದರೆ

ಸಾರ್ವಜನಿಕ ಜೀವನವು ನೈತಿಕ ಬಲದಿಂದ ಮುಂದೆ ಸಾಗುತ್ತದೆ. ಕಾಂಗ್ರೆಸ್ಸು ಜನತೆಯ ಪ್ರತಿನಿಧಿತ್ವವನ್ನು ಹೆಚ್ಚು ಹೆಚ್ಚು ವಹಿಸಿದಂತೆ ಅಧಿಕಾರಿಗಳು ಅದರಿಂದ ಕಾಳ್ಜೆಗೆಯುವದು ಸ್ವಾಭಾವಿಕ. ಕಾಂಗ್ರೆಸ್ಸು ಜನತೆಯ ಪ್ರೇಮದಿಂದಲೇ ಮುಂದೆ ಸಾಗಿತು. ಮೆಲ್ಲಮೆಲ್ಲನೆ ತನ್ನ ಬೇಡಿಕೆಗಳನ್ನು ನಿರ್ಭಯವಾಗಿ ಸ್ಪಷ್ಟಶಬ್ದಗಳಲ್ಲಿ ಮಂಡಿಸ ಹತ್ತಿತು, ಆಡಳಿತೆಯೊಳಗಿನ ದೋಷವನ್ನು ತೋರಿಸಹತ್ತಿತು. ಅನ್ಯಾಯಗಳಿಗಾಗಿ ಮುನಿಯಹತ್ತಿತು.

ಈ ಯುಗದ ನಾಯಕರಾದ ದಾದಾಭಾಯಿಯವರಿಗೂ ಅವರ ಅನುಯಾಯಿಗಳಿಗೂ ಬ್ರಿಟಿಶ ಜನಾಂಗದಲ್ಲಿಯೂ ಸಾಮ್ರಾಜ್ಯದಲ್ಲಿಯೂ ನ್ಯಾಯದೇವತೆಯಲ್ಲಿಯೂ ಅಖಂಡವಾದ ಪ್ರೇಮ. ಭಕ್ತಿ, ವಿಶ್ವಾಸ, ಶ್ರದ್ಧೆಗಳು. ತಮ್ಮ ಬೇಡಿಕೆಗಳು ಸರಿಯಾದ ರೀತಿಯಲ್ಲಿ ಇಂಗ್ಲಂಡ ದವರೆಗೆ ಮುಟ್ಟಿದರೆ ತಮಗೆ ನ್ಯಾಯವು ಸಿಕ್ಕೇಸಿಗುವದು ಎಂದು ಅವರ ದೃಢವಾದ ನಂಬಿಕೆ. ಅವರ ಕೈಯಲ್ಲಿಯೇ ಸರ್ವ ಅಧಿಕಾರವು ಇದ್ದು, ಅದನ್ನು ನಾವು ವಿನಯದಿಂದಲೇ ಅವರ ಮನಸ್ಸು ನೋಯಿಸದೆ, ಅವರ ಮನವಲಿಸಿಯೇ ದೊರಕಿಸಬೇಕು. ಅವರು ನ್ಯಾಯಪ್ರಿಯರೂ ಸ್ವಾತಂತ್ರ್ಯಪ್ರೇಮಿಗಳೂ ಇರುವದರಿಂದ ಅವರ ತಪ್ಪುಗಳನ್ನು ಅವರಿಗೆ ತೋರಿಸಿದರೆ, ತಿದ್ದಿಕೊಳ್ಳುವರು. ಆದುದರಿಂದ ನಮ್ಮ ಬೇಡಿಕೆಗಳನ್ನು ವಿನಯದಿಂದಲೂ ಪ್ರೇಮದಿಂದಲೂ ಸಾಧಿಸಿಕೊಳ್ಳಬೇಕೆಂಬ ಬಿನ್ನಹವೇ ಇವರ ಧೋರಣವಾಗಿತ್ತು. ಈ ಧೋರಣದಿಂದಲೇ ಕಾಂಗ್ರೆಸ್ಸು ೨೦ ವರ್ಷ ನಡೆಯಿತು. ಬಿನ್ನಹಗಳು, ಶಿಷ್ಟ ಮಂಡಳಗಳು, ಸಾರ್ವಜನಿಕ ಸಭೆಗಳು, ವೃತ್ತಪತ್ರಗಳು ಇವೇ ಈ ಕಾಲದ ಚಳವಳಿಯ ಸಾಧನಗಳಾಗಿದ್ದವು. ಈ ಕಾಲದ ಕಾಂಗ್ರೆಸ್ಸಿನ ಗೊತ್ತುವಳಿಗಳನ್ನು ನೋಡಿದರೆ, ಬಿನ್ನಹದ ಹೊರ್ತು ಮತ್ತೊಂದು ಮಾತೇ ಕಾಣುವದಿಲ್ಲ. ಇಷ್ಟೆಲ್ಲ ನಡೆದರೂ ರಾಜಕಾರಣದಲ್ಲಿ ಮಹತ್ವವಾದ ಯಾವ ಬದಲಾವಣೆಗಳೂ ಆಗಲಿಲ್ಲ.

**ಬಿನ್ನಹವೇ ಸಾಧನ**

ಆದರೆ ಆಳರಸರ ಉಪೇಕ್ಷೆಯ ಧೋರಣವೂ ವರ್ಣದ್ವೇಷವೂ

ಅನ್ಯಾಯಗಳೂ ಜನರಲ್ಲಿ ನಿರಾಶೆಯನ್ನುಂಟುಮಾಡಿದವು. ತರುಣರಲ್ಲಿ ಹೊಸ ಹೊಸ ಆಕಾಂಕ್ಷೆಗಳು ಹುಟ್ಟಹತ್ತಿದವು. ಕಾಂಗ್ರೆಸ್ಸಿನ ಶಕ್ತಿಯೂ ಬೆಳೆದಿತ್ತು, ರೆಕ್ಕೆಗಳು ಒಡೆದಿದ್ದವು. ಪುಚ್ಛಬಲಿತ ಪಕ್ಷಿಯು ಮುಕ್ತಗಗನದಲ್ಲಿ ಹಾರಬಯಸುವಂತೆ, ಭಾರತೀಯರ ಮನಸ್ಥಿತಿಯಾಗಿತ್ತು. ಯಾವ ಯಾವ ಪಕ್ಷಿಗಳು ಸಚೇತನಗೊಂಡು ಹಾರಲು ಬಯಸಿದವೋ ಅವುಗಳ ಪಂಜರಗಳು ಭದ್ರಮಾಡಲ್ಪಟ್ಟವು. ಹಲವು ಪಕ್ಷಿಗಳ ರೆಕ್ಕೆಗಳು ಕತ್ತರಿಸಲ್ಪಟ್ಟವು. ಆದರೆ ಜನರ ಅಂತಃಕರಣದಲ್ಲಿ ಮೂಡಿದ ಸ್ವಾತಂತ್ರ್ಯದ ಕಲ್ಪನೆಯನ್ನು ಹತ್ತಿಕ್ಕುವದು ಅಶಕ್ಯವೆಂದು ಇತಿಹಾಸವು ಸಾರುತ್ತದೆ. ಉಂಟಾದ ಸ್ವಾತಂತ್ರ್ಯಪ್ರೇಮವನ್ನೂ ಅದರ ನೈತಿಕಬಲವನ್ನೂ ಯಾವ ಶಕ್ತಿಯೂ ತಡೆಯಲಾರದು.

ಭಾರತದ ಉಷಃಕಾಲ

ಇದೇ ಸುಮಾರಿಗೆ ಟಿಳಕರಿಂದ ಪ್ರಾರಂಭಿಸಲ್ಪಟ್ಟ ಗಣೇಶೋತ್ಸವ, ಶಿವಾಜಿ ಉತ್ಸವಗಳು ಭಾರತವನ್ನೆಲ್ಲ ವ್ಯಾಪಿಸಿ, ಅದ್ಭುತವಾದ ಜಾಗೃತಿಯನ್ನುಂಟುಮಾಡಿದವು. ಜನರಲ್ಲಿ **ಸ್ವಸಂಸ್ಕೃತಿ, ಸ್ವದೇಶ, ಸ್ವರಾಷ್ಟ್ರಗಳ ಭಾವನೆಗಳನ್ನು** ಉದ್ದೀಪ್ತಗೊಳಿಸಿದವು. ಭಾರತೀಯರಲ್ಲಿ ಬೆಳೆಯುತ್ತಿರುವ ಈ ರಾಷ್ಟ್ರೀಯತ್ವವನ್ನು ಸರಕಾರವು ಸಹಿಸದಾಯಿತು. ದಬ್ಬಾಳಿಕೆಯನ್ನು ಕೈಕೊಂಡಿತು; ಇದರಿಂದ ಬೆಂಕಿಯಲ್ಲಿ ತುಪ್ಪವನ್ನು ಸುರುವಿದಂತಾಯಿತು. ೧೮೯೭ರ ಭೀಕರವಾದ ಬರಗಾಲ, ಪ್ಲೇಗಿನ ಹಾವಳಿ, ಸೈನಿಕರ ಅತ್ಯಾಚಾರ, ರ‍್ಯಾಂಡಸಾಹೇಬರ ಕೊಲೆ, ಲೋಕಮಾನ್ಯರ ರಾಜದ್ರೋಹದ ಖಟ್ಲೆ, ಗಡಿಪಾರು, ದಿಲ್ಲಿಯ ದರ್ಬಾರಿನಲ್ಲಿ ಭಾರತೀಯರಿಗಾದ ಅಪಮಾನ ಇವುಗಳಿಂದ ಭಾರತದ ರಾಜಕೀಯ ವಾತಾವರಣವು ಪ್ರಕ್ಷುಬ್ಧವಾಗಿತ್ತು. ಕಾಂಗ್ರೆಸ್ಸು ತನ್ನ ಬಾಲ್ಯವನ್ನು ಕಳೆದು ಕಿಶೋರಾವಸ್ಥೆಯಲ್ಲಿ ಕಾಲಿಡುತ್ತಿತ್ತು. ರಾಷ್ಟ್ರೀಯತ್ವಕ್ಕೆ ಒಂದು ಬಗೆಯಿಂದ ಬಂಗಾಲವೇ ತವರುಮನೆಯು. ಅದು ಭಾರತದಲ್ಲಿ ಎಲ್ಲಕ್ಕೂ ಮುಂದಿರುವದು ಸ್ವಾಭಾವಿಕವಿದೆ. ಇದು ಸರಕಾರಕ್ಕೆ ಸಹನವಾಗಲಿಲ್ಲ. ಅದರ ಸ್ವಾತಂತ್ರ್ಯದ ಭಾವನೆಯನ್ನು ಕುಂದಿಸುವದಕ್ಕಾಗಿ, **ವ್ಹಾಯಿಸರಾಯನಾದ ಲಾರ್ಡ್ ಕರ್ಝನನು** ಬಂಗಾಲವನ್ನು ಇಬ್ಭಾಗ

ಮಾಡಿದನು. ಈ ಹೊಡತವು ಬಂಗಾಲದ ಮರ್ಮಕ್ಕೆ ಬಿದ್ದಿತು. ಬಂಗಾಲವು ಪ್ರಕ್ಷುಬ್ಧವಾಯಿತು. ರಾಷ್ಟ್ರದಲ್ಲಿ ದಿವ್ಯತೇಜಸ್ಸು ಉತ್ಪನ್ನವಾಯಿತು. ಯುಗಯುಗಾಂತರಗಳಿಂದ ಮಲಗಿದ ಭಾರತವು ಜಾಗೃತವಾಗಿ ಸಿಂಹನಾದವನ್ನು ಮಾಡಿತು. ಬಂಗಾಲದ ಅಪಮಾನವೇ ರಾಷ್ಟ್ರದ ಅಪಮಾನವೆಂಬ ಭಾವನೆಯಿಂದ ಅಖಂಡಭಾರತವೇ ಎದ್ದು ನಿಂತಿತು. ದೃಢವಾದ ರಾಷ್ಟ್ರೀಯ ಜಾಗೃತೆಯಿಂದ ಸಂಘಟಿತವಾಗಿ **ಭಾರತವು ಆಳರಸರ ವಿರುದ್ಧವಾಗಿ ಪ್ರತಿಕಾರವನ್ನು ಮಾಡಲು ನಿಂತುದು ಇದೇ ಮೊದಲು.**

ವಂಗಭಂಗವು ರಾಷ್ಟ್ರದಲ್ಲಿ ವಿಲಕ್ಷಣವಾದ ಶಕ್ತಿಯನ್ನುಂಟು ಮಾಡಿತು. ಉತ್ಪಾದಕ ಶಕ್ತಿಯದೃಷ್ಟಿಯಿಂದ ಭಾರತದಲ್ಲಿ ಇಂತಹ ಯುಗವೇ ಬಂದಿಲ್ಲವೆಂದು ಹೇಳಬಹುದು. ರಾಷ್ಟ್ರದಲ್ಲಿ ಉಂಟಾದ ಈ ತೇಜವು ರಾಷ್ಟ್ರದ ವಿವಿಧಾಂಗಗಳಲ್ಲಿ ನವಚೈತನ್ಯವನ್ನುಂಟುಮಾಡಿತು. ಸಾಹಿತ್ಯ, ಕಲೆ, ವಿಜ್ಞಾನ ಮೊದಲಾದ ಎಲ್ಲ ಶಾಖೆಗಳಲ್ಲಿಯೂ ಚೈತನ್ಯದ ಸಂಚಾರವಾಯಿತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ **ಭಾರತದ ಪುನರುತ್ಥಾನ ಮಾಡಿತು.**

ಬಿನ್ನಹ, ಬೇಡಿಕೆಗಳಿಂದ ಬೇಸತ್ತ ರಾಷ್ಟ್ರಕ್ಕೆ ವಂಗಭಂಗವು ಬಹಿಷ್ಕಾರ ಶಸ್ತ್ರವನ್ನು ಕೊಟ್ಟಿತು. ವಂಗಭಂಗದಿಂದ ಉಂಟಾದ ಶಕ್ತಿಯನ್ನು ಉಪಯೋಗಿಸಿಕೊಳ್ಳಲು ಆ ಕಾಲದ ಮುಖಂಡರಾದ **ಗೋಖಲೆ, ಸುರೇಂದ್ರನಾಥ ಬ್ಯಾನರ್ಜಿ, ಮೇಥಾ** ಮೊದಲಾದವರು ಶಕ್ತರಾಗಲಿಲ್ಲ. ಯಾವಾಗಲೂ ವಿನಯದಿಂದ ಬೇಡಿಕೊಳ್ಳುವ ಧೋರಣ, ಸ್ವಾರ್ಥತ್ಯಾಗದ ಅಭಾವ, ಕರ್ತೃತ್ವಶೂನ್ಯತೆ, ಅವಶ್ಯಕತೆಗಿಂತ ಹೆಚ್ಚಾದ ಶಾಂತ ಸ್ವಭಾವಗಳ ಈ ಮುಖಂಡರಿಂದ ತರುಣರನ್ನು ಸಮಾಧಾನಗೊಳಿಸುವದಾಗಲಿಲ್ಲ. ಅವರು ಬೇರೆ ದಾರಿಯನ್ನು ಹಿಡಿದರು. ಮುಂದಾಳುಗಳು ಮುಂದುಗಾಣದಾದರು. ದಬ್ಬಾಳಿಕೆಯಿಂದ ವ್ಯಾಕುಲವಾದ ಹೃದಯಗಳು ಕ್ರಾಂತಿಯನ್ನು ಸ್ವಾಗತಿಸಿದವು. ಕ್ರಾಂತಿಕಾರಕ ಪಕ್ಷದ ರೂಪದಿಂದ

**ಕ್ರಾಂತಿಕಾರಕರ ಉದಯ**

ಆ ತೇಜವು ಹೊರಹೊಮ್ಮಿತು. ಆದರೆ ಇವರಿಗೆ ಕಾರ್ಯಕ್ರಮ ವಿರಲಿಲ್ಲ. ಜನಬೆಂಬಲವಂತೂ ಶಕ್ಯವಿದ್ದಿಲ್ಲ. ಆದರೆ ಅವರ **ಉಜ್ವಲವಾದ ದೇಶ ಭಕ್ತಿ, ಆತ್ಮಬಲಿದಾನ, ಭಾವಾವೇಶಗಳಿಗಾಗಿ** ಶತ್ರುಗಳು ಕೂಡ ಹೊಗಳಬೇಕಾಯಿತು.

ಆದರೆ ಮಂದ ಪಕ್ಷೀಯರಂತೆಯೇ ಈ ಪಕ್ಷವೂ ಅವ್ಯವಹಾರ್ಯ ಕಾರ್ಯಕ್ರಮಗಳ ಮೂಲಕ, ರಾಷ್ಟ್ರದ ಮುಂದಾಳುತನವನ್ನು ವಹಿಸಲು ಸಮರ್ಥವಿದ್ದಿಲ್ಲ. ಈ ಎರಡೂ ಪಕ್ಷಗಳ ಗುಣಗಳ ಮಿಶ್ರಣವುಳ್ಳ

ವೀರ ಪಕ್ಷದ ಉದಯ

**ವೀರ ಪಕ್ಷವು** ರಾಜಕೀಯ ಕ್ಷಿತಿಜದ ಮೇಲೆ ಬಂದಿತು. ರಾಷ್ಟ್ರದ ಆಕಾಂಕ್ಷೆಗಳನ್ನರಿತುಕೊಂಡು ರಾಷ್ಟ್ರದ ಶಕ್ತಿಯನ್ನು ಪೂರ್ಣ ಉಪಯೋಗಿಸಿಕೊಳ್ಳುವ ಸಾಮರ್ಥ್ಯವುಳ್ಳ ಕುಶಲರಾದ ವೀರರು ರಾಷ್ಟ್ರದಲ್ಲಿ ಒಬ್ಬರೇ ಇದ್ದರು. ಅವರೇ ಈ ಪಕ್ಷದ ನಾಯಕರಾಗಿದ್ದರು. ರಾಷ್ಟ್ರವನ್ನು ಕುಣಿಯ ಹಚ್ಚಿದರು. **ಇವರೇ ಲೋಕಮಾನ್ಯರು ಎರಡನೇ ಯುಗದ ನಾಯಕರು.**

ಈ ಪಕ್ಷದಲ್ಲಿ ದೇ. ಭ. ಲಾಲಾ ಲಜಪತರಾಯರು, ಬಿಪಿನಚಂದ್ರ ಪಾಲ, ಅರವಿಂದಘೋಷ, ಶಿಶಿರಕುಮಾರಘೋಷ ಮೊದಲಾದವರಿದ್ದರು. ಕ್ರಾಂತಿಕಾರಕರ ದೇಶಭಕ್ತಿಯ ಬಗ್ಗೆ ಈ ಪಕ್ಷಕ್ಕೆ ಪೂರ್ಣ ಆದರವಿತ್ತಾದರೂ, ಕಾರ್ಯಕ್ರಮವು ಮಾನ್ಯವಿರಲಿಲ್ಲ. ಲೋಕಮಾನ್ಯರು ಕ್ಷಿತಿಜದ ಮೇಲೆ ಬಂದೊಡನೆಯೇ ಹಿಂದಿನ ಮುಂದಾಳುಗಳು ತೇಜೋಹೀನರಾದರು. ನವಯುಗವೇ ಪ್ರಾರಂಭವಾಯಿತು. ರಾಷ್ಟ್ರದ ಮನೋವೃತ್ತಿಯೇ ಬಯಲಾಯಿತು. ಧ್ಯೇಯವಾದಿಗಳಾದ ತರುಣರು ಮುಂದೆ ಬಂದರು. ಸಾಮ್ರಾಜ್ಯವು ಸ್ಥಿರವಾಗಬೇಕೆಂಬುದು ಬದಲಾಗಿ ಭಾರತವು ಸ್ವತಂತ್ರವಾಗಬೇಕೆಂಬ ಧ್ಯೇಯವು ಮುಂದೆ ಬಂದಿತು. ಸರಕಾರದ ಸ್ಫೂರ್ತಿ ಸಹಕಾರಗಳ ಪ್ರೇರಣೆಯ ಬದಲಾಗಿ, ಉಚ್ಚವಾದ ಧ್ಯೇಯದಿಂದ ರಾಷ್ಟ್ರವು ಉತ್ತೇಜಿತವಾಯಿತು. ಸರಕಾರಿ ನೌಕರಿಗಳ

ೋಹವು ಮಾಯವಾಗಿ ಅವುಗಳ ಬಗ್ಗೆ ತಿರಸ್ಕಾರವು ತಲೆದೋರಿತು. ್ರಿಟೀಶ್ ಪಾರ್ಲಿಮೆಂಟೇ ನಮ್ಮ ಕಾಮಧೇನುವೆಂಬುದು ಹೋಗಿ, ್ವಾತಂತ್ರ್ಯಪ್ರಿಯವಾದ ಭಾರತೀಯ ಜನತೆಯೇ ಭಾರತೀಯರ ಮುಖ್ಯ ್ಯವತವಾಯಿತು. ಮೊದಲಿನವರ ಕಣ್ಣುಗಳು ಇಂಗ್ಲಂಡದ ಕಡೆಗೆ ದ್ದರೆ ಇವರ ಕ್ಷೇತ್ರವು ಭಾರತ. ಅವರ ಸಾಧನವು ಭಿಕ್ಷಾಂದೇಹಿ. ವರ ಸಾಧನವು ಸ್ವಾವಲಂಬನ.

ನವಶಕ್ತಿ, ನವವಿಚಾರ, ನವೀನಕಾರ್ಯಕ್ರಮಗಳಿಂದ ರಾಷ್ಟ್ರೀಯ ಕ್ಷವು ರಾಷ್ಟ್ರವನ್ನು ತನ್ನ ಕಡೆಗೆ ಮಾಡಿಕೊಂಡಿತು. ಇದರ ಪ್ರಭಾವದ ುಂದೆ ಮಂದಪಕ್ಷವು ತೇಜೋಹೀನವಾಯಿತು. ಆದರೆ ರಾಷ್ಟ್ರದ ೂತ್ರಗಳು ಇವರ ಕೈಯಲ್ಲಿಯೇ ಇದ್ದುವು. ೧೯೦೬ ಕಾಂಗ್ರೆಸ್ಸು ದಾದಾ ಾಯಿಯವರ ಅಧ್ಯಕ್ಷತೆಯಲ್ಲಿ ಕಲಕತ್ತೆಯಲ್ಲಿ ನೆರೆಯಿತು. ತಮ್ಮ ವತ್ತು ವರ್ಷದ ಅನುಭವವನ್ನು ಅಧ್ಯಕ್ಷರು, **ಭಾರತದ ಸರ್ವ ೋಗಗಳಿಗೆ ಸ್ವರಾಜ್ಯವೊಂದೇ ಉಪಾಯವೆಂದೂ** ಅದಕ್ಕಾ ಯೇ ಎಲ್ಲರೂ ಪ್ರಯತ್ನಿಸಬೇಕೆಂದೂ ಹೇಳಿದರು. ಅದಕ್ಕೆ ಬೇಕಾಗುವ ್ಯಾಗಕ್ಕೆ ಸಿದ್ಧರಾಗಬೇಕೆಂದೂ ಸಾರಿದರು. ಈ ಸ್ವರಾಜ್ಯದ ಮಂತ್ರೋಪ ೇಶವು, ರಾಷ್ಟ್ರಕ್ಕೆ ದಿವ್ಯ ತೇಜಸ್ಸನ್ನು ಕೊಟ್ಟಿತು. **ಸಾಮ್ರಾಜ್ಯಾಂತ ್ಗತ ಸ್ವರಾಜ್ಯವೇ ಧ್ಯೇಯ**ವೆಂದು ರಾಷ್ಟ್ರವು ನಿಶ್ಚಯಿಸಿತು.

ಾಮ್ರಾಜ್ಯಾಂತರ್ಗತ ರಾಜ್ಯವೇ ಧ್ಯೇಯ

ಈ ಸ್ವರಾಜ್ಯ ಸಾಧನೆಗೆ ಬಹಿಷ್ಕಾರ, ಸ್ವದೇಶಿ, ರಾಷ್ಟ್ರೀಯ ಶಿಕ್ಷಣಗಳೇ ಸಾಧನವೆಂದು ಗೊತ್ತು ಮಾಡಿ, ರಾಷ್ಟ್ರವನ್ನು ರಾಷ್ಟ್ರೀಯ ಪಕ್ಷಕ್ಕೆ ಒಪ್ಪಿಸಿ, ದಾದಾಭಾಯಿಯವರು ತಮ್ಮ ಪಕ್ಷದ ಫ್ಗಾತ್ ಮಂದಪಕ್ಷದ ಯುಗವನ್ನು ಮುಗಿಸಿದರು. ರಾಷ್ಟ್ರವು ್ಚಿತವಾದ ಧ್ಯೇಯದಿಂದ ಭಿಕ್ಷಾಂದೇಹಿ ಸಾಧನವನ್ನು ಬಿಟ್ಟು ್ವಾವಲಂಬನ ಶಸ್ತ್ರವನ್ನು ಹಿಡಿದುಕೊಂಡು ಹೋರಾಟಕ್ಕೆ ಸಿದ್ಧ ಾಯಿತು. **ಇದೇ ಸ್ವಾತಂತ್ರ್ಯದ ಮೂರನೆಯ ಹೆಜ್ಜೆಯು.**

# ನಾಲ್ಕನೆಯ ಹೆಜ್ಜೆ

ಮಂದ ಹಾಗು ವೀರಪಕ್ಷಗಳು ರಾಷ್ಟ್ರದ ಪ್ರಗತಿಪಥದಲ್ಲಿಯ ಎರಡು ಮೆಟ್ಟಲುಗಳಾಗಿವೆ. ಒಂದೇ ಆಂದೋಲನದ ಎರಡು ಭಾಗಗಳಿವೆ. ದಿವ್ಯಜ್ಯೋತಿಯ ಎರಡು ಪರಿಣಾಮಗಳಂತಿವೆ. ಮೊದಲಿನದು ಪ್ರಕಾಶದ ದ್ಯೋತಕವಾಗಿದೆ; ಎರಡನಯದು, ಊಷ್ಣತೆಯ ದರ್ಶಕವಾಗಿದೆ. ಮೊದಲಿನದು ಕೇವಲ ಬುದ್ಧಿಪ್ರಧಾನ, ಎರಡನೆಯದು ಬುದ್ಧಿಯುಕ್ತವಾದ ಭಾವಪ್ರಧಾನ.

ರಾಷ್ಟ್ರದ ಮೊದಲಿನ ಅವಸ್ಥೆಯಲ್ಲಿ ಭೂಮಿಯನ್ನು ಅಗಿದು ಹಸಮಾಡಿ ಬೀಜವನ್ನು ಬಿತ್ತಲು ಬಹಳ ತಾಳ್ಮೆಯೂ ಶಾಂತತೆಯೂ ಆವಶ್ಯಕವಿದೆ. ಮಂದಪಕ್ಷವು ಈ ಮಹತ್ವದ ಕಾರ್ಯವನ್ನು ಮಾಡಿತು. ಮೊಳಕೆಯೊಡೆದ ಸಸಿಯನ್ನು ರಕ್ಷಿಸುವ ಕಾರ್ಯಕ್ಕೆ ಕ್ಷತ್ರಿಯರೇ ಬೇಕು. ಈ ಕಾರ್ಯವನ್ನು ವೀರಪಕ್ಷವು ವಹಿಸಿತು. ಸ್ವಾಭಾವಿಕವಾಗಿಯೇ ಮಂದಪಕ್ಷದ ಕಾರ್ಯವು ಮುಗಿದುಹೋಯಿತು. ಆದುದರಿಂದಲೇ ಮಂದಪಕ್ಷದ ಧ್ವನಿಯು ಮುಂದಿನ ರಣರಂಗದಲ್ಲಿ ಕೇಳಬರುವದಿಲ್ಲ.

ಭಾವೋದ್ರೇಕವೇ ವೀರಪಕ್ಷದ ಸ್ವಾಭಾವಿಕಧರ್ಮ. ಪಾರತಂತ್ರ್ಯದಿಂದ ಅಧೋಮುಖವಾದ ರಾಷ್ಟ್ರವನ್ನು ಸಚೇತನಗೊಳಿಸಿ, ಊರ್ಧ್ವಮುಖ ಮಾಡಿದ ಈ ಪಕ್ಷದ ಸ್ಥಾನವು ರಾಷ್ಟ್ರೀಯ ಪ್ರಗತಿಪಥದಲ್ಲಿ ಮಹತ್ವದ್ದಾಗಿದೆ. ಸ್ವಾತಂತ್ರ್ಯದ ಪ್ರತಿಯೊಂದು ಸಂಗತಿಯು ಮನಸ್ಸಿನ ಪರಿವರ್ತನವನ್ನೂ ಆತ್ಮವಿಶ್ವಾಸವನ್ನೂ ಅವಲಂಬಿಸಿದೆ. ಇದು ಮಾನಸಶಾಸ್ತ್ರದ ಸಿದ್ಧಾಂತವು. ಈ ಪಕ್ಷವು ರಾಷ್ಟ್ರದ ಭಾವೋದ್ರೇಕಗೊಳಿಸಿ, ಅದರ ಮನಃಪ್ರವೃತ್ತಿಯನ್ನೇ ಬದಲು ಮಾಡಿತು. ಉತ್ತೇಜಕ ಭಾವನೆಗಳಿಂದ ಪಾರತಂತ್ರ್ಯದ ವೇದನೆಯನ್ನು ಹೆಚ್ಚಿಸಿತು. ಜನರಿಗೆ ಬಲವನ್ನು ಕೊಟ್ಟಿತು, ಆತ್ಮಬಲಿದಾನದ ಸಾಮರ್ಥ್ಯವನ್ನು ಹೆಚ್ಚಿಸಿತು. ರಾಷ್ಟ್ರ

ಸೇವೆಯ ಹುಚ್ಚನ್ನು ಹಿಡಿಸಿತು. ಸಂಕಟಗಳನ್ನು ಎದುರಿಸಲು ಸಂತೋಷದ ಬುದ್ಧಿಯನ್ನುಂಟುಮಾಡಿತು. ಸ್ವಾತಂತ್ರ್ಯಪ್ರೇಮದಿಂದ ಮತ್ತರನ್ನಾಗಿ ಮಾಡಿ, ತಾಂಡವನೃತ್ಯವನ್ನಾಡಲು ಹಚ್ಚಿತು. **ರಾಷ್ಟ್ರವನ್ನೇ ಜೀವಂತಗೊಳಿಸುವ ಬುದ್ಧಿಯುಕ್ತವಾದ ಭಾವನಾಪ್ರಧಾನವಾದಪಕ್ಷಗಳೇ ರಾಷ್ಟ್ರದ ಹೆಜ್ಜೆಗಳನ್ನು ಮುಂದೆ ಹಾಕಬಲ್ಲವು.**

ಮಂದಪಕ್ಷವು ಅಧಿಕಾರವನ್ನು ತನ್ನ ಕೈಯಲ್ಲಿ ಇಟ್ಟುಕೊಳ್ಳಲು ಯತ್ನಿಸಿತು. ಆದರೆ ಅದು ಅಸಾಧ್ಯವಾಗಿತ್ತು. ರಾಷ್ಟ್ರದ ಮನಸ್ಸನ್ನೆಲ್ಲ ವೀರಪಕ್ಷವು ಗೆದ್ದುಬಿಟ್ಟಿತ್ತು. ಸಂಪೂರ್ಣಸ್ವಾತಂತ್ರ್ಯವೇ ಭಾರತದ ಧ್ಯೇಯವೆಂದು ಅರವಿಂದರೂ, ಬಿಪಿನಚಂದ್ರಪಾಲರೂ ಗರ್ಜಿಸಹತ್ತಿದರು. ಬಹಿಷ್ಕಾರದ ಬಿಸಿಯು ಸರಕಾರಕ್ಕೆ ಹತ್ತಿತು. ಅದನ್ನು ಸಹಿಸಲಾರದೆ ರಾಜದ್ರೋಹದ ಆರೋಪದ ಮೇಲೆ ಮುಖಂಡರನ್ನೆಲ್ಲ ಜೇಲಿಗೆ ಕಳಿಸಿತು. ಅಲ್ಪಸ್ವಲ್ಪಾದರೂ ಅಧಿಕಾರಗಳನ್ನು ಕೊಡದೆ ರಾಷ್ಟ್ರವು ಶಾಂತವಾಗಲಾರದೆಂದು ಸರಕಾರಕ್ಕೆ ಅನಿಸಹತ್ತಿತು. **ಲಾರ್ಡ ಮೋರ್ಲೇ**ಯವರು ‘ಹಿಂದೂ ಜನರು ಚಂದಪ್ಪನನ್ನು ಬೇಡುತ್ತಾರೆ. ಆಕಾಶದೊಳಗಿನ ಚಂದಪ್ಪನನ್ನು ನಾನು ತಂದು ಕೊಡಲಾರೆ’ ಎಂದು ಚಳವಳಿಯನ್ನು ಕುರಿತು ಮಾತನಾಡಿದರು. ೧೯೦೯ರಲ್ಲಿ ಮೋರ್ಲೆಮಿಂಟೋ ಸುಧಾರಣೆಗಳು ಬಂದವು.

ಆದರೆ, ಇದರಿಂದ ರಾಷ್ಟ್ರದ ಸಮಾಧಾನವಾಗುವದೆಂತು ? ಹಸಿದು ಕಕ್ರಾಂತನಾದವನಿಗೆ ಅನ್ನವನ್ನು ತೋರಿಸಿದಂತಾಯಿತು. ಲೋಕಮಾನ್ಯರು ೧೯೧೪ರಲ್ಲಿ ಮರಳಿ ಜೇಲಿನಿಂದ ಬಂದರು. **ಹೋಂ ರೂಲ ಚಳವಳಿಯನ್ನು ಹೂಡಿದರು.** ಎರಡು ಮೂರು ವರ್ಷಗಳಲ್ಲಿಯೇ ಚಳವಳಿಯು ಗಗನಕ್ಕೆ ಮುಟ್ಟಿತು. ಹೊಸ ಹೊಸ ಆಕಾಂಕ್ಷೆಗಳು ರಾಷ್ಟ್ರದಲ್ಲಿ ಉದಯವಾದವು. ಮಹಾಯುದ್ಧದಲ್ಲಿ ಸಹಾಯ ಮಾಡಿದ್ದಕ್ಕಾಗಿ, **ಸ್ವಯಂನಿರ್ಣಯ** ತತ್ವದಂತೆ ಸ್ವರಾಜ್ಯವು ಸಿಗಲೇಬೇಕೆಂದು ಭಾರತೀಯರು ಬಯಸುತ್ತಿದ್ದರು. ಆದರೆ ಆ ಬಯಕೆಗಳೆಲ್ಲ ಬಯಲಾದವು. ಸರಕಾರವು ಬಂಡಾಯದ ಭೀತಿಯನ್ನು ಮುಂದುಮಾಡಿ ರೌಲೆಟ

ಕಾಯದೆಯನ್ನು ಮಾಡಿತು. ಭಾರತಕ್ಕೆ ಸಿಡಿಲುಬಡಿದಂತಾಯಿತು. ಭಾರತಕ್ಕೆ ಸ್ವಾತಂತ್ರ್ಯದ ಬದಲು, ರೌಲೆಟ್ ಕಾಯಿದೆಯ ಬಂಧನದ ಬೇಡಿಗಳು ಜಡಿಯಲ್ಪಟ್ಟವು. ರಾಷ್ಟ್ರವು ಕ್ರುದ್ಧವಾಯಿತು. ರಾಷ್ಟ್ರದಲ್ಲಿ ಬಿರುಗಾಳಿಯೇ ಎದ್ದಿತು. ಎಲ್ಲಿನೋಡಿದಲ್ಲಿ

**ಗಾಂಧಿಯವರ ಆಗಮನ.**

ರೋಷಾಗ್ನಿಯು ಹೊರಬೀಳಹತ್ತಿತು. ಮಹಾತ್ಮರ ಸಾತ್ವಿಕ ಕ್ರೋಧವು ಹೊರಹೊಮ್ಮಿತು. ಸತ್ಯಾಗ್ರಹದ ಶಂಖವನ್ನೂದಿದರು. **ವಂಗಭಂಗವು ತಿಲಕರನ್ನು ರಾಜಕೀಯ ರಂಗಕ್ಕೆ ತಂದಿತು. ರೌಲೆಟ್ ಕಾಯದೆಯು ಮಹಾತ್ಮರನ್ನು ವಿಶ್ವರಂಗಕ್ಕೆ ಎಳೆಯಿತು.** ಸತ್ಯಾಗ್ರಹದ ಘೋಷದಿಂದ ರಾಷ್ಟ್ರದಲ್ಲಿ ಮಿಂಚು ಹೊಡೆದಂತಾಯಿತು. ಪ್ರಚಂಡವಾದ ಹರತಾಳಗಳಾದವು. ಸಭೆಗಳಾದವು. ಸರಕಾರವು ಗಾಬರಿಯಾಯಿತು. ದಬ್ಬಾಳಿಕೆಯನ್ನು ಪ್ರಾರಂಭಿಸಿತು. ಸರಕಾರದ ಅನ್ಯಾಯಗಳಿಗೆ ರೊಚ್ಚಿಗೆದ್ದು ಅಲ್ಲಲ್ಲಿ ಚಿಕ್ಕ ಪುಟ್ಟ ದಂಗೆಗಳಾದವು. ಸರಕಾರವು ಅಮಾನುಷವಾದ ಪಂಜಾಬದ ಕೊಲೆಯನ್ನು ಮಾಡಿತು. ದಂಡಿನ ಆಳಿಕೆಯನ್ನು ಸಾರಿ ವಿಚಿತ್ರ ಹಿಂಸೆಯನ್ನು ಕೊಟ್ಟಿತು. ಇದರಿಂದ ಅಖಂಡಭಾರತವೇ ರೊಚ್ಚಿಗೆದ್ದಿತು.

ಉರಿಯಲ್ಲಿ ಹುಲ್ಲು ಒಗೆದಂತೆ, ಖಿಲಾಫತ್ತಿನ ವಚನಭಂಗವನ್ನು ಸರಕಾರವು ಮಾಡಿ ಅದರ ಕೊಲೆಯನ್ನೇ ಮಾಡಿತು.

**ಅಸಹಕಾರದ ಯುಗ.**

ಮಹಾತ್ಮರು ಈ ಭಯಂಕರವಾದ ಅನ್ಯಾಯದಿಂದ ಸಂತಪ್ತರಾಗಿ, ಹಿಂದೀ ರಾಷ್ಟ್ರಕ್ಕೆ, ಅಸಹಕಾರ ಮಂತ್ರೋಪದೇಶವನ್ನು ಮಾಡಿದರು. ಖಿಲಾಫತ್, ಹಾಗು ಪಂಜಾಬದ ಕೊಲೆಗಳ ಅನ್ಯಾಯದ ಪರಿಮಾರ್ಜನೆಗಾಗಿ, ಅಸಹಕಾರವೊಂದೇ ಉಪಾಯವೆಂದು ಸಾರಿದರು. ಮಹಾತ್ಮರ ನವ ಉತ್ಸಾಹ, ನವೀನ ಕಾರ್ಯಕ್ರಮಗಳು ಸಂತಪ್ತವಾದ ಹೃದಯಗಳನ್ನು ಹೋರಾಟಕ್ಕೆ ಹುರಿದುಂಬಿಸಿದವು. ರಾಷ್ಟ್ರದ ಮುಖಂಡರೆಲ್ಲ ವಿರೋಧಿಸಿದರೂ ತರುಣರು ಅಸಹಕಾರವನ್ನು ಸ್ವಾಗತಿಸಿದರು.

೧೯೨೦ರಲ್ಲಿ ಸಪ್ಟಂಬರ ತಿಂಗಳಲ್ಲಾದ ವಿಶೇಷ ಅಧಿವೇಶನದಲ್ಲಿ ರಾಷ್ಟ್ರವು ಅಸಹಕಾರವನ್ನು ಸ್ವೀಕರಿಸಿತು. ಇಂಥ ಅನ್ಯಾಯದ ರಾಕ್ಷಸೀ ಸರಕಾರ ದೊಡನೆ ಸಹಕರಿಸುವದು ಪಾಪವೆಂದೂ, ರಾಜದ್ರೋಹವೇ ತಮ್ಮ ಧರ್ಮವೆಂದೂ, ಬಂಡಸನ್ನು ಹೂಡುವದೇ ಪರಮ ಕರ್ತವ್ಯವೆಂದೂ ಗಾಂಧಿಯವರು ಸಾರಿದರು. ಈ ವೀರ ವಾಣಿಯು ಭಾರತವನ್ನೇ ಸಮರ ಸನ್ನಾಹಕ್ಕೆ ಅಣಿಮಾಡಿತು. ರಾಷ್ಟ್ರವು ಹೋರಾಟದ ಕಣಕ್ಕಿಳಿಯಿತು.

ಸ್ವರಾಜ್ಯವೇ ಧ್ಯೇಯ.

ಭಯಂಕರವಾದ ಹೋರಾಟವು ಪ್ರಾರಂಭವಾಯಿತು. ಶಾಲೆ ಕಾಲೇಜುಗಳು ತೆರವು ಬಿದ್ದವು. ಹೊಸ ಸುಧಾರಣೆಗಳಿಗೆ ಬಹಿಷ್ಕಾರ ಹಾಕಲ್ಪಟ್ಟಿತು. ವಕೀಲರು ವಕೀಲಿಗೆ ಶರಣ ಹೊಡೆದರು. ಇಡೀ ಭಾರತವು, ಸಮರೋತ್ಸಾಹ, ವೀರ ಗರ್ಜನೆಗಳಿಂದ ತುಂಬಿಹೋಗಿತ್ತು. ನಾಗಪೂರ ಕಾಂಗ್ರೆಸ್ಸು ಬಂದಿತು. ರಾಷ್ಟ್ರವು ಮಹಾತ್ಮರೊಡನೆ ತಾದಾತ್ಮ್ಯ ಹೊಂದಿತ್ತು, ಅವರು ತಮ್ಮ ಪ್ರಭಾವದಿಂದ ರಾಷ್ಟ್ರಕ್ಕೆ ರಾಷ್ಟ್ರವನ್ನೇ ಬದಲು ಮಾಡಿಬಿಟ್ಟರು. ಕಾಂಗ್ರೆಸ್ಸಿನ ಮೊದಲಿನ ಧ್ಯೇಯ ಧೋರಣಗಳು ಕಿತ್ತೊಗೆಯಲ್ಪಟ್ಟವು. **ಸ್ವರಾಜ್ಯವೇ ಧ್ಯೇಯವೆಂದು** ಸಾರಲ್ಪಟ್ಟಿತು. ಶಾಂತ ಮತ್ತು ಯೋಗ್ಯ ಉಪಾಯಗಳಿಂದ ಅದನ್ನು ದೊರಕಿಸಬೇಕೆಂದೂ ಸತ್ಯಾಗ್ರಹವೇ ಸಾಧನವೆಂದೂ ಸಾರಲ್ಪಟ್ಟಿತು.

ಇದರಿಂದ ಭಾರತದ ಸ್ಥಾನವು ಜಗತ್ತಿನಲ್ಲಿಯೇ ಹೆಚ್ಚಾಯಿತು. ಬೇಕಾದರೆ ಸಾಮ್ರಾಜ್ಯದಲ್ಲಿ ಇರಬಹುದು, ಇಲ್ಲವೆ ಬಿಡಬಹುದೆಂಬ ಸರಿಸಮಾನತೆಯ ಹಕ್ಕನ್ನು ರಾಷ್ಟ್ರವು ಪ್ರಸ್ಥಾಪಿಸಿತು. ಶಾಸನಬದ್ಧವಾದ ಎಂಬ ಶಬ್ದಗಳನ್ನು ಕಿತ್ತೊಗೆದುದರಿಂದ ಬಂದು ಬಗೆಯಿಂದ ಬ್ರಿಟಿಶ ಸರಕಾರವನ್ನು ನಾವು ಮನ್ನಿಸುವದಿಲ್ಲೆಂದೇ ಅರ್ಥ. ಅನ್ಯಾಯದ ಕಾಯಿದೆಗಳನ್ನು ಮುರಿಯುವ ಅಧಿಕಾರವು ರಾಷ್ಟ್ರಕ್ಕೆ ಉಂಟೆಂಬ ಸಿದ್ಧಾಂತವನ್ನೂ ಪ್ರಸ್ಥಾಪಿಸಿತು. ಮಹಾತ್ಮರ ಈ ಅದ್ಭುತವಾದ ಬದಲಾವಣೆಯು ಹಿಂದೀ ರಾಷ್ಟ್ರವನ್ನು ಬಂದು ನೂರು ವರ್ಷ ಮುಂದಕ್ಕೆ ಒಯ್ಯಿತು. **ಇದೇ ಸ್ವಾತಂತ್ರ್ಯದ ನಾಲ್ಕನೆಯ ಹೆಜ್ಜೆಯು.**

# ಐದನೆಯ ಹೆಜ್ಜೆ

೧೯೨೦ರ ನಂತರ ಹಿಂದೀ ರಾಷ್ಟ್ರವು ಇಷ್ಟು ಯಶಸ್ವಿಯಾಗಿ ಬಂಡಾಯವನ್ನು ಹೂಡಿದ್ದು ೧೯೨೧ನೇ ಇಸ್ವಿಯಲ್ಲಿಯೇ. ಮಹಾತ್ಮರ ಈ ಅಸಹಕಾರದ ಬಂಡು ವಿಶ್ವದಲ್ಲಿಯೇ ಚಮತ್ಕೃತಿಗಳನ್ನುಂಟು ಮಾಡಿತು. ಅಹಿಂಸೆಯಿಂದ ಎಂಥ ಸಾಮ್ರಾಜ್ಯವನ್ನೂ ಮಣಿಸಬಹುದೆಂಬ ಹೊಸ ಸಿದ್ಧಾಂತವು ವಿಶ್ವದ ರಾಜಕಾರಣದಲ್ಲಿ ಬಂದಿತು. ಭಾರತೀಯ ರಾಜಕಾರಣವು ನೀತಿಯ ಆಧಾರದಿಂದಲೂ, ಶಾಂತಿ ಶಸ್ತ್ರದಿಂದಲೂ, ತೇಜೋಮಯವಾಯಿತು. ವೀರಪಕ್ಷದ ಉದಯವಾದೊಡನೆ ಶ್ರೀಮಂತರಿಂದ ಹಾಗೂ ಸರಕಾರದ ಹಿತಚಿಂತಕರಿಂದ ರಾಜ್ಯಸೂತ್ರಗಳು ಕೈಬಿಟ್ಟಂತೆ, ಮಹಾತ್ಮರ ಆಗಮನದಿಂದ ರಾಜ್ಯಸೂತ್ರಗಳು ಸಾಮಾನ್ಯರ ಕೈಸೇರಿದವು. ಅಂದರೆ ಸ್ವಾತಂತ್ರ್ಯದ ಕಲ್ಪನೆಯು ರಾಜಭುವನದಿಂದ ಕೆಳಗಿಳಿದು ಸುಶಿಕ್ಷಿತರ ಮನೆಯನ್ನು ಹೊಕ್ಕು ಸಾಮಾನ್ಯರ ಮನೆಗೆ ಬಂದಿತು. ಇದರಿಂದ ಜನಸಾಮಾನ್ಯರಲ್ಲಿ ಅದ್ಭುತವಾದ ಜಾಗೃತೆಯು ಆಯಿತು. ಈ ಜಾಗೃತೆಯ ಝಳವು ಬ್ರಿಟಿಶ ಸರಕಾರವನ್ನು ನಡುಗಿಸಿತು. ರಾಜ್ಯವು ಎಲ್ಲಿ ಮುಣುಗುವದೋ ಎಂಬ ಭೀತಿಯು ಅಧಿಕಾರಿಗಳಲ್ಲಿ ಉತ್ಪನ್ನವಾಯಿತು. ಅಸಹಕಾರದ ಹೊಸ ಶಸ್ತ್ರವು ರಾಜಕಾರಣಿಗಳನ್ನು ದಿಗ್ಭ್ರಮೆಗೊಳಿಸಿತು. **ಲಾರ್ಡ ರೀಡಿಂಗರಿಗೆ** ತಮ್ಮ ಕೈಯಲ್ಲಿರುವ ಸೈನ್ಯವು ತಮ್ಮ ಅಪ್ಪಣೆಯನ್ನು ಎಲ್ಲಿ ಮನ್ನಿಸುವದಿಲ್ಲವೋ ಎಂಬ ಸಂಶಯವು ಉಂಟಾಯಿತು. ಅದನ್ನು ಆಡಿಯೂ ತೋರಿಸಿದರು. ಆದ್ದರಿಂದಲೇ ಇದಕ್ಕೆ ಯಶಸ್ವಿಯಾದ ಬಂಡೆನ್ನುವದು. ದಬ್ಬಾಳಿಕೆಯೂ ಶಸ್ತ್ರಾಸ್ತ್ರಗಳೂ ಮಕ್ಕಳ ಆಟಿಗೆಗಳಾದವು. ಸೆರೆಮನೆಗಳು ವಿಶ್ರಾಂತಿಯ ಸ್ಥಾನಗಳಾದವು. ಅಸಹಕಾರವು ಏರಿಕೆಯಲ್ಲಿಯೇ ಇದ್ದಿತು. ಮಹಾತ್ಮರು ಕಾಯದೇಭಂಗದ ಶಂಖನಾದವನ್ನು ಮಾಡಿದರು. ಆದರೆ ಪರಮಾತ್ಮನ ಸಂಕಲ್ಪವು ಬೇರೆ ಇದ್ದಿತು. ಚೌರಾಚೌರಿಯ ದಂಗೆಯಾಗಿ ಯುದ್ಧವು ನಿಲ್ಲಿಸಲ್ಪಟ್ಟಿತು. ಮಹಾತ್ಮರಿಗೆ ೬ ವರ್ಷದ ಶಿಕ್ಷೆಯಾಯಿತು. ರಾಷ್ಟ್ರದ ಮುಖಂಡರೆಲ್ಲರೂ ಸೆರೆಮನೆಯನ್ನು ಸೇರಿದ್ದರಿಂದ ಚಳವಳಿಯು ಮಂದವಾಯಿತು.

ಆದರೆ ಅಸಂತೋಷದ ರೋಷಾಗ್ನಿಯು ಒಳಗಿನಿಂದ ಒಳಗೇ ಹೊತ್ತುತ್ತ ನಡೆದಿತ್ತು. ಮಹಾತ್ಮರ ತತ್ವಗಳನ್ನು ಜೀವನದಲ್ಲಿಳಿಸಲು ರಾಷ್ಟ್ರವು ಪ್ರಯತ್ನಪಡುತ್ತಲೇ ಇತ್ತು. ಕಾಯದೇಭಂಗದ ಸಣ್ಣ ಪುಟ್ಟ ಪ್ರಯೋಗಗಳನ್ನು ಮಾಡುತ್ತ ಸಮರ ಸನ್ನಾಹವನ್ನು ಮಾಡು ತ್ತಲೇ ನಡೆದಿತ್ತು. ರಾಷ್ಟ್ರದಲ್ಲಿ ನವವಿಚಾರಗಳ ಸಂಚಾರವು ಆಗತೊಡ ಗಿತ್ತು. ಪೂರ್ಣ ಸ್ವಾತಂತ್ರ್ಯದ ಕಲ್ಪನೆಯು ಬೆಳೆಯ ತೊಡಗಿತ್ತು. ಇದೇ ಸಮಯಕ್ಕೆ ಸುಧಾರಣೆಗಳನ್ನು ಕೊಡಲು **ಸಾಯಮನ್ ಕಮೀಶನ್** ಬರುವ ದೆಂದು ಸರಕಾರವು ಪ್ರಸಿದ್ಧಿಸಿತು. ಮುಂದೆ ತುಸು ದಿಸಗಳಲ್ಲಿ ಮದ್ರಾಸದಲ್ಲಿ (೧೯೨೭) ಕಾಂಗ್ರೆಸ್ಸು ನೆರೆಯಿತು. ಸಾಯ ಮನ್ ಕಮೀಶನ್ನಿಗೆ ಬಹಿಷ್ಕಾರ ಹಾಕಬೇಕೆಂದೂ ರಾಷ್ಟ್ರವು ಸ್ವತಂತ್ರ ವಾದ ಒಂದು ಸ್ವರಾಜ್ಯ ಘಟನೆಯನ್ನು ನಿರ್ಮಿಸಬೇಕೆಂದೂ ನಿರ್ಣಯ ಮಾಡಿತು. ಅಲ್ಲದೆ **ಸಂಪೂರ್ಣ ಸ್ವಾತಂತ್ರ್ಯವೇ ಹಿಂದೀ ರಾಷ್ಟ್ರದ ಧ್ಯೇಯವೆಂದು** ಪಂ. ಜವಾಹರಲಾಲರ ಮುಖಾಂತರ ರಾಷ್ಟ್ರವು ಉಚ್ಚರಿಸಿತು. ಈ ಕಲ್ಪನೆಯ ಪುರಸ್ಕರ್ತರೂ ಅವರೇ.

ಸ್ವಾತಂತ್ರ್ಯದ ಅರುಣೋದಯ

ಈ ಸ್ವಾತಂತ್ರ್ಯದ ಉಚ್ಚಾರಣೆಯೇ ರಾಷ್ಟ್ರದಲ್ಲಿ ನವಚೈತನ್ಯ ವನ್ನುಂಟುಮಾಡಿತು. ಮೂಲೆಮೂಲೆಗಳಿಂದಲೂ ಸ್ವಾತಂತ್ರ್ಯದ ಕೂಗು ಕೇಳಬರಹತ್ತಿತು. ಬಹಿಷ್ಕಾರವು ಪ್ರಬಲವಾಯಿತು. ಇದನ್ನು ಸಹಿಸದೆ ಸರಕಾರವು ದಬ್ಬಾಳಿಕೆಯನ್ನು ಪ್ರಾರಂಭಿಸಿತು. ಲಾಲಾಜಿಯವರು ಲಾಠಿ ಪೆಟ್ಟಿಗೆ ಆಹುತಿಯಾದರು. ರಾಷ್ಟ್ರದ ರೋಷ ಕೆರಳಿತು. ಇಂಥ ಪ್ರಕ್ಷುಬ್ಧ ವಾತಾವರಣದಲ್ಲಿ (೧೯೨೮) ಕಲಕತ್ತೆಯಲ್ಲಿ ಕಾಂಗ್ರೆಸ್ಸು ಸೇರಿತು. ನೆಹರು ವರದಿಯನ್ನು ರಾಷ್ಟ್ರವು ಸ್ವೀಕರಿಸಕೂಡದೆಂದು ತರುಣರ ಹಟ. ಈ ಹಟವು ಮತ್ತೆ ಮಹಾತ್ಮರನ್ನು ರಣರಂಗಕ್ಕೆ ತಂದಿತು. ನೆಹರು ವರದಿಯನ್ನು ಸರಕಾರವು ಸ್ವೀಕರಿಸಿ ಅದರಂತೆ ಸರಕಾರವು ಒಂದು ವರ್ಷದಲ್ಲಿ ಸ್ವರಾಜ್ಯವನ್ನು ಕೊಡದಿದ್ದರೆ ಸಂಪೂರ್ಣ

ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಧ್ಯೇಯವೆಂದೂ ಕಾಯದೇಭಂಗವನ್ನೊಳ ಗೊಂಡ ಅಸಹಕಾರದ ಯುದ್ಧವು ಸಾರಲ್ಪಡುವದೆಂದೂ ಗೊತ್ತುವಳಿ ಯನ್ನು ಮಾಡಿ, ಸರಕಾರಕ್ಕೆ ಯುದ್ಧದ ಆಮಂತ್ರಣವನ್ನು ಕೊಟ್ಟಿತು. ತರುಣರಲ್ಲಿ ಉತ್ಸಾಹವು ಬೆಳೆಯುತ್ತಲೇ ಇತ್ತು. ಸರಕಾರದ ಜೊಳ್ಳು ಪ್ರಕಟನೆಗಳೂ ಹುರುಳಿಲ್ಲದ ಕರೆಗಳೂ ಜನತೆಯನ್ನು ಮತ್ತಿಷ್ಟು ರೊಚ್ಚಿ ಗೆಬ್ಬಿಸಿದವು. ಕಾಂಗ್ರೆಸ್ಸು ಸಮೀಪಿಸಿತು. ಪಂ. ಜವಾಹರಲಾಲರೇ ಅಧ್ಯ ಕ್ಷರಾಗಿ ಆರಿಸಲ್ಪಟ್ಟರು. ಲಾಹೋರ ಕಾಂಗ್ರೆಸ್ಸು ಬಂದೇಬಿಟ್ಟಿತು. ಪ್ರತಿಜ್ಞೆಯಂತೆ ೩೧ನೇ ಡಿಸೆಂಬರ ರಾತ್ರಿ ೧೨ ಘಂಟೆಯ ವರೆಗೆ ದಾರಿ ಕಾಯಿತು. ಸರ ಕಾರದಿಂದ ಯಾವ ಆಶ್ವಾಸನವೂ ಬರಲಿಲ್ಲ.

ಸಂಪೂರ್ಣ ಸ್ವಾತಂತ್ರವೇ ಧ್ಯೇಯ

**ಸಂಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಧ್ಯೇಯವೆಂದೂ, ಶಾಂತಿಮಯವಾದ ಕಾಯದೇಭಂಗವೇ ಸಾಧನವೆಂದೂ** ರಾಷ್ಟ್ರವು ಸಾರಿತು. ರಾಷ್ಟ್ರದಲ್ಲಿ ದಿವ್ಯ ಶಕ್ತಿಯ ಸಂಚಲನವಾಯಿತು. ಸ್ವಾತಂತ್ರ್ಯದ ಜಯಘೋಷದಿಂದ ನಭೋಮಂಡಲವೆಲ್ಲ ತುಂಬಿ ಹೋಯಿತು. ದಶದಿಕ್ಕುಗಳು ಮಾರ್ದನಿಗೊಟ್ಟವು. ಪಂಜರದೊಳಗಿನ ಪಕ್ಷಿಯು ಹೊರಬಿದ್ದೊಡನೆಯೇ ಮುಕ್ತ ಗಗನದಲ್ಲಿ ಮನಬಂದಂತೆ ಹಾರಾಡುವಂತೆ ಸಾಮ್ರಾಜ್ಯದ ಸಂಬಂಧವನ್ನು ಹರಿದೊಗೆದ ಭಾರತವು ಕ್ಷಣ ಹೊತ್ತು ಸಾತಂತ್ರ್ಯದ ಸುಖವನ್ನು ಅನುಭೋಗಿಸಿತು. ಈ ಧ್ಯೇಯ ಬದಲಾವಣೆಯು ಭಾರತದ ಜೀವನವನ್ನೇ ಬದಲು ಮಾಡಿತು. ಜಗತ್ತಿನ ಸ್ವತಂತ್ರ ರಾಷ್ಟ್ರಗಳಂತೆ ಆಚರಿಸುವ ಹಾಗು ಹೋರಾಡುವ ದೃಷ್ಟಿಯನ್ನು ಕೊಟ್ಟಿತು. ಜಾಗತಿಕ ರಾಜಕಾರಣದಲ್ಲಿ ಭಾರತಕ್ಕೆ ಉನ್ನತ ಸ್ಥಾನವನ್ನು ತಂದುಕೊಟ್ಟಿತು. **ಇದೇ ಭಾರತೀಯ ಸ್ವಾತಂತ್ರ್ಯದ ಐದನೆಯ ಹೆಜ್ಜೆಯು. ಪಂ. ಜವಾಹರಲಾಲರೇ ಈ ಯುಗದ ನಾಯಕರು.**

೩೦ನೇ ಇಸ್ವಿಯಲ್ಲಿ ಪ್ರಾರಂಭವಾದ ಸ್ವಾತಂತ್ರ್ಯದ ಹೋರಾಟವು ಇನ್ನೂ ನಡೆಯುತ್ತಲೇ ಇದೆ. ಇಂದು ಅದು ಅಖಿಲ ಭರತಖಂಡವನ್ನೇ

ವ್ಯಾಪಿಸಿದೆ. ಭಾರತೀಯರಲ್ಲಿ ನವ ವಿಚಾರಗಳು ಸುಳಿಯುತ್ತಿರುವದು ಸ್ಪಷ್ಟವಾಗಿ ಕಾಣುತ್ತಲಿದೆ. ಭಾರತವು ರಾಜಕೀಯ ಸ್ವಾತಂತ್ರ್ಯ ದೊಡನೆಯೇ ಸಾಮಾಜಿಕ ಸ್ವಾತಂತ್ರ್ಯವನ್ನೂ ಆರ್ಥಿಕ ಸ್ವಾತಂತ್ರ್ಯ ವನ್ನೂ ಬಯಸುತ್ತಲಿದೆ. ನವಯುಗದ ಅರುಣೋದಯದ ಸ್ಪಷ್ಟ ಚಿನ್ಹ ಗಳು ಕಾಣುತ್ತಲಿವೆ. ಆ ಯುಗದ ನಾಯಕನನ್ನು ಕಾಲವು ಬೊಟ್ಟು ಮಾಡಿ ತೋರಿಸುತ್ತಲಿದೆ. ಮುಂದಣ ಹೋರಾಟದ ಕಿಲಿಕಿಲಾಟವು ಕೇಳಿಸುತ್ತಲಿದೆ.

ನವಯುಗವನ್ನು ಸ್ವಾಗತಿಸೋಣ. ಹೋರಾಟದ ರಣ ಕಹಳೆಗೆ ಮೈಯೊಡ್ಡೋಣ. ಸಂಪೂರ್ಣ ಸ್ವಾತಂತ್ರ್ಯವನ್ನು ದೊರಕಿಸಿಯೇ ತೀರೋಣ.

**ವಂದೇಮಾತರಂ**

# ನಮ್ಮ ಮುಂದಣ ಹೋರಾಟ

ಭಾರತವು ಇಂದು ಧೀರ ಗಂಭೀರವಾದ ಪರಿಸ್ಥಿತಿಯಲ್ಲಿದೆ. ಬಲಿಷ್ಠವಾದ ಬ್ರಿಟಿಶ ಸರಕಾರದೊಡನೆ ಹೋರಾಟವನ್ನು ಹೂಡಿದೆ. ಕಾಯದೇ ಭಂಗವನ್ನು ನಿಲ್ಲಿಸಿ, ರಾಷ್ಟ್ರವು ಯುದ್ಧ ಭೂಮಿಯನ್ನು ಬದಲಿಸಿದೆ. ಭಾರತೀಯರಲ್ಲಿ ಉಂಟಾದ ಯುದ್ಧ ಶಕ್ತಿಯನ್ನು ಕುಗ್ಗಿಸಲು ಬ್ರಿಟಿಶ ಸರಕಾರವು ಬಗೆಬಗೆಯ ಹೂಟಗಳನ್ನು ಹೂಡುತ್ತಲಿದೆ. ಕಾಂಗ್ರೆಸ್ಸಿನ ಇತ್ತೀಚಿನ ಧೋರಣೆಯಿಂದ (Fighting mentality) ರಾಷ್ಟ್ರದ ಯುದ್ಧ ಬುದ್ಧಿಯು ಕಡಿಮೆಯಾಗತೊಡಗಿದೆ. ಇದೇ ಧೋರಣವು ಮುಂದೆ ಸಾಗಿದ್ದಾದರೆ, ಕ್ರಾಂತಿಕಾರಕ ಬುದ್ಧಿಯೇ ಬದಲಾಗುವ ಲಕ್ಷಣಗಳು ತೋರಹತ್ತಿವೆ.

ಆದರೆ ಹಿಂದೀ ರಾಷ್ಟ್ರವು ಸಂಪೂರ್ಣ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಮಾಡಿದೆ ಎಂಬುದನ್ನು ನಾವು ಮರೆಯಲಾಗದು. ನಾವು ಅಹಿಂಸಾಮಯ ರಾಜ್ಯಕ್ರಾಂತಿಯನ್ನು ಮಾಡಲು ಹೊರಟಿದ್ದೇವೆ ಎಂಬುದನ್ನೂ ಲಕ್ಷದಲ್ಲಿಡಬೇಕು. ಅಂತರ ರಾಷ್ಟ್ರೀಯ ಪರಿಸ್ಥಿತಿಯ ಮೂಲಕ ಇಂದು ಬ್ರಿಟಿಶರು ಏರಿಕೆಯ ಧೋರಣವನ್ನು ಬಿಟ್ಟಿರಬಹುದು. ಆದರೆ ಅವರು ಹಿಂದುಸ್ತಾನವನ್ನು ಹೀಗೆಯೇ ಎಂದೂ ಬಿಟ್ಟು ಹೋಗಲಾರರು. ಹೊತ್ತು ಸಾಧಿಸಿ, ಹೊಸ ಸುಧಾರಣೆಗಳನ್ನು ನಮ್ಮ ಮೇಲೆ ಹೇರತಕ್ಕವರೇ! ಯುದ್ಧವು ಖಂಡಿತ, ನಮ್ಮ ಹೋರಾಟವು ಸಮೀಪಿಸುತ್ತಿದೆ.

ಹಾಗಾದರೆ ನಮ್ಮ ಮುಂದಣ ಹೋರಾಟದ ರೂಪರೇಖೆಗಳೇನು? ಅಸಹಕಾರ, ಸತ್ಯಾಗ್ರಹಗಳೇ ನಮ್ಮ ಶಸ್ತ್ರಗಳು. ಅಹಿಂಸೆಯೇ ನಮ್ಮ ಶಕ್ತಿಯು. ಈ ಶಸ್ತ್ರಗಳ ಪೂರ್ಣ ಉಪಯೋಗವನ್ನು ಭಾರತವು ಇನ್ನೂ ಮಾಡಿಲ್ಲ. ಹಿಂದಿನ ಯುದ್ಧದಲ್ಲಿ ಸಾರ್ವತ್ರಿಕ ಕಾಯದೇ ಭಂಗದವರೆಗೆ

ರಾಷ್ಟ್ರವು ಬಂದು ನಿಂತಿದೆ. ಶಹರಗಳವರೆಗೆ ಹೋರಾಟವು ಬಂದು ಮುಟ್ಟಿದೆ. ಈ ಶಾಂತಿಯುದ್ಧವು ಪೂರ್ಣವಾಗಿ ಯಶಸ್ವಿಯಾಗಬೇಕಾದರೆ, ನಮ್ಮ ಹೋರಾಟವು **ವಿಶ್ವರೂಪಿಯಾಗಬೇಕು. ವಿಶ್ವವ್ಯಾಪಿಯಾಗಬೇಕು.** ಬ್ರಿಟಿಶ ಸರಕಾರದ ಶಕ್ತಿಯ ಪ್ರತಿಯೊಂದು ಕೇಂದ್ರವೂ ಯುದ್ಧಭೂಮಿಯಾಗಬೇಕು. ಕಾಯದೇ ಭಂಗವು ೭ ಲಕ್ಷ ಹಳ್ಳಿಗಳನ್ನೂ ವ್ಯಾಪಿಸಬೇಕು. ಅವೇ ನಮ್ಮ ಮುಂದಿನ ಯುದ್ಧ ಕ್ಷೇತ್ರಗಳು. ಎಲ್ಲ ಕ್ಷೇತ್ರಗಳನ್ನು ಕಾಯದೇ ಭಂಗವು ವ್ಯಾಪಿಸಿದಂತೆ, ಸರ್ವ ಭಾರತೀಯರೂ ಆಚರಿಸಲು ಯೋಗ್ಯವಾದ ಕಾರ್ಯಕ್ರಮವೂ ಏರ್ಪಡಬೇಕು. ರಶಿಯಾದಲ್ಲಿಯೂ, ಫ್ರಾನ್ಸದಲ್ಲಿಯೂ ರಾಜ್ಯಕ್ರಾಂತಿಯನ್ನು ಮಾಡಿದವರು ರೈತರೇ! ಸಾರ್ವತ್ರಿಕ ಹೋರಾಟದ ದೃಷ್ಟಿಯಿಂದ ರೈತರ, ಎಲ್ಲ ವಿಧದ ಕೂಲಿಕಾರರ, ವಿದ್ಯಾರ್ಥಿಗಳ, ಹೆಣ್ಣು ಮಕ್ಕಳ, ವ್ಯಾಪಾರಸ್ಥರ, ಸಾಹುಕಾರರ ಸಂಘಟನೆಯನ್ನು ಕಾಂಗ್ರೆಸ್ಸು ಕೈಕೊಳ್ಳಬೇಕು. ಹೋರಾಟವು ಶಿಸ್ತಿನಿಂದಲೂ ತಾಳ್ಮೆಯಿಂದಲೂ ಸಾಗಬೇಕಾದರೆ, ಹಿಂದುಸ್ಥಾನೀ ಸೇವಾದಲದಂತಹ ಸಂಸ್ಥೆಯು ಅತ್ಯವಶ್ಯವೆಂಬುದನ್ನು ಹೇಳಲಿಕ್ಕೆಬೇಡ. ಭಾರತದಲ್ಲಿಯ ಎಲ್ಲ ಶಕ್ತಿಗಳನ್ನು ಸಂಘಟಿಸಿದಂತೆ, ಸಾಮ್ರಾಜ್ಯ ವಿರೋಧಿ ರಾಷ್ಟ್ರಗಳ ಸಂಬಂಧವನ್ನೂ ನಾವು ಬೆಳಿಸಬೇಕು. ಅಂತರ ರಾಷ್ಟ್ರೀಯ ಪರಿಸ್ಥಿತಿಯು ಅನುಕೂಲಿಸಿದೊಡನೆಯೇ ನಾವೇ ಮೊದಲು ಪರಿಹೋಗುವ ಧೋರಣವನ್ನು ಸ್ವೀಕರಿಸಬೇಕು.

ಅಂತೂ ಮುಂದಣ ಹೋರಾಟವು **ವಿಶ್ವ ವ್ಯಾಪಿಯೂ ವಿಶ್ವ ರೂಪಿಯೂ** ಆಗಬೇಕೆಂದೇ ನನ್ನ ಬಯಕೆ.

**ವಂದೇ ಮಾತರಂ.**



ಮಹರ್ಷಿ ದಾದಾಭಾಯಿ ನವರೋಜಿಯವರು

# ಉತ್ತರಾರ್ಧ

## ಸ್ವಾತಂತ್ರ್ಯದ ಹೆಜ್ಜೆಗಳು

ಮಹರ್ಷಿ ದಾದಾಭಾಯಿ ನವರೋಜಿ.

ಲೋಕಮಾನ್ಯ ಬಾಳಗಂಗಾಧರ ಟಿಳಕ.

ಮಹಾತ್ಮಾ ಗಾಂಧಿ.

ಪಂಡಿತ ಜವಾಹರಲಾಲ ನೆಹರು.

**ಇವರೇ ನವಯುಗದ ನಾಯಕರು.** ಸ್ವಾತಂತ್ರ್ಯ ಹೆಜ್ಜೆಗಳನ್ನು ಹಾಕಿಸಿದ ಮಹನೀಯರು. ಇವರ ಜೀವನದೊಡನೆಯೇ ಭಾರತದ ಸ್ವಾತಂತ್ರ್ಯದ ಜೀವನವೂ ಬೆರೆತಿರುವದು. ಪೂರ್ವಾರ್ಧದಲ್ಲಿ ತೋರಿಸಿದ ಸ್ವಾತಂತ್ರ್ಯದ ಹೆಜ್ಜೆಗಳು ಹೇಗೆ ಬಿದ್ದವೆಂಬುದನ್ನು ಇಲ್ಲಿ ಜೀವಂತವಾಗಿ ಕಾಣಬಹುದು. ಸ್ವಾತಂತ್ರ್ಯದ ಬೆಳವಣಿಗೆಗೆ ಅನೇಕರು ನೆರವಾಗಿದ್ದರೂ ಇವರಿಂದಲೇ ಹೆಜ್ಜೆಗಳು ಮುಂದೆ ಬೀಳುತ್ತ ನಡೆದದ್ದು ನಮಗೆ ನಿಚ್ಚಳವಾಗಿ ಕಂಡುಬರುವದು. ಜೀವನಚರಿತ್ರಗಳನ್ನು ಬರೆಯುವಾಗ ಜೀವು ಗಾಲುಗಳನ್ನಿಕ್ಕುತ್ತ ಸಾಗಿದ್ದೇನೆ. ಅವರ ಕಾರ್ಯವಿವರಣೆಯು ವಿಸ್ತಾರವಾಗಿ ಬರೆಯಲ್ಪಟ್ಟಿದೆ.

# ಮಹರ್ಷಿ ದಾದಾಭಾಯಿ ನವರೋಜಿಯವರು

ಜೀವನ ಚರಿತೆ.

ಭಾರತಕ್ಕೆ ಮುಸುಕಿದ ಮಂಜು.

ಆಶಾಕಿರಣಗಳು.

ಬ್ರಿಟೀಶರ ರಾಜ್ಯಯಂತ್ರ.

ನವರೋಜಿಯವರ ಧ್ಯೇಯಧೋರಣಗಳೂ–
ಅವರರಾಜಕೀಯ ಕಾರ್ಯವೂ.

# ಮಹರ್ಷಿ ದಾದಾಭಾಯಿ ನವರೋಜಿಯವರು

## (೧೮೨೫ ರಿಂದ-೧೯೧೭)

## ಜೀವನ ಚರಿತೆ

ಪಾಶ್ಚಾತ್ಯರ ಆದಿಭೌತಿಕ ಸುಧಾರಣೆಗಳಿಗೆ ಬೆರಗಾಗಿ, ಭಾರತದ ಉದ್ಧಾರಕ್ಕಾಗಿಯೇ ಇಂಗ್ಲೀಷರ ಅವತಾರವಾಗಿದೆಯೆಂದು ಬಗೆದು, ಪಾರತಂತ್ರ್ಯದ ಪರಿವೆ ಇಲ್ಲದೆ ಭಾರತವು ಆನಂದಸಾಗರದಲ್ಲಿ ಮುಳುಗಿದ ಸಮಯದಲ್ಲಿ ಬ್ರಿಟಿಶರ ಕುಟಿಲರಾಜನೀತಿಯನ್ನು ಕಂಡುಹಿಡಿದು, ಭಾರತೀಯರನ್ನು ಎಚ್ಚರಿಸಿದ ಮಹಾಪುರುಷರಲ್ಲಿ ದಾದಾಭಾಯಿಯವರೇ ಮೊದಲಿಗರು. ಬ್ರಿಟಿಶರೆಂದರೆ ದೇವರೆಂದು ಬಗೆದು ಸ್ವಸಂಸ್ಕೃತಿಯ ಪರಿವೆಯಿಲ್ಲದೆ, ಅಂಧಾನುಕರಣವನ್ನು ಮಾಡುತ್ತಿರುವ ಭಾರತೀಯರನ್ನು ಕಂಡು, ಮರಮರನೆ ಮರುಗಿದ ಅಂತಃಕರಣವೆಂದರೆ, ಎಲ್ಲಕ್ಕೂ ಮೊದಲು ದಾದಾಭಾಯಿಯವರದೇ. ಸುಧಾರಣೆಗಳ ಸೋಗಿನಿಂದ ಪರಕೀಯರು ಭಾರತದ ರಕ್ತಹೀರುವದನ್ನು ಕಂಡುಹಿಡಿದವರೆಂದರೆ ನವರೋಜಿಯವರೇ. ಭಾರತದ ಉದ್ಧಾರಕ್ಕಾಗಿ, ಹೋರಾಟವನ್ನು ಹೂಡಲು ಮುಂದೆ ಬಂದ ಭಾರತೀಯರಲ್ಲಿ ಇವರೇ ಮೊದಲಿಗರು.

ಭಾರತವು ದಿನದಿನಕ್ಕೆ ಪಾರತಂತ್ರ್ಯದಲ್ಲಿ ಇಳಿಯತೊಡಗಿದೆ. ಬ್ರಿಟಿಶರು ನಿಮ್ಮ ಸ್ವಾತಂತ್ರ್ಯವನ್ನೂ ಸಂಸ್ಕೃತಿಯನ್ನೂ ಧರ್ಮವನ್ನೂ ಸೂರೆಗೊಳುತ್ತಿದ್ದಾರೆ. ಎಚ್ಚರಿಕೆ! ಎಚ್ಚರಿಕೆ! ಎಂದು ಭಾರತೀಯರನ್ನು ಬಡಿದೆಬ್ಬಿಸಿ, ಅವರಲ್ಲಿ ಸ್ವಸಂಸ್ಕೃತಿ ಸ್ವರಾಷ್ಟ್ರಗಳ ವಿಷಯಕ್ಕೆ ಸ್ವಾಭಿಮಾನವನ್ನು ಜಾಗೃತ ಮಾಡಿ, ರಾಷ್ಟ್ರಧರ್ಮದ ದೀಕ್ಷೆಯನ್ನು ಕೊಟ್ಟ ರಾಷ್ಟ್ರೀಯ ಪುರುಷರಿವರು. ಭಾರತದ ಉದ್ಧಾರವು ಸ್ವರಾಜ್ಯದಲ್ಲಿಯೇ ಇದೆ ಎಂದು ಕಂಡುಹಿಡಿದ್ದ ಮಹರ್ಷಿಗಳಿವರು. 'ನಾವು ಮೊದಲು

ಭಾರತೀಯರು, ಭಾರತರಾಷ್ಟ್ರವು ನಮ್ಮದು' ಎಂದು ಘೋಷಿಸಿ, ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸಿದ ಮಹಾಮಹಿಮರು. ನಮ್ಮ ಉದ್ಧಾರವು-ನಮ್ಮ ದೈವವು-ನಮ್ಮ ಉಜ್ವಲವಾದ ಭವಿಷ್ಯವು 'ನಮ್ಮ ಕೈಯಲ್ಲಿಯೇ ಇದೆ.' ಎಂದು ವೀರದೀಕ್ಷೆಯನ್ನು ಕೊಟ್ಟ ವೀರಪುರುಷರು. ನವಭಾರತನಿರ್ಮಾಣಕರಲ್ಲಿ ನವರೋಜಿಯವರೇ ಅಗ್ರಗಣ್ಯರು, ಮೊದಲಿಗರು. ನವಯುಗದ ಪ್ರವರ್ತಕರು. ಸ್ವರಾಜ್ಯಮಂತ್ರದ ದ್ರಷ್ಟಾರರು.

೧೮೨೫ನೇ ಇಸ್ವಿಯಲ್ಲಿ ದಾದಾಭಾಯಿಯವರು ಮುಂಬಯಿಯಲ್ಲಿ ಒಬ್ಬ ಬಡ ಪಾರ್ಸಿ ಭಟ್ಟರ ಮನೆಯಲ್ಲಿ ಹುಟ್ಟಿದರು. ಇವರ ೪ನೇಯ ವರುಷವೇ ಇವರ ತಂದೆಯು ತೀರಿಕೊಂಡದ್ದರಿಂದ ಇವರ ಶಿಕ್ಷಣದ ಭಾರವೆಲ್ಲವೂ ತಾಯಿಯ ಮೇಲೆಯೇ ಬಿತ್ತು. ಜಾಣಳಾದ ಇವರ ತಾಯಿಯು ಮಗನ ಪಾಲನ ಪೋಷಣೆಯನ್ನು ಒಳ್ಳೇ ದಕ್ಷತೆಯಿಂದ ಮಾಡಿದಳು. ತಾಯಿಯ ವಿಷಯವಾಗಿ, ದಾದಾಭಾಯಿಯವರಿಗೆ, ಅತ್ಯಂತ ಆದರವೂ ಅಭಿಮಾನವೂ ಅನಿಸುತ್ತಿದ್ದವು. ಅವರು ಬರೆದ ಸ್ವಚರಿತ್ರೆಯಲ್ಲಿ 'She made me what I am' 'ನನ್ನ ಸದ್ಯದ ಸ್ಥಿತಿಗೆ ನನ್ನ ತಾಯಿಯೇ ಕಾರಣ'ಳೆಂದು ಒಳ್ಳೇ ಅಭಿಮಾನದಿಂದ ಉಲ್ಲೇಖಿಸಿದ್ದಾರೆ.

ಇವರ ಪ್ರಾಥಮಿಕ ಶಿಕ್ಷಣವು ಮುಂಬಯಿಯಲ್ಲಿಯೇ ಆಯಿತು. ತಮ್ಮ ಬುದ್ಧಿಬಲದಿಂದ ಚಿಕ್ಕಂದಿನಲ್ಲಿಯೇ ಒಂದು ಶಿಷ್ಯವೃತ್ತಿಯನ್ನು ದೊರಕಿಸಿದರು. ಎಲಫಿನ್‌ಸ್ಟನ್ ಶಾಲೆಯಲ್ಲಿ ಇಂಗ್ಲೀಷ ವಿದ್ಯಾಭ್ಯಾಸಕ್ಕೆ ಪ್ರಾರಂಭವಾಯಿತು. ತಮ್ಮ ಅಪ್ರತಿಮವಾದ ಬುದ್ಧಿಸಾಮರ್ಥ್ಯದಿಂದ ಅನೇಕ ಶಿಷ್ಯವೃತ್ತಿಗಳನ್ನು ಸಂಪಾದಿಸಿದರು. ಇಲ್ಲಿಯ ಅಭ್ಯಾಸವೂ ಮುಗಿಯಿತು. ಆಗಿನ ಶಿಕ್ಷಣ ಮಂತ್ರಿಗಳೂ ನ್ಯಾಯಾಧೀಶರೂ ಆದ ಸರ್ ಎರಸ್ಕೀನ ಫೇರಿಯವರು ಇವರ ಬುದ್ಧಿವೈಭವಕ್ಕೆ ಮೆಚ್ಚಿ ಹೆಚ್ಚಿನ ಅಭ್ಯಾಸಕ್ಕಾಗಿ ಇವರನ್ನು ಇಂಗ್ಲಂಡಕ್ಕೆ ಕಳಿಸಬೇಕೆಂದೂ, ಖರ್ಚಿನ ಅರೆಭಾರವನ್ನು ತಾವು ಹೊರುವೆವೆಂದೂ ಹೇಳಿದರು. ಆದರೆ ಅವರ

ಮನೆಯವರೂ, ಸಮಾಜದ ಮುಂದಾಳುಗಳೂ ಕ್ರಿಸ್ತಿಧರ್ಮದವರು ಆಗುವರೆಂದೂ, ಜಾತಿಯು ಕೆಡುವದೆಂದೂ ಬಗೆದು ಇಂಗ್ಲಂಡಕ್ಕೆ ಕಳಿಸಲು ಒಪ್ಪಲಿಲ್ಲ.

ದಾದಾಭಾಯಿಯವರ ಶಿಕ್ಷಣವು ಈ ರೀತಿಯಾಗಿ ಮುಗಿದ ಮೇಲೆ ಅವರು ಹೊಟ್ಟೆಯ ಪಾಡಿಗಾಗಿ ಒಂದು ಉದ್ಯೋಗವನ್ನು ಹುಡುಕಲೇ ಬೇಕಾಯಿತು. ತಾವು ಕಲಿತ ಶಾಲೆಯಲ್ಲಿಯೇ ಅಧ್ಯಾಪಕರಾದರು. ಗಣಿತದಲ್ಲಿಯ ಪ್ರಾವೀಣ್ಯತೆಯಿಂದ ಒಂದು ಸುವರ್ಣಪದಕವನ್ನು ದೊರಕಿಸಿದರು. ಗಣಿತ ಶಾಸ್ತ್ರವನ್ನು ಕಲಿಸುತ್ತಿದ್ದ ಯುರೋಪಿಯನ್ನರ ಸ್ಥಳವು ೧೮೫೪ರಲ್ಲಿ ಇವರಿಗೆ ಕೊಡಲ್ಪಟ್ಟಿತು. ಭಾರತದಲ್ಲಿ ಯುರೋಪಿಯನ್ನರಿಗೆ ಸಲ್ಲುತ್ತಿದ್ದ ಸ್ಥಳವನ್ನು ಮೊದಲು ದೊರಕಿಸಿದವರೆಂದರೆ, ದಾದಾಭಾಯಿಯವರೇ! ಇದರಿಂದ ದಾದಾಭಾಯಿಯವರ ಕೀರ್ತಿಯು ಬೆಳೆಯಿತು. ಇವರು ಈ ಕಾರ್ಯದಿಂದ ನಿವೃತ್ತರಾದರೂ 'ಪ್ರೊ. ದಾದಾಭಾಯಿ, ಎಂಬ ಹೆಸರು ತಪ್ಪಲಿಲ್ಲ. ಆದರೆ, ಮುಂದೆ ೧೮೫೫ರಲ್ಲಿ ನೌಕರಿಗೆ ಶರಣುಹೊಡೆದು, **ಕಾಮಾ** ಕಂಪನಿಯ ಕಾರ್ಯಕ್ಕಾಗಿ, ಇಂಗ್ಲಂಡಕ್ಕೆ ಹೋದರು.

ದಾದಾಭಾಯಿಯವರು ಪ್ರೊಫೆಸರರಾದರೂ ಪುಸ್ತಕದಲ್ಲಿಯ ಹುಳ ವಾಗಿದ್ದಿಲ್ಲ. ಅವರ ಅಂತಃಕರಣವು ದೇಶಸೇವೆಯ ಕಡೆಗೆ ಎಳೆಯುತ್ತಿತ್ತು. ಯಾವಾಗಲೂ ಭಾರತೀಯರು ಹೇಗೆ ಮುಂದೆ ಬರಬೇಕು ಎಂಬುದೊಂದೇ ಚಿಂತೆ. ಅದಕ್ಕಾಗಿ, ಅವರು ವಿವಿಧ ಸಾರ್ವಜನಿಕ ಕಾರ್ಯಗಳಿಗೆ ಕೈ ಹಾಕಿದರು. ವಿದ್ಯಾರ್ಥಿಗಳಿಗಾಗಿ, ಜ್ಞಾನಪ್ರಸಾರಕ ಮಂಡಳವನ್ನು ತೆಗೆದರು. ರಾಜಕೀಯ ವಿಚಾರಕ್ಕಾಗಿ **ಬಾಂಬೆ ಅಸೋಸಿಯೇಶನ್**, ಎಂಬ ಸಂಸ್ಥೆಯನ್ನು ನಿರ್ಮಿಸಿದರು. **ಅಲ್ಬರ್ಟ ಮ್ಯುಝಿಯಮ್** ಎಂಬ ವಸ್ತುಸಂಗ್ರಹಾಲಯವನ್ನು ಪ್ರಾರಂಭಿಸಿದರು. ವಿಧವಾವಿವಾಹ ಸಂಘವನ್ನು ಪ್ರಾರಂಭಿಸಿ ಸುಧಾರಣೆಗೆ ಕೈಹಾಕಿದರು. ಎಲಫಿನ್‌ಸ್ಟನ್ ಶಾಲೆಯ ಮುಖ್ಯಾಧ್ಯಾಪಕರ ನೆರವಿನಿಂದ ಹೆಣ್ಣುಮಕ್ಕಳಿಗಾಗಿ, ಅನೇಕ ಶಾಲೆಗಳನ್ನು ತೆರೆದರು. ೧೮೫೧ರಲ್ಲಿ '**ರಾಸ್ತಗೋಫ್ತಾರ**' (ಸತ್ಯವಾದಿ)

ಎಂಬುದೊಂದು ಗುಜರಾಥಿ ವೃತ್ತಪತ್ರಿಕೆಯನ್ನು ಪ್ರಾರಂಭಿಸಿದರು. ಹೀಗೆ ಮುಂಬಯಿಯಲ್ಲಿಯ ಸಾರ್ವಜನಿಕ ಜೀವನವನ್ನು ಪ್ರಾರಂಭ ಮಾಡಿದವರೆಂದರೆ, ದಾದಾಭಾಯಿಯವರೇ! ಇವರೇ ಮೊದಲಿಗರು.

ದಾದಾಭಾಯಿಯವರ ಇಂಗ್ಲಂಡದ ಜೀವನವು ಭಾರತೀಯ ರಾಜಕೀಯ ಜಾಗೃತೆಯ ಮೊದಲನೇ ಮೆಟ್ಟಲೆಂದು ಹೇಳಬಹುದು. ಅವರು ಇಂಗ್ಲಂಡಕ್ಕೆ ಕಾಲಿಟ್ಟೊಡನೆಯೇ ರಾಜಕೀಯ ಆಂದೋಲನಕ್ಕೆ ಕೈಯಿಕ್ಕಿದರು. ಭಾರತದಲ್ಲಿಯ ದೊಡ್ಡ ದೊಡ್ಡ ಹುದ್ದೆಗಳೆಲ್ಲ ಯುರೋಪಿಯನ್ನರಿಗೇ. ೧೮೫೫ರಲ್ಲಿ ಈ ಪದ್ಧತಿಯು ಸಡಿಲಾಗಿ, ಹಿಂದೀಯರಿಗೂ ಆ ಸ್ಥಾನಗಳು ದೊರೆಯಬೇಕಾದರೆ, ಅವರು '**ಇಂಡಿಯನ್ ಸಿವ್ಹಿಲ್ ಸರ್ವೀಸ**' ಎಂಬ ಪರೀಕ್ಷೆಯನ್ನು ಪಾಸಾಗಬೇಕೆಂಬ ಕಟ್ಟಳೆಯಾಯಿತು. ಆದರೆ ಆ ಪರೀಕ್ಷೆಯು ಲಂಡನದಲ್ಲಿ. **ಆರ್. ಎಚ್. ವಾಡಿಯಾ** ಎಂಬ ವಿದ್ಯಾರ್ಥಿಯು ಈ ಪರೀಕ್ಷೆಗೆ ಕೂಡಬೇಕೆಂದು ಪ್ರಯತ್ನಪಟ್ಟನು. ಆದರೆ, ಅಲ್ಲಿಯ ಅಧಿಕಾರಿಗಳು ವಯಸ್ಸು ಬಹಳವಾಗಿದೆ ಎಂಬ ಕುಂಟನೆವವನ್ನು ತೆಗೆದು, ತಡೆಯನ್ನುಂಟುಮಾಡಿದರು. ದಾದಾಭಾಯಿಯವರಿಗೆ ಈ ಸಂಗತಿಯು ತಿಳಿದೊಡನೆಯೇ ಅವನ ಪಕ್ಷವನ್ನು ಕಟ್ಟಿ, '**ಜೋನ ಬ್ರಾಯಿಟ**' ರೆಂಬ ಗೃಹಸ್ಥರ ಸಹಾಯದಿಂದ ಮುಖ್ಯಾಧಿಕಾರಿಗಳೊಡನೆ ಹೋರಾಡಿದರು. ಆದರೆ ಇದರಲ್ಲಿ ಅವರಿಗೆ ಯಶಸ್ಸು ದೊರೆಯಲಿಲ್ಲ. ಇದರಿಂದ ದಾದಾಭಾಯಿಯವರಿಗೆ ಇಂಗ್ಲೀಷರ ಮನೋವೃತ್ತಿಯ ಪರಿಚಯವಾಗಹತ್ತಿತು. ಈ ಪ್ರಶ್ನೆಯ ಬಗ್ಗೆ ದೀರ್ಘವಾಗಿ ವಿಚಾರ ಮಾಡಿ, ಈ ಪರೀಕ್ಷೆಯನ್ನು ಭಾರತದಲ್ಲಿಯೂ ತೆಗೆದುಕೊಳ್ಳಬೇಕೆಂಬ ಚಳವಳಿಯನ್ನು ಹೂಡಿದರು. ಈ ವಿಷಯವಾಗಿ ೧೮೯೩ರಲ್ಲಿ ಪಾರ್ಲಿಮೆಂಟಿನಲ್ಲಿ ಗೊತ್ತುವಳಿಯನ್ನೂ ಮಾಡಿಸಿಕೊಂಡರು. ಆದರೂ ಈ ಹಕ್ಕು ಹಿಂದೀಯರಿಗೆ ಸಿಕ್ಕದ್ದು ೧೯೨೯ರಲ್ಲಿ.

೧೮೫೮ರಲ್ಲಿ ನವರೋಜಿಯವರು ಇಂಗ್ಲಂಡಿನಲ್ಲಿ ಕಾಲಿಟ್ಟಾಗ ಭಾರತದ ವಿಷಯಕ್ಕೆ ಆಂಗ್ಲರಲ್ಲಿ ಭಯಂಕರವಾದ ತಪ್ಪುಕಲ್ಪನೆಗಳಿರುವವೆಂದು ಕಂಡುಬಂದಿತು. ಬ್ರಿಟಿಶ ಜನತೆಯಲ್ಲಿರುವ ಈ ಅಜ್ಞಾನವನ್ನು

ಹೋಗಲಾಡಿಸಬೇಕೆಂದೂ ಅವರ ಹೊಣೆಗಾರಿಕೆಯನ್ನು ಅವರಿಗೆ ಚೆನ್ನಾಗಿ ತಿಳಿಸಿ ಕೊಡಬೇಕೆಂದೂ, '**ಲಂಡನ್ ಇಂಡಿಯನ್, ಸೊಸಾಯಿಟಿ**' ಎಂಬದೊಂದು ಸಂಘವನ್ನು **ಉಮೇಶ್ಚಂದ್ರ** ಬ್ಯಾನರ್ಜಿಯವರ ಸಹಾಯದಿಂದ ತೆಗೆದರು. '**ಈಸ್ಟ ಇಂಡಿಯಾ ಅಸೋಸಿಏಶನ್**' ಎಂಬ ಸಂಸ್ಥೆಯನ್ನು ಪ್ರಾರಂಭಿಸಿ, ಭಾರತದ ಬಗ್ಗೆ ಕಳಕಳಿಯುಳ್ಳ ಜನರನ್ನು ಸಭಾಸದರನ್ನಾಗಿ ಮಾಡಹತ್ತಿದರು. ಈ ಸಂಸ್ಥೆಗೆ ಇಂಗ್ಲೀಷ ಅಧಿಕಾರಿಗಳೂ ಮುತ್ಸದ್ದಿಗಳೂ ಭಾರತೀಯ ವಿದ್ಯಾರ್ಥಿಗಳೂ, ಸಭಾಸದರಿದ್ದರು. ಭಾರತದ ವಿಷಯಕ್ಕೆ ಅಭ್ಯಾಸ ಮಾಡಿದ ನಿಬಂಧಗಳು ಓದಲ್ಪಡುತ್ತಿದ್ದವು. ನವರೋಜಿಯವರು, ಇದರಲ್ಲಿ ಮುಖ್ಯರು. ಇವರು ಇಷ್ಟಕ್ಕೆ ನಿಲ್ಲಲಿಲ್ಲ. ಇಂಗ್ಲಂಡದಲ್ಲಿ ಪ್ರವಾಸವನ್ನು ಕೈಕೊಂಡು, ಹಿಂದುಸ್ಥಾನದ ರಾಜಕೀಯ ಸುಧಾರಣೆಗಳ ವಿಷಯವಾಗಿ, ವ್ಯಾಖ್ಯಾನಗಳನ್ನು ಕೊಟ್ಟು, ಜನ ಜಾಗೃತಿಯನ್ನು ಪ್ರಾರಂಭಿಸಿದರು. ಇದಲ್ಲದೆ, ಈ ವಿಷಯವಾಗಿ ಪ್ರಮುಖ ವೃತ್ತಪತ್ರಗಳಿಗೆಲ್ಲ ಬರಹಗಳನ್ನು ಬರೆಯಹತ್ತಿದರು. ಭಾರತೀಯರ ರಾಜಕೀಯ, ಶೈಕ್ಷಣಿಕ, ಆರ್ಥಿಕ ಸಮಸ್ಯೆಗಳ ಚರ್ಚೆಯು ಇದರಿಂದ ಪ್ರಾರಂಭವಾಯಿತು. ಲಂಡನ್ ಯುನಿವ್ಹರ್ಸಿಟಿಯ ಕಾಲೇಜಿನಲ್ಲಿ ಗುಜರಾಥಿಯ ಪ್ರೊಫೆಸರರಾಗಿದ್ದರು. ೧೮೬೯ರಲ್ಲಿ ಕಾಮಾ ಕಂಪನಿಯನ್ನು ಬಿಟ್ಟು ಸ್ವತಂತ್ರ ಅಂಗಡಿಯನ್ನು ತೆರೆದರು. ಆದರೆ ಅದು ನಡೆಯಲಿಲ್ಲ. ೧೮೬೯ರಲ್ಲಿ ಭಾರತಕ್ಕೆ ಮರಳಿ ಬಂದರು. ಇವರು ಭಾರತೀಯರ ಹಕ್ಕು ಬಾಧ್ಯತೆಗಳಿಗಾಗಿ ಹೊರಾಡುತ್ತಿರುವದು ವೃತ್ತಪತ್ರಗಳ ಮುಖಾಂತರ ಮುಂಬಯಿಗೆ ಸುದ್ದಿ ಒಂದು ಮುಟ್ಟಿತ್ತು. ದಾದಾಭಾಯಿಯವರು ಮುಂಬಯಿಗೆ ಬಂದ ಕೂಡಲೇ ದೇಶಾಭಿಮಾನಿಗಳಾದ ಬ್ಯಾ. ಫಿರೋಜಶಹ ಮೇಥಾರವರು ಇವರಿಗೆ ಅಪೂರ್ವವಾದ ಸನ್ಮಾನವನ್ನು ಮಾಡಿದರು. ಈ ಸಮಾರಂಭದಲ್ಲಿ ಎಲ್ಲ ಜಾತಿ ಪಂಗಡಗಳ ಜನರು ಕೂಡಿದ್ದರು.

ಇವರ ಮೆರವಣಿಗೆಯು ತೆಗೆಯಲ್ಪಟ್ಟಿತು. ಸಭೆಯು ಮಾಡಲ್ಪಟ್ಟಿತು. ೩೦೦೦೦ರೂಪಾಯಿಗಳ ನಿಧಿಯು ಅರ್ಪಿಸಲ್ಪಟ್ಟಿತು. ಈ ಅಪೂರ್ವವಾದ ಸನ್ಮಾನವು ಭಾರತದಲ್ಲಿಯೇ ಮೊದಲನೆಯದೆಂದು ಹೇಳಬಹುದು.

ದಾದಾಭಾಯಿಯವರು ಈ ಎಲ್ಲ ನಿಧಿಯನ್ನು ಸಾರ್ವಜನಿಕ ಕಾರ್ಯಕ್ಕಾಗಿಯೇ ಅರ್ಪಿಸಿದರು.

೧೮೭೩ರಲ್ಲಿ ಮತ್ತೆ ದಾದಾಭಾಯಿಯವರಿಗೆ, ಇಂಗ್ಲಂಡಕ್ಕೆ ಹೋಗಬೇಕಾಯಿತು. ಈ ಸಲ ಅವರು ರಾಜರ ಅತಿಥಿಗಳಾಗಿದ್ದರು. ಭಾರತದ ಆರ್ಥಿಕ ಪ್ರಶ್ನೆಯ ವಿಚಾರವಾಗಿ, ಪಾರ್ಲಿಮೆಂಟಿನಿಂದ ನಿಯಮಿಸಲ್ಪಟ್ಟ ಕಮೀಟಿಯ ಮುಂದೆ, ಸಾಕ್ಷಿಯನ್ನು ಕೊಟ್ಟರು. ಇದರಲ್ಲಿ ಯಾರ ಭಿಡೆ ಮುರುವತ್ತುಗಳನ್ನಿಡದೆ, ಭಾರತವು ಬಡತನದಲ್ಲಿ ಬಳಲುತ್ತಿದೆಯೆಂದೂ, ಇಲ್ಲಿಯ ಕರಗಳು ಬಹಳ ಹೆಚ್ಚಾಗಿವೆಯೆಂದೂ, ಹಿಂದುಸ್ಥಾನದ ಆಡಳಿತೆಯ ಖರ್ಚು ಅವಾಢವ್ಯವಾಗಿದ್ದು ಬಡ ಭಾರತಕ್ಕೆ ಬಿಳಿ ಆನೆಯನ್ನು ಕಟ್ಟಿದಂತೆ ಆಗಿದೆಯೆಂದೂ ಪ್ರತಿಪಾದಿಸಿದರು. ಅವರ ನಿರ್ಭಯ ವೃತ್ತಿಯೂ ಭಾರತಾಭಿಮಾನವೂ ಬ್ರಿಟಿಶರನ್ನು ದಂಗುಬಡಿಸಿದವು. ಪ್ರತಿಯೊಬ್ಬ ಭಾರತೀಯನ ಉತ್ಪನ್ನವು ೨೦ ರೂ. ಗಳನ್ನು ಮೀರುವದಿಲ್ಲೆಂಬ, ಇವರ ವಿಧಾನವು ರಾಷ್ಟ್ರದಲ್ಲಿ ಹಾಹಾಕಾರವನ್ನುಂಟುಮಾಡಿತು. ಇದನ್ನು ಬ್ರಿಟಿಶರು ಒಪ್ಪಲಿಲ್ಲ. ವಾದವಿವಾದವಾಗಿ, ಭಾರತದ ಆರ್ಥಿಕ ಮಂತ್ರಿಗಳಾದ **ಸರ್ ಡಿ. ಈ. ಬೇರಿಂಗರು** ಪ್ರತಿ ತಲೆಗೆ, ೨೭ ರೂ. ಉತ್ಪನ್ನ ಬೀಳುವದೆಂದು ಒಡಂಬಟ್ಟರು. ಈ ಸಾಕ್ಷಿಯು ಭಾರತದ ರಾಜಕಾರಣದಲ್ಲಿ ಕ್ರಾಂತಿಯನ್ನುಂಟುಮಾಡಿತು. ಈ ವಿಷಯವಾಗಿ ಅಭ್ಯಾಸಮಾಡಿದ್ದನ್ನೇ 'Poverty and the British Rule in India' ಎಂಬ ಸುಪ್ರಸಿದ್ಧವಾದ ಗ್ರಂಥವನ್ನು ಬರೆದರು.

ದಾದಾಭಾಯಿಯವರು ಭಾರತಕ್ಕೆ ಮರಳಿ ಬಂದೊಡನೆಯೇ ೧೮೭೪ರಲ್ಲಿ ಬಡೋದೆಯ ಮುಖ್ಯ ಮಂತ್ರಿಗಳಾದರು. ರಾಜ್ಯದಾಡಳಿತೆಯಲ್ಲಿಯ ಹುಳುಕುಗಳನ್ನೆಲ್ಲ ಹುಡಿಕಿ ಪ್ರಜೆಗಳ ಏಳ್ಗೆಯ ದಾರಿಯನ್ನು ತೋರಿಸಿದರು. ಅವರ ಬುದ್ಧಿಮತ್ತೆಯೂ ಪ್ರಜಾಪ್ರೇಮವು ವ್ಯಕ್ತವಾದವು. ದಾದಾಭಾಯಿಯವರ ಈ ಸುಧಾರಣೆಗಳು ರೆಸಿಡೆಂಟನನ್ನು ರೇಗಿಗೆಬ್ಬಿಸಿದವು. ಸ್ವಾತಂತ್ರ್ಯ ಪ್ರೇಮಿಗಳಾದ ದಾದಾಭಾಯಿಯವರಿಗೂ ಇವರಿಗೂ ಹೇಗೆ ಕೂಡಿ ನಡೆಯಬೇಕು? ಚಕಮಕಿಗಳಾದವು.

ಸ್ವಾಭಿಮಾನಿಗಳಾದ ದಾದಾಭಾಯಿಯವರು, ಮಂತ್ರಿಪದಕ್ಕೆ ಶರಣು ಹೊಡೆದು ಮುಂಬಯಿಯಲ್ಲಿ ಬಂದು ನೆಲೆಸಿದರು.

ಇದೇ ಸಮಯದಲ್ಲಿ ವ್ಹಾಯಿಸರಾಯರಾಗಿದ್ದ ಲಾರ್ಡ ಲಿಟನ್ನರ ಅಸಹ್ಯವಾದ ದಬ್ಬಾಳಿಕೆಯು ಭಾರತಿಯರನ್ನು ಕಂಗೆಡಿಸಿತು. ಸಾಮ್ರಾಜ್ಯ ಪ್ರೇಮಿಗಳಾದ ದಾದಾಭಾಯಿಯವರು, ಲಿಟನ್ನರ ಆಳಿಕೆಯು ಭಾರತ ದಲ್ಲಿರುವವರೆಗೆ, ಸಾರ್ವಜನಿಕ ಕಾರ್ಯಕ್ಕೆ ಕೈ ಹಾಕುವದಿಲ್ಲೆಂದು ವೀರ ಪ್ರತಿಜ್ಞೆಯನ್ನು ಮಾಡಿದರು. ಅವನು ಹೋದೊಡನೆ ಕಾರ್ಯಕ್ಕೆ ಪ್ರಾರಂಭಮಾಡಿದರು. ಮುಂಬೈ ಕಾಯದೆ ಕೌನ್ಸಿಲ್ಲಿನ ಸಭಾಸದರಾದರು. ರಾಷ್ಟ್ರೀಯ ಮಹಾಸಭೆಯ ಸ್ಥಾಪನೆಯ ವಿಷಯವಾಗಿ ಅತ್ಯಂತ ಶ್ರಮ ವನ್ನು ವಹಿಸಿದರು. ೧೮೮೫ರಲ್ಲಿ ರಾಷ್ಟ್ರೀಯ ಮಹಾಸಭೆಯನ್ನು ಮುಗಿಸಿ ಕೊಂಡು ಭಾರತೀಯರ ರಾಜಕೀಯ ಆಕಾಂಕ್ಷೆಗಳು ಈಡೇರಬೇಕಾದರೆ ಪಾರ್ಲಿಮೆಂಟೇ ಯೋಗ್ಯಸ್ಥಾನವೆಂದೂ ಅದರ ಸಭಾಸದರಾಗಿಯೇ ಹೋರಾಡಬೇಕೆಂದೂ ಬಯಸಿ, ಇಂಗ್ಲಂಡಕ್ಕೆ ೧೮೮೬ರಲ್ಲಿ ಹೋದರು. ಆಗ ಅಯರ್ಲಂಡ ಸ್ವರಾಜ್ಯದ ಪ್ರಶ್ನೆಯು ಮುಖ್ಯವಾಗಿತ್ತು. ಇಂಥ ಸಮಯದಲ್ಲಿ ದಾದಾಭಾಯಿಯವರಿಗೆ ಜಯ ಸಿಗುವದೆಂತು? ಆದರೂ ದಾದಾಭಾಯಿಯವರು ೧೯೫೦ ಮತಗಳನ್ನು ದೊರಕಿಸಿದ್ದರು. ಇವರ ಎದುರಾಳಿಯು ಕೇವಲ ಒಂದೇ ಮತದಿಂದ ಅಂದರೆ ೧೯೫೧ ಮತಗಳಿಂದ ಆರಿಸಿ ಬಂದನು. ಹಿಂದೀಯರು ಇಂಗ್ಲೀಷರ ಪ್ರತಿನಿಧಿಯಾಗಿ ನಿಂತದ್ದು ಇದೇ ಮೊದಲು. ೧೮೮೬ರ ರಾಷ್ಟ್ರೀಯ ಸಭೆಗೆ ಇವರೇ ಅಧ್ಯಕ್ಷರಾಗಿ ಆರಿಸಲ್ಪಟ್ಟರೂ ಮತ್ತೆ ಪಾರ್ಲಿಮೆಂಟಿನ ಚುನಾವಣೆಗಾಗಿ ಇಂಗ್ಲಂಡಕ್ಕೆ ತೆರಳಿದರು. ೧೮೯೨ರಲ್ಲಿ ಆದ ಚುನಾವಣೆಯಲ್ಲಿ ಸೆಂಟ್ರಲ್ ಫಿನ್ಸಬರಿಯ ಉದಾರಮತದ ಪ್ರತಿನಿಧಿಗಳೆಂದು ಆರಿಸಲ್ಪಟ್ಟರು. ಈ ಚುನಾವಣೆಯಲ್ಲಿ ಜಯಸಿಕ್ಕದ್ದಕ್ಕಾಗಿ ಇಡೀ ಹಿಂದುಸ್ಥಾನವು ಇವರನ್ನು ಅಭಿನಂದಿಸಿತು. ಈ ಸಭಾಸದತ್ವವು ಕೇವಲ ಮೂರು ವರ್ಷ ನಡೆಯಿತು. ೧೮೯೩ರಲ್ಲಿ ಪಾರ್ಲಿಮೆಂಟಿನ ಸಭಾಸದರಾದ ಕೂಡಲೆ ತಮ್ಮ ಪ್ರೀತಿಯ ವಿಷಯವಾದ ಇಂಡಿಯನ್ ಸಿವ್ಹಿಲ್ ಸರ್ವ್ಹಿಸ್ ಪರೀಕ್ಷೆಯು ಅಲ್ಲಿಯೂ ಇಲ್ಲಿಯೂ

ಏಕಕಾಲಕ್ಕೆ ಆಗಬೇಕೆಂಬ ಗೊತ್ತುವಳಿಯನ್ನು ಪಾಸು ಮಾಡಿಸಿ ಕೊಂಡರು. ಇದೇ ಕಾಲದಲ್ಲಿ ಇವರು ಶ್ರಮಬಟ್ಟು ಹಿಂದುಸ್ಥಾನದ ಆರ್ಥಿಕಸ್ಥಿತಿಯ ವಿಚಾರಣೆಯ ಬಗ್ಗೆ ಒಂದು ಕಮೀಟಿಯನ್ನು ನಿಯಮಿಸಿ ಕೊಂಡರು. ಈ ಕಮೀಟಿಯಲ್ಲಿ ದಾದಾಭಾಯಿಯವರಿಗೂ ಅಧಿಕಾರಸ್ಥಳ ವನ್ನು ಕೊಟ್ಟಿದ್ದರು. ಮುಂದೆ ಈ ಕಮೀಶನದಿಂದಲೂ ಏನೂ ಲಾಭ ಆಗಲಿಲ್ಲ. ೧೮೯೩ರಲ್ಲಿ ಲಾಹೋರದಲ್ಲಿ ಆದ ೯ನೇ ರಾಷ್ಟ್ರೀಯ ಸಭೆಗೆ ಮತ್ತೆ ಅಧ್ಯಕ್ಷರಾದರು. ಈ ಸಾರೆ ದಾದಾಭಾಯಿಯವರು ದೇಶಭಕ್ತ ರಿರುವರೆಂದು ಹಿಂದುಸ್ಥಾನದಲ್ಲೆಲ್ಲ ತಿಳಿದುಹೋದದ್ದರಿಂದ ಮುಂಬಯಿ ಯಿಂದ ಲಾಹೋರದವರೆಗೆ ಪ್ರತಿಯೊಂದು ಸ್ಟೇಶನ್ನಿನಲ್ಲಿ ಜನರು ಇವರ ಸತ್ಕಾರವನ್ನು ಮಾಡಿದರು. ಲಾಹೋರ, ಮುಂಬಯಿಗಳಲ್ಲಿ ಮೆರವಣಿಗೆ ಗಳಾದವು. ಜನರು ಉತ್ಸಾಹದಿಂದ ರಥಕ್ಕೆ ಕಟ್ಟಿದ ಕುದುರೆಗಳನ್ನು ಬಿಚ್ಚಿ ತಾವೇ ಎಳೆದರು. ಹಿಂದುಸ್ಥಾನದ ಎಲ್ಲ ದೇಶಭಕ್ತರೂ ದಾದಾಭಾಯಿಯವ ರಿಂದ ರಾಜಕಾರಣದ ಪಾಠನ್ನು ಕಲಿತುಕೊಂಡರು. ಅಧ್ಯಕ್ಷರಾದ ದಾದಾ ಭಾಯಿಯವರ ಭಾಷಣವು ಉತ್ತಮವಾದ ಬೆಲೆಯುಳ್ಳ ರಾಜಕೀಯ ಸಂಗತಿಗಳಿಂದಲೂ ಅನುಭವದ ಮಾತಿನಿಂದಲೂ ತುಂಬಿಹೋಗಿದೆ. ಹಿಂದು ಸ್ಥಾನದ ಸ್ವಾತಂತ್ರ್ಯಕ್ಕಾಗಿ ಹೆಣಗುವ ಪ್ರತಿಯೊಬ್ಬನೂ ಅದನ್ನು ಓದಿಯೇ ತೀರಬೇಕು.

ಲಾಹೋರದ ರಾಷ್ಟ್ರೀಯ ಸಭೆಯ ನಂತರ ದಾದಾಭಾಯಿ ಯವರು ಮತ್ತೆ ಇಂಗ್ಲಂಡಕ್ಕೆ ಹೋಗಿ ಹಿಂದುಸ್ಥಾನದ ಜನರಿಗೆ ಸೈನ್ಯ ದಲ್ಲಿಯೂ, ಹಡಗುಪಡೆಯಲ್ಲಿಯೂ, ಉಚ್ಚತರಗತಿಯ ಸ್ಥಾನಗಳು ಸಿಗುವಂತೆ ಪ್ರಯತ್ನ ಮಾಡಿದರು. ಅದರ ಪರಿಣಾಮವೇನೂ ಆಗಲಿಲ್ಲ. ಪಾರ್ಲಿಮೆಂಟಿನಲ್ಲಿ ಮತ್ತೆ ಸಭಾಸದರಾಗುವ ಪ್ರಯತ್ನವನ್ನು ಮಾಡಿ ದರು. ಆದರೆ ಬ್ರಿಟಿಶ ಜನರಲ್ಲಿಯೂ ವಿಶೇಷತಃ ಉದಾರಮತದ ಸಭಾಸದ ರಲ್ಲಿಯೂ ಒಳಜಗಳಗಳಾದ್ದರಿಂದ ದಾದಾಭಾಯಿಯವರ ಕಡೆಗೆ ಯಾರೂ ಲಕ್ಷವನ್ನು ಹಾಕಲಿಲ್ಲ. ಆದರೂ ೧೯೦೪ರಲ್ಲಿ ಅಮ್‌ಸ್ಟಂಡ್ಯಾಮದಲ್ಲಿ ಆದ

'International Congress of Social Democrats' ಪ್ರಜಾಸತ್ತಾತ್ಮಕ ವಾದಿಗಳ ಕಾಂಗ್ರೆಸ್ಸಿಗೆ ಹಿಂದುಸ್ಥಾನದ ಪ್ರತಿನಿಧಿಯಾಗಿ ಹೋಗಿ ಇಡೀ ಜಗತ್ತಿನ ಮುಂದಾಳುಗಳ ಮುಂದೆ **ಹಿಂದುಸ್ಥಾನದಲ್ಲಿ ಇಂಗ್ಲೀಷರು ನಡೆಯಿಸಿದ ಅನ್ಯಾಯದ ಪಾರಾಯಣವನ್ನು ಮಾಡಿದರು.** ಈಗ ಅವರ ವಯಸ್ಸು ೮೦ ವರ್ಷ ಆಗಿದ್ದರೂ ತಾರುಣ್ಯದ ಉತ್ಸಾಹದಿಂದ ಆ ಕಾಂಗ್ರೇಸ್ಸಿನಲ್ಲಿ ಕೆಲಸ ಮಾಡಿ ಬಹು ಜನ ಸಭಾಸದರ ಸಹಾನುಭೂತಿಯನ್ನೂ ಪಡೆದರು. ಹಿಂದುಸ್ಥಾನದಲ್ಲಿ ೧೯೦೬ರ ಕಲಕತ್ತೆಯ ರಾಷ್ಟ್ರೀಯ ಸಭೆಯಲ್ಲಿ ಇಬ್ಬಣಗಳೊಳಗೆ ಜಗಳವಾಗುವ ಪ್ರಸಂಗವನ್ನು ಕಂಡು ಹಿಡಿದು ಆ ವೇಳೆಗೆ ಎಲ್ಲ ದೇಶಭಕ್ತರಿಗೂ ಮಾರ್ಗವನ್ನು ತೋರಿಸುವ ಮಹನೀಯರು ಇವರೊಬ್ಬರೇ ಇರುವರೆಂದು ನಿಶ್ಚಯಮಾಡಿ ದಾದಾಭಾಯಿಯವರನ್ನೇ ಅಧ್ಯಕ್ಷರನ್ನಾಗಿ ನಿಯಮಿಸಿದರು. ಈವರೆಗೆ ರಾಷ್ಟ್ರೀಯ ಸಭೆಯ ಅಧ್ಯಕ್ಷಸ್ಥಾನದ ಮಾನವನ್ನು ಮೂರುಸಲ ಪಡೆದವರೆಂದರೆ ದಾದಾಭಾಯಿ ನವರೋಜಿಯವರೇ. ೧೮೫೬ರಿಂದ ೧೯೦೬ರವರೆಗೆ ಅಂದರೆ ಅರ್ಧ ಶತಮಾನದವರೆಗೆ ಕೆಲಸ ಮಾಡಿದ್ದರಿಂದ ಬಂದಂಥ ಹಣ್ಣಾದ ಅನುಭವದಿಂದ ಬಂದ ಮಾತುಗಳನ್ನು ಈ ರಾಷ್ಟ್ರೀಯ ಸಭೆಯಲ್ಲಿ ಅವರು ಹೇಳಿದರು. ಇದೇ ರಾಷ್ಟ್ರೀಯ ಸಭೆಯಲ್ಲಿ ಎಚ್ಚತ್ತ ಹಿಂದುಸ್ಥಾನಕ್ಕೆ ತಪಸ್ಸಿನ ಬಲದಿಂದ ತುಂಬಿದ ಅಮರವಾಣಿಯಿಂದ **ಸ್ವರಾಜ್ಯ ಮಂತ್ರವನ್ನು** ಉಪದೇಶಿಸಿದರು. 'Instead of going into any further divisions or details of our right as British Citizens, the whole matter can be compressed in one word 'Self Government' or 'Swaraj' like that of the United Kingdom or the Colonies. 'ನಮ್ಮ ಹಕ್ಕುಗಳ ಪುರಾಣವನ್ನು ವಿಸ್ತೃತವಾಗಿ ಹೇಳುವದಕ್ಕಿಂತಲೂ ಅದನ್ನು ಒಂದೇ ವಾಕ್ಯದಲ್ಲಿ ಹೇಳಬಹುದು. ಬ್ರಿಟಿಶ್ ರಾಜ್ಯದಂತೆಯಾಗಲಿ ವಸಾಹತಿನ ರಾಜ್ಯದಂತೆಯಾಗಲೀ ಇರುವ ಅಂತರ್ಗತ ಸ್ವಾತಂತ್ರ್ಯವಾಗಲಿ ಸ್ವರಾಜ್ಯವಾಗಲಿ ನಮಗೆ ಬೇಕಾಗಿರುವದು.' ನಮ್ಮ ಸ್ವರಾಜ್ಯ ಯುದ್ಧದೊಳಗೆ ಮಾರ್ಗವನ್ನು ತೋರಿಸಿದ ಮಹಾತ್ಮನ ಮಂತ್ರವಿದು. ರಾಷ್ಟ್ರೀಯ ಸಭೆಯು ಮುಗಿದ ನಂತರ

ಮತ್ತೆ ಇಂಗ್ಲಂಡಕ್ಕೆ ಹೋಗಿ ಸ್ವರಾಜ್ಯದ ಹಕ್ಕಿನ ದೆಸೆಯಿಂದ ಹೋರಾಡಿದರು. ಆದರೆ ಮುಪ್ಪಿನಿಂದಲೂ ಕೆಲಸದಿಂದಲೂ ಇವರು ದಣಿದದ್ದರಿಂದ ಇವರ ಮೈಯಲ್ಲಿ ಸ್ವಾಸ್ಥ್ಯವಿಲ್ಲದಂತಾಯಿತು. ವೈದ್ಯರೂ ಇಂಗ್ಲಂಡವನ್ನು ಬಿಟ್ಟು ಹಿಂದುಸ್ಥಾನಕ್ಕೆ ಹೋಗಬೇಕೆಂದು ಹೇಳಿದರು. ಅದರಂತೆಯೇ ದಾದಾಭಾಯಿಯವರು ಹಿಂದುಸ್ಥಾನಕ್ಕೆ ಬಂದು ತಮ್ಮ ಸ್ವಂತ ಹಳ್ಳಿಯಲ್ಲಿಯೇ ಇರಹತ್ತಿದರು. ವರ್ಸೋವಾ ಹಳ್ಳಿಯೆಂದರೆ ತನ್ನ ಆಯುಷ್ಯವನ್ನು ಹಿಂದುಸ್ಥಾನದ ರಾಜಕೀಯ ಕಲ್ಯಾಣಕ್ಕಾಗಿ ತಪಸ್ಸುಗೆಯ್ದ ಮಹರ್ಷಿಯ ಪುಣ್ಯಾಶ್ರಮವಾಯಿತು. ಎಲ್ಲ ಮತದ, ಎಲ್ಲ ಜಾತಿಯ, ಎಲ್ಲ ಧರ್ಮದ ಜನರ ಯಾತ್ರೆಯ ಸ್ಥಾನವಾಯಿತು. ವರ್ಸೋವಾ ಅಂದರೆ ರಾಜಕೀಯ ಸುಧಾರಣೆಯನ್ನು ಮಾಡಲಿಚ್ಛಿಸುವ ಜನರ ಸ್ಫೂರ್ತಿಯ ಸ್ಥಾನವಾಗಿತ್ತು. ಮುಪ್ಪಿನಲ್ಲಿ ಬಹಳ ಅಶಕ್ತತೆಯು ಬಂದಿದ್ದರೂ ಪ್ರತಿ ವರ್ಷ ನಡೆಯುವ ರಾಷ್ಟ್ರೀಯ ಸಭೆಗೆ ತಮ್ಮ ಆಶೀರ್ವಾದಗಳನ್ನು ಕೊಡುತ್ತಿದ್ದರು. ಮತ್ತು ಮುಂದಿನ ಕೆಲಸವನ್ನು ಹೇಗೆ ಸಾಗಿಸಬೇಕೆಂಬುದರ ಬಗ್ಗೆ ಜಾಣತನದ ಸಲಹೆಗಳನ್ನು ಕೊಡುತ್ತಿದ್ದರು. ೧೯೦೯ ರಲ್ಲಿ ಮೋರ್ಲೆ ಮಿಂಟೋ ಸುಧಾರಣೆಗಳು ಸಿಕ್ಕಕೂಡಲೇ ತಾವು ಪ್ರಯತ್ನಪಟ್ಟಂಥ ಕೆಲಸದ ಅಂಶವಾದರೂ ಜನರಿಗೆ ಸಿಕ್ಕಿತೆಂದು ದಾದಾಭಾಯಿಯವರಿಗೆ ಸಮಾಧಾನವೆನಿಸಿತು. ೧೯೧೧ ರಲ್ಲಿ ರಾಜ–ದಂಪತಿಗಳು ಹಿಂದುಸ್ಥಾನಕ್ಕೆ ಬಂದಾಗ ಅವರ ವಿಷಯದಲ್ಲಿ ಪ್ರೇಮವನ್ನು ವ್ಯಕ್ತ ಮಾಡಿದ್ದಲ್ಲದೆ, ಬ್ರಿಟಿಶ ರಾಜರಲ್ಲಿ ಪ್ರೀತಿಮಾಡಿರೆಂದು ಜನರಿಗೂ ಬೋಧಿಸಿದರು. ೧೯೧೪ ರಲ್ಲಿ ಮಹಾಯುದ್ಧವು ಪ್ರಾರಂಭವಾಗಲು ಹಿಂದುಸ್ಥಾನದ ಸುಧಾರಣೆಯು ಇಂಗ್ಲೀಷರಿಂದಲೇ ಬರುವದಾದ್ದರಿಂದ ಇಂಗ್ಲಂಡದ ಗಂಡಾಂತರದಲ್ಲಿ ಅವರಿಗೆ ಸಹಾಯ ಮಾಡುವದೇ ಹಿಂದೀ ಜನರ ಕರ್ತವ್ಯವಿದೆಯೆಂದು ಜನರನ್ನು ಸಹಾಯಕ್ಕೆ ಹುರಿದುಂಬಿಸಿದರು.

೪ನೇ ಸಪ್ಟಂಬರ ೧೯೧೫ನೇ ದಿನ ದಾದಾಭಾಯಿಯವರ ೯೧ನೇ ಹುಟ್ಟಿದ ದಿನವಾದ್ದರಿಂದ ಹಿಂದುಸ್ಥಾನದೊಳಗೆಲ್ಲ ಆನಂದದಿಂದ ಈ ಉತ್ಸ

ವವು ಮಾಡಲ್ಪಟ್ಟಿತು. ಮುಂಬಯಿಯ ಗವ್ಹರ್ನರನೂ ಅವರ ಅಭಿನಂದನ ವನ್ನು ಮಾಡಿದನು. ಹಿಂದುಸ್ಥಾನದ ಎಲ್ಲ ದೇಶಭಕ್ತರೂ ಮುಖ್ಯ ಸಂಸ್ಥೆ ಗಳೂ ಅವರಿಗೆ ದೇವರು ಆಯುರಾರೋಗ್ಯವನ್ನು ನೀಡಲೆಂದು ಬೇಡಿ ಕೊಂಡರು. ೧೯೧೬ನೆಯ ಫೆಬ್ರುವರಿ ತಿಂಗಳಲ್ಲಿ ಮುಂಬಯಿಯ ವಿಶ್ವ ವಿದ್ಯಾಲಯವು **ಡಾಕ್ಟರ ಆಫ್ ಲಾಜ** (L. L. D.)ಎಂಬ ಬಹು ಮಾನದ ಪದವಿಯನ್ನು ಕೊಟ್ಟು ಇವರ ಸನ್ಮಾನ ಮಾಡಿತು. ಹಿಂದು ಸ್ಥಾನಕ್ಕೆ ಬರುಹೋಗುವ ಗವ್ಹರ್ನರರಿಗೂ ವ್ಹಾಯಿಸರಾಯರಿಗೂ ಸಿಗುವ ಈ ಪದವಿಯು ದಾದಾಭಾಯಿಯವರಿಗೆ ೯೧ನೆಯ ವರ್ಷ ಸಿಕ್ಕಿತು. ಸಿಕ್ಕಿತು ಅನ್ನುವದರಲ್ಲಿಯೇ ಸಂತೋಷ. ಜೂನ ೧೯೧೭ರಲ್ಲಿ ಮೈಯಲ್ಲಿ ಅಸ್ವಸ್ಥವಾಗಲು ಮರುದಿನ ಅವರನ್ನು ಔಷಧದ ದೆಸೆಯಿಂದ ಮುಂಬಯಿಗೆ ಒಯ್ಯಲಾಯಿತು. ಜೂನ ೩೦ನೆಯ ತಾರೀಖಿನ ದಿವಸ ಅವರು ಈ ಮರ್ತ್ಯಲೋಕವನ್ನು ಬಿಟ್ಟು ತೆರಳಿದರು. ಯಾವ ರಾಜ್ಯದಲ್ಲಿ ಯಾದರೂ ಜನರ ಹಿತವನ್ನು ಬಯಸುವವನಿಗೆ ರಾಜರು ವೈರಿಗಳಾಗು ತ್ತಾರೆ. ರಾಜರ ಹಿತವನ್ನು ಬಯಸುವವರು ಜನರ ವೈರಿಗಳಾಗುತ್ತಾರೆ. ಒಬ್ಬ ಕವಿಯು

"ನರಪತಿ ಹಿತಕರ್ತಾ ದ್ವೇಷ್ಯತಾಂ ಯಾತಿ ಲೋಕೇ।
ಜನಪದ ಹಿತಕರ್ತಾ ತ್ಯಜ್ಯತೇ ಪಾರ್ಥಿವೇನ॥
... ... ... ... ... ...
ನೃಪದಿ ಜನಪದಾನಾಂ ದುರ್ಲಭಃ ಕಾರ್ಯಕರ್ತಾ॥

ಆದರೆ ರಾಜ ಪ್ರಜರಿಗೆ ಸಮಾನಾಗಿ ಹಿತವನ್ನು ಬಯಸಿ ಇಬ್ಬರಿಂದಲೂ ಸೈ ಎನಿಸಿಕೊಳ್ಳುವ ಸತ್ಪುರುಷನು ಈ ಜಗತ್ತಿನಲ್ಲಿ ಬಹಳ ಅಪರೂಪ ನಾಗಿರುವನು. ದಾದಾಭಾಯಿಯವರು ಬ್ರಿಟಿಶ ಸಾಮ್ರಾಜ್ಯವು ಶಾಶ್ವತ ವಾಗಬೇಕೆಂದು ಪ್ರತಿಪಾದಿಸುತ್ತಿದ್ದುದರಿಂದ ಬ್ರಿಟಿಶ ಪಾರ್ಲಿಮೆಂಟಿನ ಸಭಾಸದರಾದರು. ಸ್ವರಾಜ್ಯಕ್ಕಾಗಿ ಹೋರಾಡುತ್ತಿದ್ದುದರಿಂದ ಹಿಂದು ಸ್ಥಾನದ ಜನತೆಯು ಕೊಡುವ ದೊಡ್ಡ ಮರ್ಯಾದೆಯನ್ನು—ಅಖಿಲ

ರಾಷ್ಟ್ರೀಯ ಸಭೆಯ ಅಧ್ಯಕ್ಷ ಸ್ಥಾನವನ್ನು—ಮೂರು ಸಲ ಪಡೆದರು. ಹಿಂದುಸ್ತಾನದ ದೇಶಭಕ್ತರಿಗೆ ಅವರು ಎಷ್ಟು ಪ್ರಿಯರಾಗಿದ್ದರೋ ಅಷ್ಟೇ ಇಂಗ್ಲೀಷ ಪಾರ್ಲಿಮೆಂಟಿನ ಮುತ್ಸದ್ದಿಗಳಿಗೂ ಸಹ ಅವರು ಪ್ರಿಯರಾಗಿದ್ದರು. ಈ ಪ್ರಕಾರವಾಗಿ ೧೮೫೬ರಿಂದ ೧೯೦೬ರ ವರೆಗೆ ಸತತ ೪ ತಪಗಳ ವರೆಗೆ ಲೋಕ ಕಲ್ಯಾಣದ ದೀರ್ಘ ತಪಸ್ಸನ್ನು ಮಾಡಿ ಜನತೆಯಿಂದ ‘The grand old man of India’ ‘ಹಿಂದುಸ್ತಾನದ ದಿವ್ಯ ಋಷಿ’ ಎಂಬ ಪ್ರೀತಿಯ ಬಿರುದನ್ನು ಪಡೆದ ಮಹರ್ಷಿಯನ್ನು ಯಾರು ಮರೆಯುವರು?

---

# ಭಾರತಕ್ಕೆ ಮುಸುಕಿದ ಮಂಜು

ಮಹರ್ಷಿ ದಾದಾಭಾಯಿ ನವರೋಜಿಯವರು ಮಾಡಿದ ಕಾರ್ಯದ ಮಹತ್ವವು ತಿಳಿಯಬೇಕಾದರೆ ಅವರ ಕಾಲದ ಹಿಂದುಸ್ತಾನದ ವಿಷಯವಾಗಿ ಸ್ವಲ್ಪ ಹೇಳಲೇಬೇಕು. ೧೮೩೫ರಲ್ಲಿ ಬಂಗಾಲದಲ್ಲಿ ಶಿಕ್ಷಣವು ಪ್ರಾರಂಭಮಾಡಲ್ಪಟ್ಟಿತು. ಹಿಂದುಸ್ತಾನವು ರಾಷ್ಟ್ರವಾಗಿ ತಮ್ಮನ್ನು ಹೊರಗೆ ಹಾಕಬೇಕೆಂದು ಸರಕಾರದ ಮತವಿರಲಿಲ್ಲವೆಂಬುದು ಸ್ವಾಭಾವಿಕವೇ ಆಗಿದೆ. ಹೊಸ ಶಿಕ್ಷಣದಿಂದ ಸರಕಾರಕ್ಕೆ ಅನುಕೂಲರಾದಂಥ ನೌಕರರನ್ನು ಸಿದ್ಧಪಡಿಸುವದೇ ಅವರಿಗೆ ಬೇಕಾಗಿತ್ತು. ಮತ್ತು ಹೊಸ ಶಿಕ್ಷಣದಿಂದ ಇಲ್ಲಿಯ ದೇಶೀಯ ಜನರು ತಮ್ಮ ಸಂಸ್ಕೃತಿ, ಆಚಾರ ವಿಚಾರಗಳನ್ನು ಮರೆತು ಬ್ರಿಟಿಶ ಸರಕಾರದ ಸೇವಾವೃತ್ತಿಯೇ ರಾಜವೃತ್ತಿಯೆಂದು ತಿಳಿಯುವಂತೆ ಮಾಡಿ ತಮ್ಮ ರಾಜ್ಯವನ್ನು ಶಾಶ್ವತವಾಗಿ ನಡೆಯಿಸಿ ಹಿಂದುಸ್ತಾನದ ಸಂಪತ್ತಿಯನ್ನೂ ಕೂಲಿಯನ್ನೂ ಸೂರೆಗೊಳ್ಳಬೇಕೆಂಬುದೇ ಅವರ ಉದ್ದೇಶವಾಗಿತ್ತು. ಇಂಗ್ಲೀಷು ಕಲಿತಂಥ ಜನರಲ್ಲಿ ತಮ್ಮ ಸಂಸ್ಕೃತಿಯ ಬಗ್ಗೆ ತಿರಸ್ಕಾರ, ತಮ್ಮ ಆಚಾರ ವಿಚಾರಗಳ ಮೇಲೆ ಅಪ್ರೀತಿ, ಪರಕೀಯರ ಆದಿಭೌತಿಕ ಸಂಸ್ಕೃತಿಯ ಮೇಲೆ ಉಚ್ಚವಾದಂಥ ಭಕ್ತಿ ಇವೇ ಮೊದಲಾದವು ಮೊದಲು ಸುಶಿಕ್ಷಿತ ಜನರಲ್ಲಿ ನೆಲೆಗೊಂಡವು. ಎಷ್ಟೋ ಗೃಹಸ್ಥರು ತಮ್ಮ ಮಕ್ಕಳನ್ನು ಸಂಪೂರ್ಣ ಇಂಗ್ಲೀಷ ಸಂಸ್ಕೃತಿಯ ಜ್ಞಾನವಾಗಬೇಕೆಂದು ಇಂಗ್ಲಂಡಕ್ಕೆ ಕಳಿಸಹತ್ತಿದರು. ಅವರು ಇಂಗ್ಲೀಷರ ರಾಜಕೀಯ ಧ್ಯೇಯಗಳನ್ನೂ ಅವರ ಭಾಷೆಯನ್ನೂ ಆಚಾರ ವಿಚಾರಗಳನ್ನೂ ಇತಿಹಾಸವನ್ನೂ ಕಲಿತು ಬ್ಯಾರಿಸ್ಟರರಾಗಿ ಹಿಂದುಸ್ತಾನಕ್ಕೆ ಮರಳಿ ಬರಹತ್ತಿದರು. ಕೆಲವರು ಹಿಂದೂ ಧರ್ಮವು ಕಾಡು ಧರ್ಮವೆಂದು ತಿಳಿದು ಕ್ರಿಶ್ಚನ್ನರೂ ಆದರು. ೧೮೫೫ರಲ್ಲಿ ಸಿವಿಲ್ ಸರ್ವಿಸ ಪರೀಕ್ಷೆಯು ಆಗಿದ್ದರಿಂದ ಎಷ್ಟೋ ದೈವುಳ್ಳ ಜನರು ತಮ್ಮ ಮಕ್ಕಳಿಗೆ ತಿಂಗಳಿಗೆ ಹೆಡಿಗೆ ತುಂಬ ಹೊನ್ನು ಸಿಗಲೆಂದು

ಅವರನ್ನು ಚಿಕ್ಕಂದಿನಿಂದಲೇ ಇಂಗ್ಲಂಡಕ್ಕೆ ಕಳಿಸುತ್ತಿದ್ದರು. ಮೊದಲಿನ ಸುಶಿಕ್ಷಿತ ಜನರು ಇಂಗ್ಲೀಷರ ಸಂಗಡ ಮಾಂಸಾಹಾರವನ್ನೂ ಮದ್ಯ ಪಾನವನ್ನೂ ಅದರ ಸಂಗಡವೇ ಅವರ ಸ್ವಾತಂತ್ರ್ಯ ವೃತ್ತಿಯನ್ನೂ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಲಾಭಗಳನ್ನೂ ಕಂಡುಕೊಂಡು ತಿರುಗಿ ಹಿಂದುಸ್ಥಾನಕ್ಕೆ ಬರುತ್ತಿದ್ದರು. ಕೆಲವರು ನ್ಯಾಯಾಧೀಶರಾಗು ತ್ತಿದ್ದರು. ಕೆಲವರು ಬ್ಯಾರಿಸ್ಟರರಾಗುತ್ತಿದ್ದರು. ಕೆಲವರು ಆಯ್. ಸಿ. ಎಸ್. ಪರೀಕ್ಷೆಯಲ್ಲಿ ಒಂದನೇ ವರ್ಗದಲ್ಲಿ ತೇರ್ಗಡೆಹೊಂದಿ ನೌಕರಿ ಗಳನ್ನು ಹಿಡಿಯುತ್ತಿದ್ದರು. ಆದರೂ ಹಿಂದುಸ್ಥಾನಕ್ಕೆ ಬಂದ ಕೂಡಲೇ ತಮ್ಮ ದೇಶದಲ್ಲಿ ತಾವೇ ಗುಲಾಮರಾಗಿದ್ದೇವೆಂಬುದರ ಅರಿವು ಅವರಿಗೆ ಆಗದೆ ಇರಲಿಲ್ಲ. ನಮ್ಮ ಜನರು ಬೇಕಾದ ಪರೀಕ್ಷೆಗಳನ್ನು ಪಾಸಾಗಿ ಬಂದರೂ ಇಂಗ್ಲೀಷ ಜನರಿಗೆ ಆಳಾಗಿರುವದು ಅವರ ಹಣೆಯ ಬರಹದಲ್ಲಿ ಬರೆದಿದೆಂಬುದು ಸುಶಿಕ್ಷಿತ ಜನರ ಲಕ್ಷ್ಯಕ್ಕೆ ಬಂದು ಅವರ ಸ್ವಾಭಿ ಮಾನವು ಜಾಗೃತವಾಗಿ ಅಸಂತೋಷವು ಉತ್ಪನ್ನವಾಗತೊಡಗಿತು. ಇಂಗ್ಲೀಷ ಜನರಿಂದ ಕಲಿತ ಗುಣಗಳಲ್ಲಿ ಸಂಘಟನಾ ಶಕ್ತಿಯು ಮೇಲಾ ದದ್ದು. ಸಂಘ ಶಕ್ತಿಯು ಸುಶಿಕ್ಷಿತರಲ್ಲಿ ಉತ್ಪನ್ನವಾಗಹತ್ತಿತು. ರಾಜ ಕಾರಣದಲ್ಲಿಯೂ ಈ ಶಕ್ತಿಯ ಉಪಯೋಗವೇ ಪ್ರಾಧಾನ್ಯವಾಗುತ್ತಿ ದ್ದುದರಿಂದ ಕಲಕತ್ತಾ, ಮದ್ರಾಸ, ಮುಂಬಯಿಯಂಥ ದೊಡ್ಡ ಪಟ್ಟಣ ಗಳಲ್ಲಿ ಹಿಂದುಸ್ಥಾನದ ರಾಜಕೀಯ ಸ್ಥಿತಿಯನ್ನು ಸುಧಾರಿಸುವದಕ್ಕಾ ಗಿಯೂ ರಾಜ್ಯದಲ್ಲಿಯ ಹೊಣೆಗಾರಿಕೆಯ ಅಧಿಕಾರದ ಸ್ಥಳಗಳನ್ನು ಹಿಂದೀಯರಿಗೆ ಕೊಡಬೇಕೆಂದೂ ಪ್ರಯತ್ನಗಳನ್ನು ಮಾಡುವದಕ್ಕೆ ಬೇಕಾದ ಸಂಘ ಶಕ್ತಿಯನ್ನು ಹುಟ್ಟಿಸುವದಕ್ಕಾಗಿಯೂ ಸುಶಿಕ್ಷಿತಜನರು ಸಂಘಗಳನ್ನು ತೆಗೆದರು. ತಮ್ಮ ಅಭಿಪ್ರಾಯಗಳನ್ನೂ ಹೊರಪಡಿಸಲೋ ಸುಗ ವರ್ತಮಾನ ಪತ್ರಗಳನ್ನೂ ತೆಗೆದರು. ೧೮೫೭ರಲ್ಲಿ ಬಂಡಾಯವಾಗಿ ಹಿಂದುಸ್ಥಾನದ ಸ್ವಾತಂತ್ರ್ಯರವಿಯು ಅಸ್ತಂಗತನಾದನು. ಇಂಗ್ಲೀಷ ಜನರು ನಮ್ಮನ್ನು ಸದೈವ ತಮ್ಮ ಆಳುಗಳನ್ನಾಗಿ ಇಟ್ಟುಕೊಳ್ಳು ವದಕ್ಕಾಗಿ ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡರು. ಮದಾಂಧವಾದ

ಆನೆಯನ್ನು ಉಪವಾಸವಿಟ್ಟು ಅಂಕುಶದ ಬಲದಿಂದ ಅದನ್ನು ತನ್ನ ಅಂಕಿತವನ್ನಾಗಿ ಮಾಡುವಂತೆ ಇಂಗ್ಲೀಷರು ನಮ್ಮ ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡು ತಮ್ಮ ಉಗ್ರಾಣವು ತುಂಬುವದಕ್ಕೆ ಅನುಕೂಲವಾದ ರಾಜ್ಯಕಾರಭಾರವನ್ನು ಸ್ಥಾಪಿಸಿದರು. ದೊಡ್ಡ ಸಂಬಳದ ಸ್ಥಾನಗಳನ್ನೆಲ್ಲ ತಮ್ಮ ಕಡೆಗೇ ಇಟ್ಟುಕೊಂಡು ಮಿಕ್ಕುಳಿದ ಚಿಕ್ಕಪುಟ್ಟ ಕೆಲಸಕ್ಕೆಲ್ಲ ಹಿಂದೀಯರನ್ನಿಟ್ಟು ತಾವೇ ಹಿಂದುಸ್ಥಾನದ ಸಂಪತ್ತನ್ನು ಉಪಭೋಗಿಸಹತ್ತಿದರು. ರಾಜಕೀಯ ಮತ್ತು ಆರ್ಥಿಕ ಅನ್ಯಾಯಗಳನ್ನು ದೂರಮಾಡಲಿಕ್ಕೆ ಸರಕಾರಕ್ಕೆ ವಿನಂತಿ ಮಾಡಿಕೊಳ್ಳುವ ಕಾಯದೇಬದ್ಧ (Constitutional) ಮಾರ್ಗದ ಹೊರತು ಹಿಂದೂ ಜನರಿಗೆ ಬೇರೆ ಮಾರ್ಗವಿಲ್ಲದಾಯಿತು. ೧೮೫೮ರಲ್ಲಿ ಬಂಡಾಯವು ಶಾಂತವಾದ ನಂತರ ವ್ಹಿಕ್ಟೋರಿಯಾ ಮಹಾರಾಣಿಯು ಒಂದು ಜಾಹೀರನಾಮೆಯನ್ನು ತೆಗೆದಿದ್ದಳು. ಅದರಲ್ಲಿ ೧೮೩೩ರ ಕಾಯದೆಯಲ್ಲಿ ಅಂದಿರುವದನ್ನೇ ಸತ್ಯವಾಗಿ ತೋರಿಸುವೆವೆಂದು ಬರೆದಿತ್ತು. ೧೮೩೩ರ ಕಾಯದೆಯಲ್ಲಿ

'That no native of the said territories, nor any natural born subject of His Magesty resident therein, shall, by reason only of his religion, place of birth, descent, colour or any of them, be disabled from holding any place office or employment under the said company.'

'ಧರ್ಮ ಜಾತಿ ವಂಶಗಳ ಭೇದವಿಲ್ಲದೆ ನಮ್ಮ ರಾಜ್ಯಕಾರಭಾರದಲ್ಲಿ ದೇಶೀಯ ಜನರಿಗೆ ಬೇಕಾದ ಅಧಿಕಾರದ ಸ್ಥಾನವನ್ನು ಕೊಡುವೆವೆಂದು' ಬರೆದಿತ್ತು.

ವ್ಹಿಕ್ಟೋರಿಯಾ ಮಹಾರಾಣಿಯವರ ಜಾಹೀರನಾಮೆಯಲ್ಲಿಯೂ ಇದೇ ತತ್ವವನ್ನು ಹೇಳಿತ್ತು. ಇದನ್ನೇ ತಮ್ಮ ಆಧಾರವಾಗಿಟ್ಟುಕೊಂಡು ನೀವು ಹೇಳಿದ ಪರೀಕ್ಷೆಗೆ ಕೂಡುತ್ತೇವೆ. **ಇಂಗ್ಲೀಶ ಜನರಿಗೆ ಯಾವ ಅಧಿಕಾರಗಳನ್ನು ಕೊಡುತ್ತಿರುವಿರೋ ಅವುಗಳನ್ನು ನಮಗೂ ಕೊಡಿರಿ** ಎಂಬದಾಗಿ ಸರಕಾರಕ್ಕೆ ಬೇಡಿಕೊಳ್ಳುವದಕ್ಕೂ ಅವರ ವಿಷಯವಾಗಿ ಚಳವಳಿಯನ್ನು ಮಾಡಲಿಕ್ಕೂ ಅನೇಕ ಸಂಘಗಳು ಹೊರಟವು. ೧೮೫೧ರಲ್ಲಿ ಬ್ರಿಟಿಶ್ ಇಂಡಿಯನ್ ಅಸೋಸಿಯೇಶನ್ ಎಂಬ ಸಂಸ್ಥೆಯು

ಬಂಗಾಲದಲ್ಲಿ ಮತ್ತು ಮುಂಬಯಿಯಲ್ಲಿ ಬಾಂಬೆ ಅಸೋಸಿಯೇಶನ್ ಎಂಬ ಸಂಸ್ಥೆಯೂ ತೆಗೆಯಲ್ಪಟ್ಟವು. ಕೆಲವು ದಿವಸಗಳ ಮೇಲೆ ಮದ್ರಾಸ ದಲ್ಲಿಯೂ ಮದ್ರಾಸ್ ನೇಟಿವ್ಹ ಅಸೋಸಿಯೇಶನ್ ಎಂಬದೊಂದು ಸಂಸ್ಥೆಯು ತೆಗೆಯಲ್ಪಟ್ಟಿತು. ತಮ್ಮ ರಾಜಕೀಯ ಮತ್ತು ಸಾಮಾಜಿಕ ಮತಗಳನ್ನು ಪ್ರಸಾರ ಮಾಡಲಿಕ್ಕೆಂದು 'ಹಿಂದೂ ಪೆಟ್ರಿಯಟ್, ಇಂಡಿ ಯನ್ ಮಿಶನ್, ಅಮೃತಬಝಾರ ಪತ್ರಿಕಾ, ಬ್ರಹ್ಮ ಪಬ್ಲಿಕ್ ಓಪಿನಿ ಯನ್, ಸುಲಭಸಮಾಚಾರ ಮುಂತಾದ ವರ್ತಮಾನಪತ್ರಗಳು ಬಂಗಾಲ ದಲ್ಲಿಯೂ ರಾಸ್ತಗೋಫಟಾರ, ಬಾಂಬೇಸಮಾಚಾರ, ಇಂದುಪ್ರಕಾಶ, ಜ್ಞಾನಪ್ರಕಾಶ, ಕೇಸರಿ, ಮರಾಠಾ ಮುಂತಾದವುಗಳು ಮುಂಬಯಿ ಪ್ರಾಂತದಲ್ಲಿಯೂ ಹಿಂದೂ, ಸ್ಟ್ಯಾಂಡರ್ಡ, ಸ್ವದೇಶಮಿತ್ರನ್ ಎಂಬವು ಮದ್ರಾಸದಲ್ಲಿಯೂ ಟ್ರಾಯಬ್ಯೂನ ಪತ್ರವು ಲಾಹೋರದಲ್ಲಿಯೂ ಹೆರಾಲ್ಡವೆಂಬುದು ಬಿಹಾರದಲ್ಲಿಯೂ ಆಡ್ವೊಕೇಟ ಎಂಬುದು ಲಖನೌ ದಲ್ಲಿಯೂ ಹೊರಡಹತ್ತಿದವು. ೧೮೭೫ರಲ್ಲಿ ಇಡೀ ಹಿಂದುಸ್ಥಾನದಲ್ಲಿ ೫೦೦ರ ಮೇಲೆ ವರ್ತಮಾನ ಪತ್ರಗಳಿದ್ದವು. ಇವೆಲ್ಲ ಪತ್ರಗಳ, ಸಂಘಗಳ ಉದ್ದೇಶವು ಹಿಂದುಸ್ಥಾನವನ್ನು ರಾಷ್ಟ್ರವನ್ನಾಗಿ ಮಾಡಿ ಅದರಲ್ಲಿ ಯುರೋಪದಲ್ಲಿಯಂತೆ ಪ್ರಜಾ ಸತ್ತಾತ್ಮಕ ರಾಜ್ಯಕಾರಭಾರವನ್ನು ಸ್ಥಾಪಿಸುವದೇ ಇತ್ತು. ಆದರೂ ಹಿಂದುಸ್ಥಾನದ ಬೇರೆ ಬೇರೆ ಭಾಗ ಗಳಿಂದ ಬಂದ ಪ್ರತಿನಿಧಿಗಳು ಒಟ್ಟು ಗೂಡಿ ಕೆಲಸ ಮಾಡಲಿಕ್ಕೆ ಇನ್ನೂ ಅನುವು ಇರಲಿಲ್ಲ. ಹಿಂದುಸ್ಥಾನಕ್ಕೆ ಹೆಚ್ಚು ಸ್ವಾತಂತ್ರ್ಯವು ಸಿಕ್ಕು ಅದರ ರಾಜ್ಯಕಾರಭಾರದಲ್ಲಿ ಸುಧಾರಣೆಯಾಗಬೇಕೆಂದು ಇಂಗ್ಲಂಡ ದಲ್ಲಿಯ ಜಾನಬ್ರಾಯಿಟ್, ಹೆನ್ರಿಫಾಸೆಟ್, ಚಾರ್ಲಸಬ್ರಾಡಲಾ, ಎ. ಓ. ಹ್ಯೂಮ, ಸರ ಹೆನ್ರಿಕೊಟನ್, ಸರ ವಿಲಿಯಂ ವೆಡರಬರ್ನ, ಗ್ಲಾಡಸ್ಟನ್ ಮುಂತಾದ ಮುತ್ಸದ್ದಿಗಳೂ ಹೋರಾಡುತ್ತಿದ್ದರು.

---

# ಆಶಾಕಿರಣಗಳ ಝುಳುಕು

ಎ. ಎ. ಓ. ಹ್ಯೂಮ ಸಾಹೇಬರು ಹಿಂದುಸ್ಥಾನ ಸರಕಾರದ ಹೋಮ ಡಿಪಾರ್ಟಮೆಂಟಿನ ಸೆಕ್ರೆಟರಿಯಾಗಿದ್ದರು. ೧೮೭೦ರಿಂದ ೧೮೭೯ರ ವರೆಗೆ ಆದ ಎಲ್ಲ ಸಂಗತಿಗಳನ್ನು ಲಕ್ಷ್ಯಪೂರ್ವಕವಾಗಿ ಕಂಡು ಹಿಡಿದಿದ್ದರು. ಲಾರ್ಡ ಲಿಟನ್ನನ ಆಳಿಕೆಯಿಂದ ಜನರಲ್ಲಿ ಹುಟ್ಟಿದ ಅಸಂತೋಷವನ್ನು ಹೋಗಲಾಡಿಸುವದಕ್ಕೆ ಇವರು ದೀರ್ಘಪ್ರಯತ್ನ ಮಾಡಿದರು. ಇದೇ ಕಾರ್ಯದ ದೆಸೆಯಿಂದ ೧೮೮೨ರಲ್ಲಿ ಅವರು ತಮ್ಮ ಅಧಿಕಾರಕ್ಕೆ ರಾಜೀನಾಮೆಯನ್ನು ಕೊಟ್ಟು ಇದೇ ಕಾರ್ಯಕ್ಕೆ ಟೊಂಕ ಕಟ್ಟಿದರು. ೧೮೮೩ರ ಮಾರ್ಚ ೧ನೇ ತಾರೀಖಿನ ದಿನ ಕಲಕತ್ತೆಯ ನೂತನ ಪದವೀಧರ (Graduates)ರನ್ನುದ್ದೇಶಿಸಿ ಒಂದು ಪತ್ರವನ್ನು ಪ್ರಸಿದ್ಧ ಮಾಡಿದರು. ಆ ಪತ್ರದಲ್ಲಿ ಸುಶಿಕ್ಷಿತ ಹಿಂದೀ ಜನರ ಕರ್ತವ್ಯವನ್ನು ಹೇಳಿ ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಏನಾದರೂ ಮಾಡಬೇಕೆಂದು ಅವರು ಬರೆದಿದ್ದರು. ಅವರು ಬರೆದದ್ದು :—

'And if even the leaders of thought are all either such poor creatures, or so selfishly wedded to personal concerns that they dare not strike a blow for thair country's sake then firstly and rightly are they kept down and trampled on, for they deserve nothing better '

'ನಿಮ್ಮ ಸಮಾಜದೊಳಗಿನ ವಿಚಾರಾಗ್ರಣಿಗಳು ಇಷ್ಟು ಸ್ವಾರ್ಥಿಗಳಿದ್ದರೆ ತಮ್ಮ ದೇಶದ ಸಲುವಾಗಿ ಒಂದು ಕಡತವನ್ನು ಹಾಕಲಿಕ್ಕೆ ಸಿದ್ಧರಾಗದಿದ್ದರೆ ಪರಕೀಯರು ಅವರನ್ನು ನೀಚ ಸ್ಥಿತಿಯಲ್ಲಿಟ್ಟು ತುಳಿಯುತ್ತಿರತಕ್ಕದ್ದು ನ್ಯಾಯವೇ ಸರಿ. ಯಾಕೆಂದರೆ ಇದರಕಿಂತ ಅವರ ಯೋಗ್ಯತೆಯೇ ಮೇಲಾದದ್ದಿಲ್ಲ.'

ಆ ಮೇಲೆ ಪ್ರತಿಯೊಂದು ರಾಷ್ಟ್ರಕ್ಕೆ ಅದರ ಯೋಗ್ಯತೆಯಂತೆಯೇ ರಾಜ್ಯಕಾರಭಾರವು ಸಿಗುತ್ತದೆಂದು ಬಗೆದು 'Men know how to act' ಹೇಗೆ ನಡೆಯಬೇಕೆಂಬುದು ಪುರುಷರಿಗೆ ಗೊತ್ತಿರುತ್ತದೆ'ಂದು ಹುರಿದುಂಬಿಸಿದ್ದಾರೆ.

ಮತ್ತು ಕಟ್ಟಕಡೆಗೆ ಸ್ವಾತಂತ್ರ್ಯವೆಂದರೇನು ಹೂವಿನ ಹಾಸಿಗೆಯಲ್ಲ ವೆಂದು ಹೇಳಿ

'Self sacrifice and unselfishness are the only unfailing guides to freedom and happiness'

'ಸ್ವಾರ್ಥತ್ಯಾಗವೂ ನಿಷ್ಕಾಮಕರ್ಮವೂ ಸ್ವಾತಂತ್ರ್ಯ ಮತ್ತು ಸುಖಗಳ ದಾರಿಯಾಗಿರುತ್ತದೆಂದು'

ಮುಗಿಸಿದ್ದಾರೆ. ಈ ಪತ್ರವು ಪ್ರಸಿದ್ಧವಾದ ಕೂಡಲೇ ಎಲ್ಲ ಸುಶಿಕ್ಷಿತ ಜನರಲ್ಲಿ ಪ್ರಚಂಡ ಚಳವಳ ಉಂಟಾಯಿತು. ಮತ್ತು ಹಿಂದುಸ್ತಾನದ ಹಿತಾಹಿತಗಳನ್ನು ಚರ್ಚಿಸಲಿಕ್ಕೆಂದು ಕಲಕತ್ತೆಯಲ್ಲಿ 'Indian National Union' ಇಂಡಿಯನ್ ನ್ಯಾಶನಲ್ ಯೂನಿಯನ್ ಅಂದರೆ ಹಿಂದುಸ್ತಾನದ ರಾಷ್ಟ್ರೀಯ ಸಂಘವು ಸ್ಥಾಪಿಸಲ್ಪಟ್ಟಿತು. ಕಲಕತ್ತೆಯ ಮುಂದಾಳುಗಳು ಮುಂಬಯಿಯ ಮುಂದಾಳುಗಳಿಗೆ ಪತ್ರವನ್ನು ಬರೆದು ಏನಾದರೂ ಕಾರ್ಯವನ್ನು ಒಟ್ಟುಗೂಡಿ ಮಾಡಬೇಕೆಂದು ಗೊತ್ತಾಯಿತು. ಮತ್ತು ಹಿಂದುಸ್ತಾನದ ರಾಜಕೀಯ ಕಾರ್ಯವನ್ನು ಮಾಡುವದಕ್ಕೋಸಲುವಾಗಿ ವಿಚಾರಿಸಲಿಕ್ಕೆ ಹಿಂದುಸ್ತಾನದ ಎಲ್ಲ ಪ್ರಾಂತದ ಮುಂದಾಳುಗಳು ಬರಬೇಕೆಂದು ವಿನಂತಿಯೂ ಮಾಲ್ಪಟ್ಟಿತು. ೧೮೮೫ರ ಡಿಸೆಂಬರದಲ್ಲಿ ಈ ಸಭೆಯು ಪುಣೆಯಲ್ಲಿ ಕೂಡಬೇಕೆಂದು ನಿಶ್ಚಯವಾಯಿತು. ಇದರ ಉದ್ದೇಶವು ಈ ಪ್ರಕಾರವಾಗಿ ಹೇಳಿದೆ.

'The direct objects of the conference will be:- (1) To enable all the most earnest labuorers in the cause of national progress to become personally known to each other, (2) to discuss and decide upon the political operations to be undertaken during the ensuing year'

'ಈ ಸಂಘದ ಉದ್ದೇಶಗಳೇನಂದರೆ :-(೧) ರಾಷ್ಟ್ರೀಯ ಪ್ರಗತಿಯ ಬಗ್ಗೆ ಕೆಲಸ ಮಾಡುವ ಮುಂದಾಳುಗಳೆಲ್ಲರೂ ಪರಸ್ಪರ ಭೆಟ್ಟಿಯಾಗಬೇಕು. ಮತ್ತು ಅವರಲ್ಲಿ ಪ್ರೀತಿಯುಂಟಾಗಬೇಕು. (೨) ಮುಂದಿನ ವರ್ಷ ಮಾಡುವ ಕಾರ್ಯವನ್ನು ಚರ್ಚಿಸಿ ನಿಶ್ಚಿತ ಮಾಡುವದು'.

ಇತ್ತ ಹ್ಯೂಮ ಸಾಹೇಬರು ಆಗಿನ ವ್ಹಾಯಿಸರಾಯರಾದ ಲಾರ್ಡ

ಡಫರಿನ್ನರ ಸಂಗಡ ಮಾತನಾಡಿ ಹಿಂದುಸ್ತಾನದ ಪ್ರಗತಿಯಾಗಬೇಕಾದರೆ ಯಾವದಾದರೊಂದು ಸಮಾಜ ಸುಧಾರಣೆಯನ್ನು ಮಾಡುವದವಶ್ಯವಿದೆಯೆಂದು ಹೇಳಿದರು. ಅದಕ್ಕೆ ಲಾರ್ಡ ಡಫರಿನ್ನರು ಒಡಂಬಡದೆ ಹಿಂದುಸ್ತಾನದಲ್ಲಿ ಮತಮತಾಂತರಗಳೂ ಜಾತಿ ಉಪಜಾತಿಗಳೂ ಬಹಳವಾಗಿರುವದರಿಂದ ಸಮಾಜಸುಧಾರಣೆಯ ಕಾರ್ಯವು ಸಾಗುವದಿಲ್ಲವೆಂತಲೂ ಹಿಂದೀಜನರ ಮುಂದಾಳುಗಳು ಪ್ರತಿ ವರ್ಷ ಕೂಡಿ-ಸಭೆ ಮಾಡಿ-ರಾಜ್ಯಕಾರಭಾರದೊಳಗಿನ ದೋಷಗಳ ಬಗ್ಗೆ ಚರ್ಚಿಸಿ ಯಾವ ತರಹದ ವ್ಯಾವಹಾರಿಕ ಸುಧಾರಣೆಗಳನ್ನು ಮಾಡಬಹುದೆಂದು ಹೇಳಿದರೆ ಹಿಂದುಸ್ತಾನ ಸರಕಾರಕ್ಕೆ ಅದನ್ನು ಆಳುವ ಕೆಲಸದಲ್ಲಿ ಸಹಾಯ ಮಾಡಿದಂತಾಗುವದೆಂದು ಹೇಳಿದರು. ಅದಕ್ಕೆ ಹ್ಯೂಮ ಸಾಹೇಬರು ಒಡಂಬಟ್ಟು ಕಲಕತ್ತೆಯ ಮುಂದಾಳುಗಳಿಂದ ಮೇಲೆ ಹೇಳಿದ ಸಂಘವನ್ನು ತೆಗೆಸಿದರು. ಈ ಸಂಘದ ಮುಖ್ಯಸ್ಥರು ಉಮೇಶಚಂದ್ರ ಬಾನರ್ಜಿಯವರು ಮತ್ತು ಸುರೇಂದ್ರನಾಥ ಬಾನರ್ಜಿಯವರು. ದಾದಾಭಾಯಿಯವರಿಗೂ ಕೇಳಲಾಯಿತು. ಇದಕ್ಕೆ ಮದ್ರಾಸದ ಮುಖಂಡರೂ ಸಮ್ಮತಿಯನ್ನಿತ್ತರು. ಪುಣೆಯಲ್ಲಿ ಮಾರಿಕಾಬೇನೆಯು (Cholera) ಆದದ್ದರಿಂದ ಮೊದಲಿನ ರಾಷ್ಟ್ರೀಯ ಸಭೆಯು ಮುಂಬಯಿಯಲ್ಲಿ ಕೂಡಬೇಕೆಂದು ಗೊತ್ತಾಯಿತು. ಅಷ್ಟರಲ್ಲಿ ಹ್ಯೂಮ ಸಾಹೇಬರು ಇಂಗ್ಲಂಡಕ್ಕೆ ಹೋಗಿ ಜಾನ್‌ಬ್ರಾಯಿಟ, ಲಾರ್ಡ ರಿಫನ್, ರೀಡ, ಡಾಲಹೌಸಿ, ಸ್ಲಾಗ ಮುಂತಾದ ಪಾರ್ಲಿಮೆಂಟಿನ ಸಭಾಸದರ ಸಹಾನುಭೂತಿಯನ್ನೂ ದೊರಕಿಸಿ ೧೮೮೫ರ ಡಿಸೆಂಬರದಲ್ಲಿ ಉಮೇಶಚಂದ್ರ ಬಾನರ್ಜಿಯವರ ಅಧ್ಯಕ್ಷತೆಯಲ್ಲಿ ಆದ ಮುಂಬಯಿಯ ರಾಷ್ಟ್ರೀಯ ಸಭೆಗೆ ಹಾಜರಾದರು.

---

# ಬ್ರಿಟಿಶರ ರಾಜ್ಯಯಂತ್ರ

ನವರೋಜಿಯವರ ಚಾರಿತ್ರ್ಯದ ಮೇಲೆ ಬೆಳಕು ಬೀಳಬೇಕಾದರೆ ಆ ಕಾಲದ ರಾಜ್ಯಪದ್ಧತಿಯೂ ನಮಗೆ ಗೊತ್ತಿರುವದು ಅವಶ್ಯ. ಹಿಂದುಸ್ತಾನವು ಬೇರೆ ಬೇರೆ ಪ್ರಾಂತಗಳಾಗಿ ವಿಭಾಗಿಸಲ್ಪಟ್ಟಿದೆ. ಪ್ರಾಂತಕ್ಕೆ ಆಗಿನ ಕಾಲದಲ್ಲಿ ಗವ್ಹರ್ನರ, ಲೆಫ್ಟಿನಂಟ ಗವ್ಹರ್ನರ ಮತ್ತು ಚೀಫಕಮಿಶನರ ಹೀಗೆ ಮೂರುತರದ ಅಧಿಕಾರಿಗಳಿದ್ದರು. ದೊಡ್ಡ ಪ್ರಾಂತಗಳ ಒಡೆಯರು ಗವ್ಹರ್ನರರು. ಅದಕ್ಕೂ ಸಣ್ಣವುಗಳಿಗೆ ಲೆಫ್ಟಿನಂಟ ಗವ್ಹರ್ನರರು. ಅದಕ್ಕೂ ಸಣ್ಣವುಗಳಿಗೆ ಕಮಿಶನರರು. ಗವ್ಹರ್ನರರಿಗೆ ಕಾರ್ಯಕಾರೀ ಕೌನ್ಸಿಲಗಳಿದ್ದವು. ೧೮೬೧ರಿಂದ ಭಾರತಕ್ಕೆ ಕಾಯದೇಕೌನ್ಸಿಲುಗಳನ್ನು ಕೊಡಲಾಯಿತು. ಕಾರ್ಯಕಾರೀ ಕೌನ್ಸಿಲ್ಲುಗಳ ಸಭಾಸದರೂ ಗವ್ಹರ್ನರರೂ ಇಂಗ್ಲೀಷ ಜನರೇ ಇರುತ್ತಿದ್ದರು. ಕಾಯದೇಮಂಡಲದಲ್ಲಿ ಬಹುಮತವು ಇಂಗ್ಲಿಷ ಜನರದೇ ಇರುತ್ತಿತ್ತು. ಕೆಲವು ಹಿಂದೀ ಜನರು ಮಾತ್ರ ಇದರಲ್ಲಿ ಸರಕಾರದಿಂದ ನೇಮಿಸಲ್ಪಡುತ್ತಿದ್ದರು. ಸರಕಾರದವರು ತಮಗೆ ವಿರುದ್ಧವಾಗಬಹುದಾದ ಸಭಾಸದರನ್ನು ಯಾಕೆ ನಿಯಮಿಸುವರು? ೧೮೯೨ರಿಂದ ಇದೇ ನ್ಯಾಯವಿಧಾಯಕ ಮಂಡಲದಲ್ಲಿ ಲೋಕನಿಯುಕ್ತವಾದ ಸಭಾಸದರನ್ನು ನಿಯಮಿಸಬೇಕೆಂದು ಗೊತ್ತುವಳಿಯಾಯಿತು. ಇಂಪೀರಿಯಲ್ ಸರಕಾರವೆಂದರೆ ಎಲ್ಲ ಪ್ರಾಂತಗಳ ಮೇಲೆ ಆಳುವಂತಹದೂ ಇಡೀ ಹಿಂದುಸ್ತಾನದ ರಾಜ್ಯಕಾರಭಾರಕ್ಕೆ ಹೊಣೆಗಾರಿಕೆಯುಳ್ಳ ಸರಕಾರಕ್ಕೆ ಒಬ್ಬ ಗವ್ಹರ್ನರ ಜನರಲ್ಲನೂ ೭ ಮಂದಿ ಕಾರ್ಯಕಾರೀಮಂಡಲದ ಸಭಾಸದರೂ ಇದ್ದರು. ೧೮೬೧ರಲ್ಲಿ ಕಾಯದೇ ಮಂಡಲವೂ ಕೊಡಲಾಯಿತು. ೧೮೯೨ರಲ್ಲಿ ಲೋಕನಿಯುಕ್ತ ಸಭಾಸದರನ್ನು ತೆಗೆದುಕೊಳ್ಳಲಾಯಿತು. ಆದರೆ ಅಲ್ಲಿಯೂ ಬಹುಮತವಿದ್ದಿಲ್ಲ. ಈ ಎಲ್ಲ ರಾಜ್ಯಕಾರಭಾರದ ಮೇಲ್ವಿಚಾರಣೆಯನ್ನು ಮಾಡುವಂತಹದೊಂದು ಮಂಡಲವು ಇಂಗ್ಲಂಡದಲ್ಲಿರುತ್ತದೆ. ಅದರ ಹೆಸರು

ಇಂಡಿಯಾ ಕೌನ್ಸಿಲ್. ಇದರ ಮುಖ್ಯಸ್ಥನಿಗೆ ಸೆಕ್ರೆಟರಿ ಆಫ್ ಸ್ಟೇಟ್ ಫಾರ ಇಂಡಿಯಾ (ಭಾರತಮಂತ್ರಿ) ಎಂದಿರುತ್ತದೆ. ಇದರಲ್ಲಿ ೧೨ರಿಂದ೧೪ ಜನ ಸಭಾಸದರಿರುತ್ತಿದ್ದರು. ಆದರೆ ಇದರಲ್ಲಿ ಒಬ್ಬನೂ ಹಿಂದೀ ಸಭಾಸದನಿದ್ದಿಲ್ಲ. ಈ ಮಂಡಲವು ಬ್ರಿಟಿಶ ಪಾರ್ಲಿಮೆಂಟಿಗೆ ಹೊಣೆಗಾರಾಗಿದೆ. ಬ್ರಿಟಿಶ್ ಪಾರ್ಲಿಮೆಂಟವೆಂದರೆ ಬ್ರಿಟಿಶ್ ಜನತೆಯ ಪ್ರತಿನಿಧಿಗಳ ಸಭೆಯು. ಬ್ರಿಟಿಶ್ ಜನತೆಯ ಮನಸ್ಸಿನ ಬಲವಿನ ಪ್ರಕಾರ ಇಂಗ್ಲಂಡದ ರಾಜ್ಯಕಾರಭಾರವು ನಡೆದಿರುವದು. ಇನ್ನು ಕೆಳಗಿನ ನೌಕರಿಗಳಿಗೆಲ್ಲ ಇಂಡಿಯನ್ ಸಿವ್ಹಿಲ್ ಸರ್ವ್ಹಿಸು ಎಂಬದೊಂದು ಪರೀಕ್ಷೆ. ಈ ಪರೀಕ್ಷೆಗೆ ಇಂಥ ಜಾತಿಯವರಾಗಲೀ ಮತದವರಾಗಲೀ ಕೂಡಬೇಕೆಂಬ ನಿಯಮವಿಲ್ಲ. ಆದರೆ ಈ ಪರೀಕ್ಷೆಗೆ ಕೂಡುವವರ ವಯಸ್ಸು ೧೯ರಿಂದ ೨೧ರ ಒಳಗಿರಬೇಕೆಂಬದೊಂದು ಕಾಯದೆಯಿಂದ ಎಲ್ಲ ಹಿಂದೀಯರನ್ನೂ ಹೊರಗೆ ಹಾಕಿದಂತಾಗಿತ್ತು. ಹಿಂದೀ ಜನರು ಇಂಗ್ಲಂಡಕ್ಕೆ ಹೋಗಿ ಹತ್ತು ಸಾವಿರ ರೂಪಾಯಿಗಳ ವರೆಗೆ ಖರ್ಚು ಮಾಡಿ ತಮ್ಮ ಕುಲವನ್ನು ಕೆಡಿಸಿಕೊಂಡು ಮಾಂಸಾಹಾರ ಮದ್ಯಪಾನವನ್ನು ಮಾಡಿ ಪರೀಕ್ಷಕರನ್ನು ಒಲಿಸಿ ಪಾಸಾಗುವದು ದುರ್ಘಟವೇ ಆಗಿತ್ತು.





## ನವರೋಜಿಯವರ ಧ್ಯೇಯ ಧೋರಣಗಳೂ ಅವರ ರಾಜಕೀಯ ಕಾರ್ಯವು.

ಮೇಲಿನ ಸಂಗತಿಗಳನ್ನು ತಿಳಿದುಕೊಂಡರೆ, ದಾದಾಭಾಯಿಯವರ ಚರಿತ್ರದ ಮೇಲೆ ಪ್ರಕಾಶ ಬೀಳುವದೂ ಅವರ ಹೋರಾಟದ ಗುಟ್ಟೂ ತಿಳಿಯುವದು. ತಮ್ಮ ಮಕ್ಕಳು ದುಡ್ಡುಗಳಿಸಿ, ಸುಖವಾಗಿ ಬಾಳಬೇಕೆಂಬ ಬಯಕೆಯಿಂದ ಕೆಲವರು ಹುಡುಗರನ್ನು ೭ ಅಥವಾ ೮ ವರ್ಷದ ಚಿಕ್ಕ ವಯಸ್ಸಿನಲ್ಲಿಯೇ ಇಂಗ್ಲಂಡಕ್ಕೆ ಕಳಿಸಲುಪಕ್ರಮಿಸಿದರು. ಈ ಪರೀಕ್ಷೆಯಲ್ಲಿ ಪಾಸಾದರೆ ಮೊದಲು ಅಸಿಸ್ಟಂಟ ಕಲೆಕ್ಟರ, ಆಮೇಲೆ ಕಲೆಕ್ಟರ, ಕಮೀಶನರ, ಕಾರ್ಯಕಾರೀ ಮಂಡಲದ ಸಭಾಸದ, ಇಂಡಿಯಾ ಕೌನ್ಸಿಲ್ಲದ ಸಭಾಸದ ಮೊದಲಾದ ದೊಡ್ಡ ದೊಡ್ಡ ಸಂಬಳದ ಮತ್ತೂ ಅಧಿಕಾರದ ಸ್ಥಾನಗಳು ಸಿಗುತ್ತಿದ್ದವು. ಆದರೆ ಪರೀಕ್ಷೆಯನ್ನು ಪಾಸಾದರೂ ಕಲೆಕ್ಟರನ ಸ್ಥಳವು ಸಿಗಬೇಕಾದರೆ ಕುರಿಕೋಣಬೀಳುತ್ತಿದ್ದವು. ಮುಂದಿನ ಅಧಿಕಾರಿಗಳ ಮಾತನ್ನೇ ಎತ್ತಕೂಡದು. ಹಿಂದುಸ್ಥಾನದ ರಾಜ್ಯಕಾರಭಾರವು ಬ್ರಿಟಿಶ ಜನತೆಯ ಬಹುಮತದಿಂದ ಸಾಗುವ ಪಾರ್ಲಿಮೆಂಟಿನ ಕೈಯಲ್ಲಿದ್ದುದರಿಂದ ದಾದಾಭಾಯಿಯವರು ಇಂಗ್ಲಂಡಕ್ಕೆ ಬ್ರಿಟಿಶ ಜನತೆಯಮುಂದೆ ತಮ್ಮ ಗೋಳುಗಳನ್ನು ಹೇಳಿಕೊಂಡರೆ ಏನಾದರೂ ಲಾಭವಾಗುವದೆಂದು ತಿಳಿದು ಅಲ್ಲಿಯ ಉದಾರಮತ ಪಕ್ಷದ ಮುಖಂಡರ ಸಂಗಡ ಸಖ್ಯವನ್ನು ಬೆಳಿಸಿ ಗ್ಲಾಡ್‌ಸ್ಟನ್ನರ ಸಹಾಯದಿಂದ ಉದಾರಮತದ ಪ್ರತಿನಿಧಿಯೆಂದು ಪಾರ್ಲಿಮೆಂಟಿನಲ್ಲಿ ೧೮೯೨ರಲ್ಲಿ ಆರಿಸಲ್ಪಟ್ಟರು. ಹೀಗೆ ಮಾಡುವದರ ಹೊರತು ಭಾರತದ ಉದ್ಧಾರಕ್ಕೆ ಅವರಿಗೆ ಬೇರೆ ಯಾವ ಮಾರ್ಗವೂ ಕಾಣಿಸಲಿಲ್ಲ. ಬಂಡಾಯವು ಆಗಿಹೋಗಿತ್ತು. ಬಂಡಾಯದ ಸಾಧನ ಸಾಮುಗ್ರಿಗಳಾದ ಶಸ್ತ್ರಾಸ್ತ್ರಗಳೂ ಹೋಗಿದ್ದವು. ಜನರೂ ಶಾಂತತೆಯುಳ್ಳವರಾಗಿದ್ದರಿಂದ **ಆಲಸ್ಯದಲ್ಲಿ ಮುಳುಗಿದ್ದರು**. ದಾದಾಭಾಯಿಯವರು ಬ್ರಿಟಿಶ ಸಾಮ್ರಾಜ್ಯವಾಗಲೇಬೇಕೆಂದು

ತಮ್ಮ ಮೊದಲನೆಯ ಸಿದ್ಧಾಂತವನ್ನಿಟ್ಟುಗೊಂಡರು. ೧೮೮೬ರಲ್ಲಿ ರಾಷ್ಟ್ರೀಯ ಸಭೆಯ ಅಧ್ಯಕ್ಷಸ್ಥಾನದಿಂದ ಜನರಿಗೆ ಈ ಪ್ರಶ್ನೆಯನ್ನೇ ಕೇಳಿರುವರು.

Then I put the question plainly. Is this Congress a nursary for sedition and rebellion against the British Government? or Is it another stone in the foundation of the stability of that Government ( cries of yes, yes')

'ನಾನು ಸ್ಪಷ್ಟವಾಗಿಯೇ ಕೇಳುತ್ತೇನೆ. ಬ್ರಿಟಿಶ ಸರಕಾರದ ವಿರುದ್ಧ ಬಂಡಾಯ ಮಾಡಲೆಳಿಸುವದಕ್ಕೆ ಈ ರಾಷ್ಟ್ರೀಯ ಸಭೆಯು ಸ್ಥಾಪಿಸಲ್ಪಟ್ಟದೆಯೋ ಅಥವಾ ಬ್ರಿಟಿಶ್ ಸಾಮ್ರಾಜ್ಯದ ಭವ್ಯಕಟ್ಟಡವು ಶಾಶ್ವತವಾಗಿ ಇರಬೇಕೆಂದು ಇನ್ನೊಂದು ಕಲ್ಲನ್ನು ಹಾಕುವದಕ್ಕೆ ಈ ರಾಷ್ಟ್ರೀಯ ಸಭೆಯು ಹುಟ್ಟಿದೆಯೋ ? (ಹೌದು, ಹೌದು). (ಪಾಪ ! ಇದೇ ರಾಷ್ಟ್ರೀಯ ಸಭೆಯು ಮುಂದೆ ಅದೇ ಸಾಮ್ರಾಜ್ಯಕ್ಕೆ ಕಲ್ಲು ಹಾಕುವದೆಂಬುದು ಅವರಿಗೇನು ಗೊತ್ತು ! )

ಬ್ರಿಟಿಶ ಸಾಮ್ರಾಜ್ಯವು ಶಾಶ್ವತವಾಗಿರಬೇಕು. ಮತ್ತು ಹಿಂದುಸ್ಥಾನವು ಬ್ರಿಟಿಶಸಾಮ್ರಾಜ್ಯದಲ್ಲಿಯೇ ಇರಬೇಕೆಂದಮೇಲೆ ನಾವೆಲ್ಲರೂ ಬ್ರಿಟಿಶ ಪ್ರಜಾಜನರಾದೆವು. ನಮಗೆ ಬ್ರಿಟಿಶರಿಗಿರುವ ಹಕ್ಕುಗಳಿರಬೇಕು. ಆದ್ದರಿಂದ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯನ್ನೇ ನಮಗಾದರೂ ಕೊಡಬೇಕು. ಯಾಕಂದರೆ

'Kings made for the People, not peoples for their kings'

'ರಾಜರು ಪ್ರಜೆಗಳ ಹಿತಕ್ಕಾಗಿ ನಿಯಮಿಸಲ್ಪಟ್ಟಿರುತ್ತಾರೆ. ಪ್ರಜೆಗಳು ರಾಜರ ಹಿತದ ಸಲುವಾಗಿ ಹುಟ್ಟಿಲ್ಲ.'

ಎಂಬ ಹೊಸ ಪಾಠವನ್ನು ನೀವೇ ಕಲಿಸಿರುತ್ತೀರಿ. ನಾವೂ ನೀವು ಏಕಜೀವಿಗಳಾದ್ದರಿಂದ

'What is good for India is good for England.'

'ಹಿಂದುಸ್ಥಾನಕ್ಕೆ ಯಾವದು ಸುಖವಾಗಿರುತ್ತದೆಯೋ ಅದೇ ಇಂಗ್ಲಂಡಕ್ಕಾದರೂ ಸುಖವಾಗಿರುತ್ತದೆ.'

ನಮಗೆ ಪ್ರಜಾಧಿಪತ್ಯದ ರಾಜ್ಯಪದ್ಧತಿಯನ್ನು ಕೊಡುತ್ತೇವೆಂಬುದಾಗಿ ಇಂಗ್ಲಂಡದ ರಾಜರೂ ರಾಜ್ಯತಂತ್ರಗಾರರೂ ಹೇಳಿರುತ್ತಾರೆ. ವಚನ

ಕೊಟ್ಟದ್ದನ್ನು ಸಹುಂವಳಿಯಲ್ಲಿ ತರುವದಷ್ಟೇ ಉಳಿದದ್ದರಿಂದ ಈಗ ಅದನ್ನೇ ಮಾಡಿರೆಂದು ಅವರು ಬ್ರಿಟಿಶ ಜನರಿಗೆ ಮೇಲಿಂದ ಮೇಲೆ ಹೇಳುತ್ತಿದ್ದರು. **ಬ್ರಿಟಿಶ ಸಾಮ್ರಾಜ್ಯಕ್ಕೆ ಧಕ್ಕೆ ಹಚ್ಚುವದು ನಮ್ಮ ಧ್ಯೇಯವಲ್ಲ. ಹಿಂದುಸ್ತಾನವು ಸಂಪೂರ್ಣ ಸ್ವಾತಂತ್ರ್ಯ ವನ್ನು ಗಳಿಸುವದು ಸಾಧ್ಯವೂ ಇಲ್ಲ. ಇಷ್ಟವೂ ಇಲ್ಲ. ದೇವರು ನಮ್ಮೀ ಸಂಬಂಧವನ್ನು ಜಗತ್ತಿನ ಕಲ್ಯಾಣಕ್ಕಾಗಿ ತಂದಿರು ವನು** ಈ ಸಂಬಂಧವು ಸೇವ್ಯಸೇವಕ ಭಾವದಲ್ಲಿಯೇ ಇರುತ್ತದೆ. ನಮಗೂ ಅಂತರ್ಗತ ಸ್ವರಾಜ್ಯವನ್ನು ಕೊಟ್ಟರೆ ನಮ್ಮಿಬ್ಬರ ಸಂಬಂಧವು ಪ್ರೇಮಮಯವಾಗುವದು. ಆದ್ದರಿಂದ ನಮ್ಮ ಕಾಯದೆಗಳನ್ನು ನಾವು ಮಾಡಲಿಕ್ಕೆ, ನಮ್ಮ ರಾಜ್ಯಕಾರಭಾರವನ್ನು ನಾವೇ ನೋಡಲಿಕ್ಕೆ, ನಮ್ಮ ಕಂದಾಯದ ಪದ್ಧತಿಯನ್ನು ನಾವೇ ಸ್ಥಿರಪಡಿಸಲಿಕ್ಕೆ ನಮಗೆ ಸ್ವಾತಂತ್ರ್ಯ ವನ್ನು ಕೊಡಿರಿ. ಹಿಂದುಸ್ತಾನದ ಬಡತನವು ಹಿಂಗಿ ಅದು ಪುಷ್ಟವಾಗು ವಂತೆ ಮಾಡಿದರೆ ಅದರ ವ್ಯಾಪಾರದಿಂದ ಬರುವಂಥ ಲಾಭವು ನಿಮಗೇ ಸಿಗುವದು. ಇಲ್ಲದಿದ್ದರೆ ಹಿಂದುಸ್ತಾನವೂ ಸಾಯುವದು. ನೀವೂ ಸಾಯುವಿರಿ. ಹಿಂದುಸ್ತಾನದ ಬಡತನವನ್ನು ಹಿಂಗಿಸುವದಕ್ಕಾಗಿ ಚಿಕ್ಕ ಪುಟ್ಟ ಅಧಿಕಾರಗಳಿಂದ ದೊಡ್ಡ ದೊಡ್ಡ ಸಂಬಳದ ಎಲ್ಲ ಅಧಿಕಾರಗಳನ್ನೂ ಹಿಂದೀ ಜನರಿಗೆ ಕೊಡಿರಿ! ಕೊಡಿರಿ!! ಕೊಡಿರಿ!!! ಎಂದು ಬ್ರಿಟಿಶ ಜನ ರಿಗೂ ಪಾರ್ಲಿಮೆಂಟಿಗೂ ಕೇಳಿಕೊಳ್ಳುವದೇ ಇವರ ಚಳವಳಿಯ ಗುಟ್ಟು. ೧೮೮೬ರಲ್ಲಿ ಆದ ಪಾರ್ಲಿಮೆಂಟಿನ ಚುನಾವಣೆಯಲ್ಲಿ ಸಭಾಸದರಾಗ ಬೇಕೆಂದು ಹವಣಿಸಿ ಅದರಲ್ಲಿ ಪರಾಜಯವನ್ನು ಹೊಂದಿದರೂ ಬ್ರಿಟಿಶ ಮುತ್ಸದ್ದಿಗಳಲ್ಲಿಯೂ ಬ್ರಿಟಿಶ ಜನತೆಯಲ್ಲಿಯೂ ಇರುವ ನ್ಯಾಯ ಪಕ್ಷ ಪಾತದ ವಿಷಯವಾಗಿ ಅವರಿಗೆ ಎಂದೂ ಸಂದೇಹ ಬರಲಿಲ್ಲ. ಪಾರ್ಲಿಮೆಂಟಿನ ಸಭಾಸದರಾದರೂ ಅದರ ಮುಂದೆ ಯಾವ ಪ್ರಶ್ನೆಯನ್ನಿಡಬೇಕೆಂದು ಅವರು ವಿಚಾರ ಮಾಡಿ ಹಿಂದುಸ್ತಾನದ ಇಂಡಿಯನ್ ಸಿವ್ಹಿಲ್‌ಸರ್ವಿಸದ ಪರೀಕ್ಷೆಯನ್ನು ಕೇವಲ ಇಂಗ್ಲಂಡದಲ್ಲಿಡದೆ ಹಿಂದುಸ್ತಾನದಲ್ಲಿಯೂ ಇಂಗ್ಲಂಡದಲ್ಲಿಯೂ ಏಕಸಮಯಕ್ಕೆ ಇಡಿರೆಂದು ಅವರನ್ನು ಒಡಂಬಡಿ ಸಲು ಪ್ರಯತ್ನ ಮಾಡಿದರು. ಇಂಡಿಯಾ ಕೌನ್ಸಿಲ್ಲದ ಖರ್ಚು ಮತ್ತು

ಅಧಿಕಾರಿಗಳ ಸಂಬಳ ಇವೆರಡೂ ಕೂಡಿ ಸುಮಾರು ೪೫ ಕೋಟಿ ರೂಪಾಯಿಗಳು ಹಿಂದುಸ್ತಾನದಿಂದ ಹರಿದುಹೋಗುತ್ತಿರುವದೂ. ಅದರಲ್ಲಿ ಒಂದು ಕಾಸೂ ಕೂಡ ತಿರುಗಿ ಬರದಿರುವದು ಇವರ ಅಂತಃಕರಣದಲ್ಲಿ ಕಲಕುಮುಲಕನ್ನುಂಟುಮಾಡಿತು. ಮುಸಲ್ಮಾನರೂ ಇಲ್ಲಿ ಆಳುತ್ತಿದ್ದರೆಂಬುದೇನೋ ನಿಜ. ಆದರೆ ಕರರೂಪದಿಂದ ನಮ್ಮ ಹಣವನ್ನು ಇಂಗ್ಲೀಷರಂತೆ ಇವರೂ ಹೊರುತ್ತಿದ್ದರೂ ಅವರು ಅದನ್ನು ತುರ್ಕಸ್ತಾನ, ಅರಬೀದೇಶಕ್ಕೆ ತೆಗೆದುಕೊಂಡು ಹೋಗುತ್ತಿದ್ದಿಲ್ಲ. ಇಲ್ಲಿಯೇ ಆ ಹಣದ ವಿನಿಯೋಗವಾಗುತ್ತಿತ್ತು. ಮನುಷ್ಯನ ದೇಹದಲ್ಲಿಯ ರಕ್ತವು ಕ್ಷಣಕ್ಷಣಕ್ಕೆ ಸೋರಿಹೋಗಹತ್ತಿದರೆ ಏನು ಗತಿಯಾಗಬೇಕು ? ಭಾರತದ ಈ ಶೋಷಣೆಯನ್ನು ಕಂಡು ಇವರ ಅಂತಃಕರಣವು ತಳಮಳಗೊಳ್ಳುತ್ತಿತ್ತು. ರಕ್ತವು ಕಾಯುತ್ತಿತ್ತು. ಅಂತಃಕರಣದಲ್ಲಿಯ ಈ ತುದಿಯನ್ನೇ ೧೮೯೨ರ ರಾಷ್ಟ್ರೀಯ ಸಭೆಯ ಅಧ್ಯಕ್ಷಸ್ಥಾನದಲ್ಲಿ ನಿಂತು ಸಾರಿದ್ದಾರೆ. **ಲಾರ್ಡ ಕ್ರೋಮರ** ಭಾಷಣವನ್ನು ಬೊಟ್ಟು ಮಾಡಿ ತೋರಿಸಿ ಭಾರತೀಯರನ್ನು ಎಚ್ಚರಿಸಿದ್ದಾರೆ.

'It has been calculated that the average income per head of population in India is not more than Rs. 27 a year. In England the average income per year per head of population was £. 33, in France it was £. 23, in Turkey which was poorest country in Europe it was £. 4 per head'

'ಪ್ರತಿಯೊಬ್ಬ ಭಾರತೀಯನ ವಾರ್ಷಿಕ ಉತ್ಪನ್ನವು ೨೭ ರೂ. ಮಾತ್ರ. ಇಂಗ್ಲಂಡದಲ್ಲಿ ೩೩ ಪೌಂಡು (೪೯೫ ರೂ.); ಫ್ರಾನ್ಸದಲ್ಲಿ ೨೩ ಪೌಂಡು (೩೪೫ ರೂ.); ಯುರೋಪದ ಅತಿ ದರಿದ್ರ ದೇಶವಾದ ತುರ್ಕಸ್ಥಾನದಲ್ಲಿ ಕೂಡ ೪ ಪೌಂಡು (೬೦ ರೂ.) ಇರುತ್ತದೆ.

ಅಂದ ಮೇಲೆ ಭಾರತದ ಬಡತನವನ್ನೆಂತು ವರ್ಣಿಸಬೇಕು. ಭಾರತದ ಈ ಬಡತನವೂ ಇಂಗ್ಲೀಷರ ಸುಲಿಗೆಯೂ ದಾದಾಭಾಯಿಯವರನ್ನು ರಾಷ್ಟ್ರಕಾರ್ಯಕ್ಕೆ ಪ್ರೇರಿಸಿದವೆಂದು ಹೇಳಬಹುದು. ಈ ಬಡತನವನ್ನು ಹೇಗೆ ಹಿಂಗಿಸಬೇಕೆಂಬುದೇ ಅವರ ಯೋಚನೆ. ಇದಕ್ಕಾಗಿಯೇ ಅವರ

ಜೀವನದ ಹೋರಾಟ. ಇದೇ ಅವರ ಜೀವನದ ಗುಟ್ಟು. ಇದನ್ನರಿತರೆ ದಾದಾಭಾಯಿಯವರ ಪ್ರತಿಯೊಂದು ಚಳವಳಿಯ ಮೇಲೆಯೂ ದಿವ್ಯ ಪ್ರಕಾಶವು ಬೀಳುವದು.

ಭಾರತದ ಈ ಬಡತನಕ್ಕೆ ಈ ಬಿಳೀ ಆನೆಗಳೇ ಕಾರಣವು. ಆದುದರಿಂದ ಭಾರತದ ಎಲ್ಲ ಅಧಿಕಾರದ ಹುದ್ದೆಗಳು ಭಾರತಕ್ಕೇ ದೊರೆತರೆ ಹೊನ್ನಿನ ಹೊಳೆಯು ತಾನಾಗಿಯೇ ನಿಲ್ಲುವದೆಂದು ಇವರ ಕಲ್ಪನೆ. ಈ ದೃಷ್ಟಿಯಿಂದಲೇ ಸಿವ್ಹಿಲ್‌ಸರ್ವೀಸದ ಪರೀಕ್ಷೆಗಳು ಇಂಗ್ಲಂಡದಲ್ಲಿಯೂ, ಹಿಂದುಸ್ತಾನದಲ್ಲಿಯೂ ಏಕಕಾಲಕ್ಕೆ ನಡೆಯಬೇಕೆಂದು ಇಂಗ್ಲಂಡದಲ್ಲಿಯೂ ಹಿಂದುಸ್ತಾನದಲ್ಲಿಯೂ ಚಳವಳಿಯನ್ನು ಹೂಡಿ, ೧೮೯೨ರ ಪಾರ್ಲಿಮೆಂಟಿನಲ್ಲಿ ಗೊತ್ತುವಳಿಯನ್ನು ಮಾಡಿಕೊಂಡರು. ದೈವ ಕೊಟ್ಟದ್ದನ್ನು ಕರ್ಮ ಕಚ್ಚಿಕೊಂಡು ಹೋಯಿತೆಂಬಂತೆ ಪಾರ್ಲಿಮೆಂಟಿನ ಅಧಿಕಾರವು ಉದಾರ ಮತವಾದಿಗಳ ಕೈತಪ್ಪಿದ್ದರಿಂದ ಇವರ ಗೊತ್ತುವಳಿಯು ಬಳಕೆಯಲ್ಲಿ ಬರಲಿಲ್ಲ. ಆದರೂ ನಿರಾಶರಾಗದೆ ಮುಂದಕ್ಕೆ ಸಾಗಿದರು. ಭಾರತದ ಭಾಗ್ಯವೆಲ್ಲವೂ ಇಂಗ್ಲಂಡದ ಕೈಯಲ್ಲಿಯೇ ಇರುವದೆಂದು ಇವರ ದೃಢವಾದ ನಂಬುಗೆ. ಆದ್ದರಿಂದಲೇ ಇವರು ತಮ್ಮ ಕಾರ್ಯಕ್ಷೇತ್ರವನ್ನು ಇಂಗ್ಲಂಡವನ್ನಾಗಿಯೇ ಮಾಡಿಕೊಂಡಿದ್ದರು. ಆದರೆ ಹಿಂದುಸ್ತಾನದ ಬೆಂಬಲವಿಲ್ಲದೆ ಯಾವ ಕಾರ್ಯವೂ ಕೈಗೂಡದೆಂದು ಅವರಿಗೆ ಮನವರಿಕೆಯಾಗಹತ್ತಿತ್ತು. ಆದ್ದರಿಂದ ರಾಷ್ಟ್ರೀಯ ಸಭೆಯ ಕಾರ್ಯದಲ್ಲಿ ಅಂತಃಕರಣಪೂರ್ವಕವಾಗಿ ಮನಸ್ಸು ಹಾಕುತ್ತಿದ್ದರು. ಕಾಲಕಾಲಕ್ಕೆ ಯೋಗ್ಯ ಸಲಹೆಗಳನ್ನು ಕೊಡುತ್ತಿದ್ದರು. ಮೂರು ಸಲ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿ, ಭಾರತೀಯರಿಗೆ ಸ್ವಾವಲಂಬನ, ಸ್ವರಾಜ್ಯ ಮಂತ್ರೋಪದೇಶಗಳನ್ನು ಮಾಡಿದರು. ಸ್ವಾತಂತ್ರ್ಯವಂತೂ ಒತ್ತಟ್ಟಿಗಿರಲಿ, ಬ್ರಿಟೀಶರಿಂದ ಸ್ವಲ್ಪ ಸಹಾಯವು ಕೂಡಾ ಆಗಬೇಕಾದರೆ, ಭಾರತೀಯರಲ್ಲಿ ರಾಷ್ಟ್ರೀಯ ಭಾವನೆಯೂ ಸ್ವಾರ್ಥತ್ಯಾಗವೂ ಹೆಚ್ಚಾಗಿರಬೇಕೆಂಬುದನ್ನು ಭಾರತೀಯರು ಮರೆಯತಕ್ಕದ್ದಲ್ಲವೆಂದು, ೧೮೯೩ರ ರಾಷ್ಟ್ರೀಯ ಸಭೆಯ ಭಾಷಣದಲ್ಲಿ ಹಿಂದೀಯರನ್ನು ಎಚ್ಚರಿಸಿದ್ದಾರೆ.

'ಸ್ವಾರ್ಥತ್ಯಾಗ ಮತ್ತು ಹಣದ ವಿನಿಯೋಗವಿಲ್ಲದೆ ಯಾವ ಮಹತ್ವದ ಕಾರ್ಯವೂ ಸಾಧ್ಯವಿಲ್ಲೆಂದು ನಿಮಗೆ ಕಲಿಸಬೇಕಾಗಿಲ್ಲ. ಬರಿ ಬಾಯಿ ಮಾತಿನಿಂದ ಬ್ರಿಟೀಶರೊಡನೆ ವ್ಯವಹಾರವು ನಡೆಯಲಾರದು. ನಮ್ಮ ಶ್ರದ್ಧೆಯಿಂದಲೂ ಸ್ವಾರ್ಥತ್ಯಾಗದಿಂದಲೂ ನಮ್ಮ ಕಾರ್ಯದ ಮಹತ್ವವನ್ನೂ ನಮ್ಮ ಶಕ್ತಿಯ ಅರಿವನ್ನೂ ಅವರಿಗೆ ಮಾಡಿ ಕೊಡಬೇಕು. ನಮ್ಮ ದೈವವೂ ನಮ್ಮ ಭವಿಷ್ಯವೂ ನಮ್ಮ ಕೈಯಲ್ಲಿಯೇ ಇರುತ್ತವೆ.' ಅವರ ಈ ವೀರವಾಣಿಯು ಭಾರತೀಯ ತರುಣರಲ್ಲಿ ನವಚೈತನ್ಯವನ್ನುಂಟುಮಾಡಲಾರದೇ!

೧೮೫೫ರಿಂದ ೧೮೮೦ರ ವರೆಗೆ ದಾದಾಭಾಯಿಯವರಿಗೆ ಸಮಾಧಾನವಿರಲಿಲ್ಲ. ೨೫ ವರ್ಷಗಳ ವರೆಗಿನ ಅತ್ಯಂತ ಪರಿಶ್ರಮದಿಂದಲೂ ಬ್ರಿಟೀಶರ ಮೇಲಿನ ಅತುಲವಾದ ಶ್ರದ್ಧೆಭಕ್ತಿಗಳಿಂದಲೂ ಚಳವಳಿಯನ್ನು ಮಾಡಿದರೂ ಭಾರತೀಯರಿಗೆ ಯಾವ ಹಕ್ಕುಬಾಧ್ಯತೆಗಳು ದೊರೆಯದ್ದನ್ನು ಕಂಡು ಅವರಿಗೆ ಅತ್ಯಂತ ವಿಷಾದವಾಯಿತು. ಆದರೂ ಅವರು ನಿರಾಶರಾಗಿದ್ದಿಲ್ಲ. ಆದರೆ ಭಾರತದ ಸುದೈವದಿಂದ, ಲಾರ್ಡ ಲಿಟನ್ನನ ಆಳಿಕೆಯು ಪ್ರಾರಂಭವಾಯಿತು. ಯಾವ ಮಾತುಗಳ ಮೇಲೆ ಅತ್ಯಂತ ವಿಶ್ವಾಸವಿಟ್ಟು ತಮ್ಮ ಚಳವಳಿಯ ಭವ್ಯವಾದ ಕಟ್ಟಡವನ್ನು ಕಟ್ಟಿದ್ದರೋ ಆ ತಳಹದಿಯೇ ನೆಲಕ್ಕುರುಳಿತು. ರಾಣಿಯವರ ಜಾಹೀರನಾಮೆಗೆ ಲಾರ್ಡ ಲಿಟನ್ನನು ಅರದಾಳ ಹಚ್ಚಿದನು. ಈ ಆಶ್ವಾಸನಗಳನ್ನು ಕುರಿತು 'ಹಿಂದೀ ಜನರ ಈ ವಿಷಯದಲ್ಲಿಯ ಆಶೆಗಳನ್ನು ಪೂರೈಸುವದು ಸಾಧ್ಯವಿದ್ದಿಲ್ಲವೆಂಬುದು ನಮ್ಮೆಲ್ಲರಿಗೆ ಗೊತ್ತಿದೆ. ಅವರಿಗೆ ಇಲ್ಲವೆಂದಾದರೂ ಹೇಳಬೇಕಿತ್ತು; ಇಲ್ಲವೆ ಮೋಸಗೊಳಿಸಬೇಕಿತ್ತು; ಇವೆರಡರಲ್ಲಿ ವಾಮಮಾರ್ಗವನ್ನು ನಾವು ಅನುಸರಿಸಿರುವೆವು' ಎಂದು ಹೇಳಿಬಿಟ್ಟನು. ಭಾರತೀಯರ ಭ್ರಾಂತಿಯು ಬಯಲಾಯಿತು. ದಾದಾಭಾಯಿಯವರ ಕಣ್ಣು ತೆರೆದವು. ಸ್ವಾಭಿಮಾನವು ಜಾಗೃತವಾಯಿತು. ಲಾರ್ಡ ಲಿಟನ್ನರು ಭಾರತದಲ್ಲಿರುವವರೆಗೆ ಸಾರ್ವಜನಿಕ ಕಾರ್ಯಕ್ಕೆ ಕೈಯಿಕ್ಕಲಿಕ್ಕಿಲ್ಲವೆಂದು ಪ್ರತಿಜ್ಞೆಗೈದರು.

ಭಾರತೀಯರಲ್ಲಿ ಸ್ವದೇಶಾಭಿಮಾನವೂ ಸ್ವಾರ್ಥತ್ಯಾಗಗಳೂ ಜಾಗೃತವಾಗದೆ ಏನೂ ಕಾರ್ಯವಾಗುವದಿಲ್ಲೆಂದು ಅವರಿಗೆ ಮನವರಿಕೆಯಾಯಿತು. ಚಿಕ್ಕಪುಟ್ಟ ಸುಧಾರಣೆಗಳನ್ನು ಕೇಳುತ್ತಾ ಕೂಡ್ರುವದರಲ್ಲಿ ವ್ಯರ್ಥಕಾಲಹರಣವನ್ನು ಮಾಡುವದಕ್ಕಿಂತ, ಸ್ವರಾಜ್ಯವನ್ನು ದೊರಕಿಸುವದಕ್ಕಾಗಿ ಬೇಕಾದಂಥ ಸ್ವಾರ್ಥತ್ಯಾಗವನ್ನು ಮಾಡಬೇಕೆಂದು ಅವರಿಗೆ ಅನಿಸಹತ್ತಿತು. ಆದ್ದರಿಂದಲೇ ಭಾರತೀಯರಿಗೆ ಸ್ವಾವಲಂಬನ ಮಾರ್ಗವನ್ನು ಬರಬರುತ್ತ ಉಪದೇಶಿಸತೊಡಗಿದ್ದರು. ೧೮೫೬-೧೯೦೬ರ ವರೆಗೆ ಅಖಂಡವಾಗಿ ಭಾರತೀಯರ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಿದ ಮುದುಕನು, ತನ್ನ ಐವತ್ತುವರ್ಷದ ಅನುಭವವನ್ನು ಒಂದೇ ಮಾತಿನಲ್ಲಿ ಹೇಳಿದನು.

'Gocd government is not a substitute for the government by the people themselves'

'ಸುರಾಜ್ಯವು ಸ್ವರಾಜ್ಯಕ್ಕೆ ಸಾಟಿಯಲ್ಲ'

ಎಂಬ ಮಹತ್ವವಾದ ತತ್ವವನ್ನು ಸಾರಿದರು. ಇದಲ್ಲದೆ 'ಬ್ರಿಟೀಶ ಸರಕಾರದ ವರ್ತನವನ್ನು ನೋಡಿದರೆ ನನ್ನನ್ನು ಬಿಟ್ಟು ಮತ್ತಾರಾದರೂ ಆಗಿದ್ದರೆ, ಬಂಡಾಯವನ್ನೇ ಹೂಡುತ್ತಿದ್ದರೆಂದೂ ಹೇಳಿದರು. ೧೯೦೬ರ ರಾಷ್ಟ್ರೀಯ ಸಭೆಯ ಅಧ್ಯಕ್ಷರಾದ ದಾದಾಭಾಯಿಯವರ ಭಾಷಣವೆಂದರೆ, ರಾಜಕಾರಣದ ಅನುಭವದಿಂದ ಬರೆದ ಮಹತ್ವವುಳ್ಳದ್ದೊಂದು ಮಹಾಗ್ರಂಥವೆಂದು ಹೇಳಬಹುದು. ಅದರ ಮಹತ್ವವನ್ನು ಪರಿಶೀಲಿಸಿ ಅದಕ್ಕೆ ಹಿಂದುಸ್ತಾನದ ರಾಜಕಾರಣೋಪನಿಷತ್ತೆಂದರೆ ಏನೂ ಅತಿಶಯೋಕ್ತಿಯಾಗಲಿಕ್ಕಿಲ್ಲ.

'I say we are British citizens and are entitled to and claim all British citizens rights.'

'ನಾವು ಬ್ರಿಟಿಶರ ಪ್ರಜಾಜನರಿರುತ್ತೇವಾದ್ದರಿಂದ, ನಮಗೆ ಬ್ರಿಟಿಶ ಪ್ರಜಾಜನರ ಹಕ್ಕುಗಳು ಸಿಗಲಿಕ್ಕೇಬೇಕೆಂದು ಪ್ರಾರಂಭಮಾಡಿ ನಮಗೆ ಸುರಾಜ್ಯವು ಬೇಡ, ಸ್ವರಾಜ್ಯ ಬೇಕೆಂಬುದನ್ನು ಹೇಳಿರುವರು.'

Just as the administration of the United kingdom in all

services, departments and details is in the hands of the people themselves of that country, so should we in India claim that the administration in all services, departments and details should be in the hands of the people themselves of India'

‘ಇಂಗ್ಲಂಡದ ಇಡೀ ರಾಜ್ಯಕಾರಭಾರದ ಎಲ್ಲ ಅಂಗಗಳು ಇಂಗ್ಲೀಷರ ಕೈಯಲ್ಲಿರುವಂತೆಯೇ ಹಿಂದುಸ್ಥಾನದ ರಾಜ್ಯಕಾರಭಾರದ ಎಲ್ಲ ಅಂಗಗಳು ಹಿಂದೀ ಜನರ ಕೈಯಲ್ಲಿಯೇ ಇರಬೇಕು. ಇದೇ ಸ್ವರಾಜ್ಯದ ವ್ಯಾಖ್ಯೆ’

ದೇಹದೊಳಗೆ ಮೇಲೆ ಕಾಣಿಸುವ ಕಜ್ಜಿಯ ಹುಣ್ಣುಗಳಿಗೆ ಮುಲಾಮು ಹಚ್ಚಿದರೆ ಹೇಗೆ ರಕ್ತಶುದ್ಧಿಯಾಗಿ ಆರೋಗ್ಯವಾಗುವದಿಲ್ಲವೊ ಅದರಂತೆ ಹಿಂದುಸ್ಥಾನದ ರಾಜ್ಯಕಾರಭಾರದೊಳಗೆ ಒಡೆದು ಕಾಣಿಸುವ ದೋಷಗಳು ಒಳಗಿನ ರಕ್ತಶುದ್ಧಿಯಾಗದ ಹೊರತು ಹೋಗಲಾರವು. ಆದ್ದರಿಂದ ಸ್ವರಾಜ್ಯವೇ ತರುಣೋಪಾಯವೆಂದು ದಾದಾಭಾಯಿಯವರು ತಮ್ಮ ವ್ಯಾಖ್ಯಾನದಲ್ಲಿ ಹೇಳಿದರು. ದಾದಾಭಾಯಿಯವರಂಥ ವಯೋವೃದ್ಧ ಜ್ಞಾನವೃದ್ಧ ತಪೋವೃದ್ಧರ ಹೊರತು ಬೇರೆ ಯಾರಾದರೂ ಇದ್ದರೆ ಬ್ರಿಟಿಶರ ನ್ಯಾಯ ಮತ್ತು ಪರೋಪಕಾರ ಬುದ್ಧಿಯ ವಿಷಯದಲ್ಲಿ ನಿರಾಶೆಯೇ ಉಂಟಾಗುತ್ತಿತ್ತು. ಸಿವ್ಹಿಲ್ ಸರ್ವೀಸದ ಪರೀಕ್ಷೆಯು ಸಮಕಾಲಿಕವಾಗಿ ಇಲ್ಲಿಯೂ ನಡೆಯಲೆಂಬ ಮಾತಿನ ದೆಸೆಯಿಂದ ೫೦ ವರ್ಷಗಳ ವರೆಗೆ ಅವಿಶ್ರಾಂತ ಶ್ರಮಪಟ್ಟ ಮೇಲೆಯೂ ಆಗಲಿಲ್ಲವೆಂದಮೇಲೆ ಯಾರಿಗೆ ನಿರಾಶೆಯಾಗಲಿಕ್ಕಿಲ್ಲ? ದಾದಾಭಾಯಿಯವರು ಸ್ವಭಾವತಃ ಆಶಾವಾದಿಗಳಿದ್ದದರಿಂದಲೂ ಹಿಂದುಸ್ಥಾನದ ಜನರಲ್ಲಿ ಐಕ್ಯವೂ ರಾಷ್ಟ್ರೀಯತ್ವವೂ ಜಾಗೃತವಾಗದಿದ್ದದರಿಂದಲೂ ಪುನಃ ಅವೇ ಮಾರ್ಗಗಳನ್ನೇ ಹಿಡಿಯಿರಿ ಎಂಬದಾಗಿ ಹೇಳಿದರು. ಬ್ರಿಟಿಶ ಜನರಿಗೆ ಬಿಕ್ಷೆ ಬೇಡಿದರೆ ಸ್ವರಾಜ್ಯ ಸಿಗಲಾರದು. ಆದುದರಿಂದ ಆಂದೋಲನ ಹೂಡಬೇಕೆಂಬ ಎರಡನೇ ತತ್ವವನ್ನು ಹೇಳಿದರು.

Agitation is the life and soul of the whole political, social and industrial history of England'

ಇಂಗ್ಲಂಡದ ಇತಿಹಾಸದ ಕಡೆಗೆ ನೋಡಿದರೆ ಚಳವಳವೇ ರಾಜಕೀಯ, ಸಾಮಾಜಿಕ ಮತ್ತು ಔದ್ಯೋಗಿಕ ಪ್ರಗತಿಯ ಮೂಲಾಧಾರವಾಗಿದೆ ಎಂಬುದು ನಿಮಗೆ ಕಂಡುಬರುವದು. ಚಳವಳಿ ಎಂದರೇನು ? 'Agitate! Agitate means in form' ಚವವಳಿ ಮಾಡಿರಿ! ಚಳವಳವೆಂದರೆ ಸತ್ಯದ, ಜ್ಞಾನದ–ತಿಳಿವು! ಹಿಂದುಸ್ಥಾನವು ರಾಷ್ಟ್ರವಾಗಲಿಕ್ಕೆ ಹಿಂದುಸ್ಥಾನದ ಜನರು ಒಂದಾಗಬೇಕೆಂದು ಜನರಿಗೆ ತಿಳಿಸಿರಿ! ಆ ಹಕ್ಕುಗಳು ಸ್ವದೇಶಾಭಿಮಾನದಿಂದಲೂ ಸ್ವಾರ್ಥತ್ಯಾಗದಿಂದಲೂ ಸಿಗುವವೆಂಬುದನ್ನು ತಿಳಿಸಿರಿ! ಸತ್ಯ ಜ್ಞಾನವೇ ಸತ್ಯಕರ್ಮದ ಮೂಲವಿರುವದರಿಂದ ಈ ಜ್ಞಾನವನ್ನು ಹಿಂದೀಜನ ಸಾಮಾನ್ಯಕ್ಕೆ ತಿಳಿಸಿದರೆ ಇಂದಿಲ್ಲ ನಾಳೆ ಅವರು ತಮ್ಮ ಹಕ್ಕುಗಳಿಗಾಗಿ ತಮ್ಮ ಪ್ರಾಣವನ್ನರ್ಪಿಸಲಿಕ್ಕೆ ಸಿದ್ಧರಾಗುವರು. ಆದುದರಿಂದ ಸದ್ಯದ ಸ್ಥಿತಿಯಲ್ಲಿ ನಾವು ಮಾಡಬೇಕಾದ ಕಾರ್ಯವೆಂದರೆ:

'I say, Be united, persevere and achieve self Government so that the millions now perishing by poverty, Famine and plague, and the scores of millions that are starving on scanty subsistance may be saved and India may once more occupy her proud position of you among the greatest and civilized nations of the world'

'ಒಟ್ಟುಗೂಡಿರಿ! ಜಿಗುಟತನದಿಂದ ಸ್ವರಾಜ್ಯಗಳಿಸಿರಿ! ಸ್ವರಾಜ್ಯವನ್ನು ಗಳಿಸಿದರೆ ಬೇನೆ, ಬರಗಾಲ ಮತ್ತು ಬಡತನಗಳಿಂದ ಬೇಸರಗೊಂಡ ಲಕ್ಷಾವಧಿ ಜನರನ್ನು ಉಳಿಸಿದಂತಾಗುವದು. ಉಪವಾಸದಿಂದ ಕೊರಗಿದ ಅವರ ಹೊಟ್ಟೆಗೆ ಒಂದು ತುತ್ತು ಅನ್ನವನ್ನು ಹಾಕಿದಂತಾಗುವದು. ಮತ್ತು ಪ್ರಾಚೀನಕಾಲದಿಂದ ವೈಭವ ಸಿಂಹಾಸನದ ಮೇಲೆ ವಿರಾಜಿಸುತಿದ್ದ ಹಿಂದುಸ್ಥಾನವೂ ಸಹ ಸುಧಾರಿಸಿದ ರಾಷ್ಟ್ರವಿದೆಯೆಂದು ಜಗತ್ತಿಗೆ ಮತ್ತೊಮ್ಮೆ ತಿಳಿಸಿದಂತಾಗುವದು.'

ಸ್ವರಾಜ್ಯವನ್ನು ಗಳಿಸುವದೇ ನಮ್ಮ ಧ್ಯೇಯ, ಇದೇ ನಮ್ಮ ಕಾರ್ಯ, ಇದೇ ನಮ್ಮ ಗುರಿ. ಇದೇ ನಮ್ಮ ಮೋಕ್ಷ. ಸ್ವಾತಂತ್ರ್ಯವೇ ಸಕಲ ಸುಖಗಳಿಗೆ ಮೂಲಾಧಾರವಾಗಿರುವದೆಂದು ಸ್ವಭಾವತಃ ಪ್ರತಿಯೊಂದು ಪ್ರಾಣಿಗೆ ಗೊತ್ತಿರುವದುಂಟು. ಇಂಗ್ಲಂಡ ಮತ್ತು ಹಿಂದುಸ್ಥಾನಗಳ

ಸಂಬಂಧವು ಬರೀಯ ರಾಜಕೀಯವೇ ಆಗಿರಲಿಲ್ಲ. ಇಂಗ್ಲೀಷರೂ ಸಂಸ್ಕೃತಿ ವಿಹೀನರಲ್ಲ. ಹಿಂದೀ ಜನರೂ ಸಂಸ್ಕೃತಿ ವಿಹೀನರಲ್ಲ. ರೋಮನ್ ಜನರು ಇಂಗ್ಲಂಡದ ಕಾಡು ಜನರನ್ನು ತಮ್ಮ ವಶಮಾಡಿಕೊಂಡು ತಮ್ಮ ಸಂಸ್ಕೃತಿಯ ಬೀಜವನ್ನು ಅಲ್ಲಿ ಬಿತ್ತಿದರು. ಆಗಿನ ಕಾಲದ ಇಂಗ್ಲೀಷ ಜನರು ಕಾಡುಜನರೂ ಅಸಂಸ್ಕೃತರೂ ಆಗಿದ್ದರಿಂದ ಅವರ ಸಂಸ್ಕೃತಿಯು ರೋಮನ್ನರ ಸಂಸ್ಕೃತಿಯಲ್ಲಿ ಅಡಗಿ ಕರಗಿ ಹೋಯಿತು. ಆರ್ಯರು ದ್ರಾವಿಡರನ್ನು ಜಯಿಸಿ ತಮ್ಮ ಸಂಸ್ಕೃತಿಯನ್ನು ಹಿಂದುಸ್ಥಾನದಲ್ಲಿ ಹೇಗೆ ನೆಲೆಗೊಳಿಸಿದರೆಂಬುದು ಎಲ್ಲರಿಗೂ ಗೊತ್ತಿದೆ. ಇಂಗ್ಲೀಷ ಮತ್ತು ಹಿಂದೂ ಜನರು ಸಂಸ್ಕೃತಿಯಿಂದ ತುಲ್ಯಬಲರಾದ್ದರಿಂದ ಇಂಗ್ಲೀಷರು ಹಿಂದೀ ಜನರ ದೇಹವಾದ ರಾಜ್ಯವನ್ನು ತಮ್ಮ ಹೊಸ ಶಸ್ತ್ರಾಸ್ತ್ರಗಳ ಸಾಮುಗ್ರಿಯ ಬಲದಿಂದಲೂ, ತಮ್ಮ ಭೇದನೀತಿಯ ರಾಜಕಾರಣದಿಂದಲೂ ಗೆದ್ದರೂ ಕೂಡ, ಅವರಿಗೆ ಹಿಂದುಸ್ಥಾನದ ಆತ್ಮವಾದ ಆರ್ಯಸಂಸ್ಕೃತಿಯನ್ನು ಗೆಲ್ಲುವದಾಗಲಿಲ್ಲ. ಶಸ್ತ್ರಾಸ್ತ್ರಗಳಿಂದ ಯುಕ್ತವಾದ ರಾಷ್ಟ್ರವನ್ನು ಪಾದಾಕ್ರಾಂತ ಮಾಡುವದು ಬಲು ಕಠಿಣ. ಪಾದಾಕ್ರಾಂತವಾದುದನ್ನು ದಕ್ಕಿಸಿಕೊಳ್ಳುವದು ಅದಕ್ಕೂ ಕಠಿಣ. ತನ್ನನ್ನು ವಶಮಾಡಿಕೊಳ್ಳುವ ಪ್ರಾಣಿಯ ಅಥವಾ ರಾಷ್ಟ್ರದ ಸಂಗಡ ಹೋರಾಡಿ ತನ್ನ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವದು ಪ್ರತಿಯೊಂದು ಪ್ರಾಣಿಗೆ ಅಥವಾ ರಾಷ್ಟ್ರಕ್ಕೆ ನೈಸರ್ಗಿಕವಾದ ಅಧಿಕಾರವಿದೆ. ಮುಸಲ್ಮಾನ ಸಾಮ್ರಾಜ್ಯದೊಡನೆ ಹೋರಾಡಿ, ತಮ್ಮ ಸಂಸ್ಕೃತಿಯನ್ನು ಹಿಂದೂ ಜನರು ಉಳಿಸಿಕೊಂಡರು. ಇಂಗ್ಲೀಷರಿಗೆ ಹಿಂದೀ ಜನರು ಆನಂದದಿಂದ ರಾಜ್ಯವನ್ನು ಕೊಡಲಿಲ್ಲ. ಆದರೆ ಹಿಂದುಸ್ಥಾನವನ್ನು ಪಾದಾಕ್ರಾಂತ ಮಾಡಲಿಕ್ಕೆ ಸಾವಿರಾರು ಇಂಗ್ಲೀಷರ ರಕ್ತವು ಇಲ್ಲಿ ಚಿತ್ತಲ್ಪಟ್ಟಿದೆ. ೧೮೫೭ರ ಬಂಡಾಯವು ಹಿಂದುಸ್ಥಾನದ ಜನರ ಕಟ್ಟಕಡೆಯ ಸ್ವಾತಂತ್ರ್ಯದ ಯುದ್ಧವು. ಈ ಯುದ್ಧದಲ್ಲಿ ಹಿಂದುಸ್ಥಾನವು ಜಯಿಸಲ್ಪಟ್ಟು ಇಂಗ್ಲೀಷರ ಆಳಾಯಿತು. ಆದರೂ ಹಿಂದೂ ಜನರ ಸ್ವಾತಂತ್ರ್ಯ ಭಾವನೆಯು ಹೇಗೆ ನಷ್ಟವಾಗಬೇಕು? ಇಂಗ್ಲೀಷ ಸಂಸ್ಕೃತಿಯ ಹೊಸ ಹುರುಪನ್ನು ಅವರ

ಶಿಕ್ಷಣದ್ವಾರದಿಂದಲೇ ಉಂಡು ಹಿಂದುಸ್ತಾನವು ಸ್ವಾತಂತ್ರ್ಯಯುದ್ಧಕ್ಕೆ ಮತ್ತೆ ಸಿದ್ಧವಾಯಿತು. ಹಿಂಸಾತ್ಮಕ ವ್ಯವಹಾರಕ್ಕೆ ಅನುವು ಇಲ್ಲ ದಂತಾದ ಕೂಡಲೆ ಅಹಿಂಸಾತ್ಮಕ ಯುಕ್ತಿಯಿಂದ ಸ್ವರಾಜ್ಯವನ್ನು ಗಳಿಸುವ ಯೋಜನೆಯನ್ನುಂಟುಮಾಡುವದಕ್ಕಾಗಿ ದಾದಾಭಾಯಿ ಯವರ ಅವತಾರವಾಯಿತು. ಕಾಯದೇಬದ್ಧ (Father of constitutinoal agitation) ಜನರೆಂದು ಇವರಿಗೇನೇ ಅನ್ನುವದುಂಟು. ಕಾಯದೇಬದ್ಧ ಚಳವಳಿಯನ್ನು ಹಿಂದುಸ್ತಾನದಲ್ಲಿ ಮಾಡಿ ಏನು ಉಪಯೋಗ? ಇಲ್ಲಿಯ ಮಧ್ಯವರ್ತಿ ಸರಕಾರವೂ ಕೂಡ ಬ್ರಿಟಿಶ ಜನತೆಯ ತೊತ್ತಾಗಿರುವ ಕಾರಣ ಬ್ರಿಟಿಶ ಜನತೆಯ ಮನಸ್ಸನ್ನೊಲಿಸಿದರೆ ಕಾರ್ಯವಾಗುವದೆಂದು ತಿಳಿದು ತಮ್ಮ ಬುದ್ಧಿಸರ್ವಸ್ವವನ್ನೂ ಹಣದ ಭಾಂಡಾರವನ್ನೂ ವೆಚ್ಚ ಮಾಡಿ ಇಂಗ್ಲೀಷ ಜನರ ಅನುಮತಿಯಿಂದಲೇ ಅವರ ಪಾರ್ಲಿಮೆಂಟಿನಲ್ಲಿ ಸಭಾಸದತ್ವವನ್ನು ವಹಿಸಿದರು. ಹಿಂದುಸ್ತಾನದ ಜನರ ಬೆಂಬಲವಿಲ್ಲದೆ ಇಂಗ್ಲೀಷ ಜನರ ಮುಂದೆ ಹೋಗಿ ನಿಂತರೆ ಏನೂ ಪರಿಣಾಮವಾಗು ವದಿಲ್ಲವೆಂಬುದನ್ನು ತಮ್ಮ ಅನುಭವದಿಂದ ಹೇಳಿದರು. ಸ್ವರಾಜ್ಯವು ಬೇಡುವ ವಸ್ತುವೂ ಅಲ್ಲ, ಕೊಡುವ ವಸ್ತುವೂ ಅಲ್ಲ. ಜನರ ಪರಾಕ್ರಮ ದಿಂದಲೂ ಸ್ವಾರ್ಥತ್ಯಾಗದಿಂದಲೂ ಗಳಿಸುವ ವಸ್ತುವೆಂಬುದನ್ನು ಯಾರು ಅರಿಯರು? ಎಲ್ಲರಿಗೂ ಈ ಮಾತು ಗೊತ್ತಿದ್ದರೂ ಪರಕೀಯ ದಬ್ಬಾಳಿಕೆ (Foreign beauracracy) ಯಿಂದ ದೇಶವನ್ನು ಮುಕ್ತ ಮಾಡುವ ಮಾರ್ಗವನ್ನು ದಾದಾಭಾಯಿಯವರೇ ಮೊದಲು ತೋರಿಸಿದ ರೆಂಬುದರಲ್ಲಿ ಸಾಸಿವೆಯಷ್ಟು ಸಂಶಯವಿಲ್ಲ. **ಸಾಮ್ರಾಜ್ಯಾಂತರ್ಗತ ಸ್ವರಾಜ್ಯವೇ ಧ್ಯೇಯವು, ಕಾಯದೇಬದ್ಧ ಚಳವಳಿಯೇ ಉಪಾಯವು** ಎಂಬ ತತ್ವಾನುಸಾರವಾಗಿ ಹಿಂದುಸ್ತಾನದ ಕಲ್ಯಾಣ ವನ್ನು ಮಾಡುವದಕ್ಕೆ ಹೆಣಗಿದ ಶ್ರೀ. ಗೋಖಲೆ, ಮೇಥಾ, ಸುರೇಂದ್ರ ನಾಥ ಬಾನರ್ಜಿ, ವಾಛಾ, ಮಾಲವೀಯ ಮುಂತಾದವರಿಗೆ ದಾರಿಯನ್ನು ತೋರಿಸಿದವರು ದಾದಾಭಾಯಿಯವರು. ಸ್ವರಾಜ್ಯವಾದರೂ ಏತಕ್ಕೆ? ಬಡವರಿಗೆ ಹೊಟ್ಟೆತುಂಬ ಅನ್ನವೂ ಕಣ್ಣುತುಂಬ ನಿದ್ದೆಯೂ ಸಿಗುವದ ಕ್ಕಾಗಿ. ಬಡವರ ಬಡತನವನ್ನು ಹೊಡೆದೋಡಿಸುವದಕ್ಕಾಗಿ ಆಮರಣ

ಹೋರಾಡಿದ, ಸ್ವರಾಜ್ಯಮಂತ್ರೋಪದೇಶವನ್ನು ಮಾಡಿದ, ದಾದಾಭಾಯಿಯವರು **ಮಹರ್ಷಿಗಳಲ್ಲವೇ !** ಜನರು ಅವರನ್ನು ಮಹರ್ಷಿಗಳೆಂದು ಕರೆದದ್ದರಲ್ಲಿ ಆಶ್ಚರ್ಯವೇನು ?

ದಾದಾಭಾಯಿಯವರು ಬ್ರಿಟಿಶ ಸಾಮ್ರಾಜ್ಯಕ್ಕೆ ಅಡ್ಡಿಯನ್ನೊಡ್ಡಲಿಲ್ಲ. ನಾವು ಬ್ರಿಟಿಶ ಸಾಮ್ರಾಜ್ಯದಲ್ಲಿಯೇ ಇರುವೆವು. ನಮಗೆ ಸ್ವರಾಜ್ಯವನ್ನು ಕೊಟ್ಟರೆ ಮಾತ್ರ, ಇಲ್ಲದಿದ್ದರೆ ಸಾಮ್ರಾಜ್ಯದೊಳಗಿದ್ದು ಉಪಯೋಗವೇನು? ಸಾಮ್ರಾಜ್ಯದೊಳಗಿರುವದು ಬಡವರ ಬಡತನದ ಬೇರನ್ನು ಕಿತ್ತೊಗೆಯುವದಕ್ಕಾಗಿ. ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಗಳಿಸುವದು ಕ್ರಾಂತಿಕಾರಕ ಚಳವಳಿಗಳಿಂದಲ್ಲ. ಸಾಮ್ರಾಜ್ಯವು ಬೇಕೆಂದ ಮೇಲೆ ಕ್ರಾಂತಿಗೆ ಶರಣು ಕೊಡಬೇಕಾಯಿತು. ಅಂದಮೇಲೆ ಉಳಿದ ಉಪಾಯವೆಂದರೆ ಇಂಗ್ಲೀಷರು ಪಾರ್ಲಿಮೆಂಟಿನಲ್ಲಿ ಕಾಯಿದೆಗೆ ಬದ್ಧವಾಗಿ ಒಡೆದಾಡುವಂತೆ, ನಾವೂ ಒಡೆದಾಡಿ ಇಂಗ್ಲೀಷ ಜನತೆಯ ಮತವನ್ನು ನಮಗೆ ಅನುಕೂಲವಾಗಿ ಮಾಡಿಕೊಳ್ಳಬೇಕು. ಇದು ಎಂದೆಂದಿಗೂ ಸಾಧ್ಯವಿಲ್ಲವೆಂದು ತಿಳಿಯುವವರೆಗೆ ಈ ಮಾರ್ಗವೇ ಅನುಸರಿಸಲ್ಪಟ್ಟಿತು. ಎರಡನೆಯ ಯಾವುದೇ ಮಾರ್ಗವನ್ನು ಅನುಸರಿಸಲಿಕ್ಕೆ ಬೇಕಾಗುವ ಸ್ವಾರ್ಥತ್ಯಾಗವು ಆಗಿನ ಜನರಲ್ಲಿರಲಿಲ್ಲ. ಇಡೀ ಹಿಂದುಸ್ಥಾನದ ಜನರಿಂದ ಇಂಥ ಸ್ವಾರ್ಥತ್ಯಾಗವನ್ನು ಮಾಡಿಸುವ ಸತ್ಪುರುಷನೂ ಇನ್ನೂ ಹುಟ್ಟಿರಲಿಲ್ಲ. ಮೊದಲು ಸ್ವಲ್ಪ ತೆಗ್ಗು ತೆಗೆದ ಮೇಲೆ ಮುಂದೆ ಯಾರಾದರೂ ಬಾವಿಯನ್ನು ತೋಡಬಹುದು. **ಬ್ರಿಟಿಶ ಸಾಮ್ರಾಜ್ಯಕ್ಕೆ ಮೊದಲಿನ ಗುದ್ದಲಿಯನ್ನು ಹಾಕಿದವರೆಂದರೆ ದಾದಾಭಾಯಿಯವರೆಂದೇ ಹೇಳಬಹುದು**. ಅಂತರ್ಗತ ಸ್ವರಾಜ್ಯವನ್ನು ಕೊಟ್ಟ ಮೇಲೆ ಪೂರ್ಣ ಸ್ವರಾಜ್ಯವನ್ನು ದೊರಕಿಸಲು ಎರಡು ನಿಮಿಷಗಳೂ ಹತ್ತಲಿಕ್ಕಿಲ್ಲ. ಸ್ವರಾಜ್ಯದ ಧ್ಯೇಯವನ್ನು ಜನರ ಮುಂದಿಟ್ಟು ಅದರ ಸಿದ್ಧ್ಯರ್ಥವಾಗಿ ಸ್ವತಃ ಕೆಲಸ ಮಾಡಿ ಎಷ್ಟೋ ಜನರನ್ನು ಆ ಕೆಲಸಕ್ಕೆ ಹಚ್ಚಿದ ದಾದಾಭಾಯಿಯವರು ನಮಗೆ ಇನ್ನೊಂದು ವಿಷಯದಲ್ಲಿ ಆದರ್ಶಪ್ರಾಯರಾಗಿರುವರು. ಆ ವಿಷಯವೆಂದರೆ ಜಾತಿ. ಹಿಂದುಸ್ಥಾನದ

ಜನತೆಗೆ ಜಾತಿಯೆಂಬ ಗೆದ್ದಲಿಯು ಹತ್ತಿದ್ದರಿಂದ ಇಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಬೀಜವು ಎಂದೂ ಬೆಳೆಯಲಾರದೆಂದು ನಮ್ಮನ್ನು ಆಳುವವರ ಮತವು. ಈ ಮತವನ್ನು ಮುಂದೆ ಚಾಚಿ ತಮ್ಮ ರಾಜ್ಯವೇ ಯಾವಾಗಲೂ ಹಿಂದುಸ್ಥಾನಕ್ಕೆ ಹಿತಕಾರಿಯಾಗುವದೆಂಬದನ್ನು ಅವರು ಬಲಪಡಿಸುತ್ತಿರುತ್ತಾರೆ. ಇದಕ್ಕೆ ದಾದಾಭಾಯಿಯವರ ಚರಿತ್ರವೇ ಉತ್ತಮ ಉತ್ತರವಾಗಿದೆ. ಹಿಂದೂ ಜನರಿಗೆ ಹಿಂದುಸ್ಥಾನದ ಅಭಿಮಾನ ವಿರುವದು ಸ್ವಾಭಾವಿಕವಾಗಿದೆ. ಮುಸಲ್ಮಾನರು ಮೊದಲು ಮೊದಲು ಲೂಟಿಯ ದೆಸೆಯಿಂದ ಇಲ್ಲಿಗೆ ಬಂದು ಏಳೆಂಟುನೂರು ವರ್ಷಗಳ ವರೆಗೆ ರಾಜ್ಯ ಮಾಡಿದ್ದರಿಂದ ಈ ದೇಶವು ತಮ್ಮ ದೇಶವೆಂದು ಅವರಿಗೂ ಅಭಿಮಾನವು ಹುಟ್ಟಿದೆ. ಇಲ್ಲಿಯ ಕ್ರಿಶ್ಚನ್ನರು ಇಲ್ಲಿಯೇ ಹುಟ್ಟಿದ ಪ್ರಾಣಿಗಳು. ಪಾರ್ಸೀ ಜನರು ಇಲ್ಲಿಗೆ ಬಂದು ಎಷ್ಟೋ ವರ್ಷಗಳಾದ್ದರಿಂದ ಇವರಲ್ಲಿಯೂ ಹಿಂದೂ ರಾಜ್ಯದ ಸಲುವಾಗಿ ಅಭಿಮಾನವೂ ಮಮತೆಯೂ ಉತ್ಪನ್ನವಾಗಿವೆ. ಈ ಎಲ್ಲ ಜಾತಿಧರ್ಮಗಳನ್ನು ರಾಷ್ಟ್ರೀಯತ್ವದ ಭಾವನೆಯೆಂಬ ಬೇರೆ ಬೇರೆ ರತ್ನಗಳನ್ನು ಒಂದೇ ದಾರದಲ್ಲಿ ಕಟ್ಟುವಂತೆ-ಕಟ್ಟುವದು ಅಸಾಧ್ಯವೊ? ಕೆಲವರು ಸಾಧ್ಯವೆಂದೂ ಕೆಲವರು ಅಸಾಧ್ಯವೆಂದೂ ಅನ್ನಬಹುದು. ಆದರೆ ಅದನ್ನೇ ಮಾಡಿ ತೋರಿಸಿದ ಮಹಾತ್ಮನ ಉದಾಹರಣೆಯನ್ನು ಕಂಡ ಕೂಡಲೇ ಇದು ಸಾಧ್ಯವೇ ಆಗಿರುವದೆಂದು ಮನವರಿಕೆಯಾಗುವದು. ದಾದಾಭಾಯಿಯವರು ತಮ್ಮ ಪಾರ್ಸೀ ಜಾತಿಯವರ ದೆಸೆಯಿಂದಲೂ ಸಮಾಜಸುಧಾರಣೆಯನ್ನು ಮಾಡಿದರು. ಸ್ತ್ರೀಶಿಕ್ಷಣಕ್ಕಾಗಿ ಹೆಣಗಾಡಿದರು. ಆದರೆ ತಮ್ಮ ಜಾತಿ–ಸಮಾಜವನ್ನು ಬಿಟ್ಟು ರಾಷ್ಟ್ರೀಯ ಕೆಲಸವನ್ನು ಕೈಕೊಂಡ ಕೂಡಲೇ ಅವರು ಪಾರ್ಸಿಯೆಂದು ಇಂಗ್ಲಂಡದಲ್ಲಿ ಕೆಲಸ ಮಾಡಲಿಲ್ಲ. ಹಿಂದೀ ಮನುಷ್ಯನಿದ್ದೇನೆಂದು ಅನ್ನುವದರಲ್ಲ ಅವರಿಗೆ ಅಭಿಮಾನವಿತ್ತು. ೧೮೯೩ರ ಲಾಹೋರದ ಕಾಂಗ್ರೆಸ್ಸಿನ ಅಧ್ಯಕ್ಷರಾದ ವೇಳೆಯಲ್ಲಿ ಅವರು ಈ ವಿಷಯಕ್ಕಿರುವ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಗೊಳಿಸಿರುವರು.

'Let us always remember that we are all children of

our mother country. Indeed I have never worked in any other spirit than that I am an Indian and owe duty to my country and all my country men. Whether I am a Hindu, a Musalman, a Parsi, a Christion or of any other creed, I am above all an Indian. Our country is India. Our nationality is indian.’

‘ನಾವೆಲ್ಲರೂ ಭಾರತಭೂಮಾತೆಯ ಮಕ್ಕಳಿರುವೆವೆಂಬುದನ್ನು ಯಾವಾಗಲೂ ನೆನಪಿಡೋಣ. ನಾನು ಹಿಂದೀ ಮನುಷ್ಯನೆಂದೇ ತಿಳಿದು ಎಲ್ಲ ಕಡೆಯಲ್ಲಿಯೂ ಕೆಲಸ ಮಾಡಿದ್ದೇನೆ. ನನ್ನ ದೇಶಕ್ಕೂ ದೇಶಬಾಂಧವರಿಗೂ ಸಲ್ಲಬಹುದಾದ ಋಣವು ನನ್ನ ತಲೆಯ ಮೇಲೆ ಇದೆಯೆಂದು ನನ್ನ ಶ್ರದ್ಧೆಯಿದೆ. ನಾನು ಹಿಂದುವೇ ಇರಲಿ, ಮುಸಲ್ಮಾನನಿರಲಿ, ಕ್ರಿಶ್ಚನನಿರಲಿ, ಪಾರ್ಸಿ ಇರಲಿ ಅಥವಾ ಮತ್ತಾವದಾದರೂ ಜಾತಿ, ಮತದವನಿರಲಿ ನಾನು ಮೊಟ್ಟಮೊದಲು ಭಾರತೀಯನಿದ್ದೇನೆ. ನಮ್ಮ ದೇಶವು ಭಾರತದೇಶ. ನನ್ನ ಜಾತಿಯು ಭಾರತೀಯ ಜಾತಿ.’

ಈವರೆಗೆ ರಾಷ್ಟ್ರೀಯಕಾರ್ಯ ಮಾಡಿದವರೆಲ್ಲರೂ ಇದೇ ಬುದ್ಧಿಯಿಂದಲೇ ಮಾಡಿರುವರು. ಭಾರತದೇಶವು ಸ್ವತಂತ್ರವಾಗಬೇಕೆಂದು ಹೆಣಗುವವರೆಲ್ಲರೂ ಮೇಲಿನ ವಾಕ್ಯಗಳನ್ನು ಪಾರಾಯಣ ಮಾಡಬೇಕು. ಈ ಪ್ರಕಾರ ಎಲ್ಲ ಜಾತಿಗಳ ಅಭಿಮಾನವನ್ನು ರಾಷ್ಟ್ರಾಭಿಮಾನದಲ್ಲಿ ಕರಗಿಸಿ ಹಿಂದೂ ದೇಶಕ್ಕೆ ಸ್ವಾತಂತ್ರ್ಯಯುದ್ಧದ ಮೊದಲನೆಯ ಕಾಯದೇಬದ್ಧ ಪದ್ಧತಿಯ ವಿದ್ಯೆಯನ್ನು ಕಲಿಸಿ, ಅವರ ಸಾಧ್ಯವನ್ನು ಮುಂದಿಟ್ಟ ಮಹರ್ಷಿವರ್ಯರು ದಾದಾಭಾಯಿಯವರೇ ಆಗಿರುವರೆಂದು ನಿಃಸಂದೇಹವಾಗಿ ಹೇಳಬಹುದು.

---



ಲೋಕಮಾನ್ಯ ಬಾಳ ಗಂಗಾಧರ ಟಿಳಕರು

# ಲೋಕಮಾನ್ಯ ಬಾಳ ಗಂಗಾಧರ ಟಿಳಕ

ಜೀವನ ಚರಿತೆ

ಲೋಕಮಾನ್ಯರ ರಾಜಕೀಯ ಧೋರಣ

ರಾಜಕೀಯ ಜೀವನದ ಮೂರು ಮೆಟ್ಟಲುಗಳು

ಮೇಧಾವಿ ಲೋಕಮಾನ್ಯರು

ರಾಷ್ಟ್ರಮತ ಪ್ರವರ್ತಕ ಲೋಕಮಾನ್ಯರು

# ಲೋಕಮಾನ್ಯ ಬಾಳ ಗಂಗಾಧರ ಟಿಳಕ

## (ಜೀವನ ಚರಿತೆ)

" We know of no other Indian who has made greater personal sacrifices for his country than Mr. Tilak."

ಶಾಮಾಜಿ ಕೃಷ್ಣವರ್ಮ

" ದೇಶಹಿತಕ್ಕಾಗಿ, ಲೋಕಮಾನ್ಯರಿಗಿಂತಲೂ ಹೆಚ್ಚಿಗೆ ಸ್ವಾರ್ಥತ್ಯಾಗವನ್ನು ಮಾಡಿದ ಯಾವ ಭಾರತೀಯನನ್ನೂ ನಾನರಿಯೆ "

ದೇಶವು ಒಮ್ಮೆ ಪರತಂತ್ರವಾಯಿತೆಂದರೆ ಅದು ಮೇಲಕ್ಕೆ ಏಳುವದು ಬಹು ಕಠಿಣ. ಅದರಲ್ಲಿಯೂ ಇಂಗ್ಲೀಷರಂಥ ಭೇದನೀತಿನಿಪುಣವಾದ ರಾಷ್ಟ್ರದ ಕೈಯಲ್ಲಿ ಸಿಕ್ಕಮೇಲಂತೂ ಕೇಳುವದೇನು ? ಜಾಷ-ಬುಡ್ಡನ ಜಾಲದಲ್ಲಿ ಸಿಕ್ಕ ನೊಣದಂತೆ ಭಾರತದ ಗತಿಯಾಗಿದೆ. ಬ್ರಿಟಿಶರು ಹಿಂದುಸ್ಥಾನ ದೇಶವನ್ನಷ್ಟೇ ಗೆಲ್ಲಲಿಲ್ಲ. ನಮ್ಮ ಮನಸನ್ನೂ ಗೆದ್ದರು. ಭಾರತದ ಜೀವಾಳವು ಅದರ ವೈದಿಕ ಸಂಸ್ಕೃತಿಯಲ್ಲಿ. ಅದರ ಬೇರುಗಳಿಗೇ ಕೊಡಲಿಯನ್ನಿಕ್ಕದ ಹೊರತು ಭಾರತವು ಚಿರಕಾಲ ಬ್ರಿಟಿಶರ ಆಳಿಕೆಯಲ್ಲಿ ಉಳಿಯಲಾರದೆಂದು ದೂರಾಲೋಚನೆಯನ್ನು ಮಾಡಿ, ಭಾರತೀಯ ಸಂಸ್ಕೃತಿಯ ಬಗ್ಗೆ ತಿರಸ್ಕಾರ ಹುಟ್ಟುವಂತೆಯೂ ಬ್ರಿಟಿಶರ ಬಗ್ಗೆ ಆದರವು ಉತ್ಪನ್ನವಾಗುವಂತೆಯೂ ಶಿಕ್ಷಣ ಕ್ರಮವನ್ನು ಏರ್ಪಡಿಸಿದರು.

ಈ ಶಿಕ್ಷಣ ಕ್ರಮದಲ್ಲಿ ಇಂಗ್ಲಿಷ ಭಾಷೆಗೇ ಪ್ರಾಧಾನ್ಯ. ನೌಕರರನ್ನು ಸಿದ್ಧಪಡಿಸುವದೇ ಇದರ ಮುಖ್ಯಧ್ಯೇಯ. ಅಂದಮೇಲೆ ಈ ಸಂಸ್ಥೆಗಳಿಂದ ಎಂಥ ಜನರು ಹೊರಬೀಳುವರೆಂಬುದು ಮೇಲೆಯೇ ಕಾಣುತ್ತದೆ. ಇಂಗ್ಲೀಷಿನಲ್ಲಿ ಪ್ರಾವೀಣ್ಯತೆಯನ್ನು ಪಡೆಯುವದೇ ಪರಮ ಭಾಗ್ಯವೆಂದು ಜನರು ತಿಳಿಯಹತ್ತಿದರು. ಅವರ ಆಚಾರ

ವಿಚಾರಗಳೇ ಮೇಲಾದವುಗಳೆಂದು ಅನುಕರಣಕ್ಕೆ ಪ್ರಾರಂಭವಾಯಿತು. ಸ್ವಸಂಸ್ಕೃತಿಯ ಬಗ್ಗೆ ತಿರಸ್ಕಾರವು ಕಾಣಹತ್ತಿತು. ಭಾರತೀಯ ಸಂಸ್ಕೃತಿಯು ಕೀಳಾಗಿದೆ. ಕಾಡು ಜನರ ಸಂಸ್ಕೃತಿಯು. ಧರ್ಮದಲ್ಲಿ ಹುರುಳಿಲ್ಲ. ರೂಢಿಗಳನ್ನೆಲ್ಲ ಕಿತ್ತೊಗೆಯಬೇಕು. ಇವೇ ಮೊದಲಾದ ವಿಚಾರಗಳ ಚರ್ಚೆಗೆ ಪ್ರಾರಂಭವಾಯಿತು. ಬ್ರಿಟಿಶರ ಆಶೆ ಆಕಾಂಕ್ಷೆಗಳು ಫಲಿಸ ಹತ್ತಿದವೆಂದೂ ತಮ್ಮ ಶಿಕ್ಷಣವು ಯಶಸ್ವಿಯಾಯಿತೆಂದೂ ಮನಸ್ಸಿನಲ್ಲಿ ಬ್ರಿಟಿಶರು ಹರ್ಷಗೊಂಡರು.

ಇಂಗ್ಲೀಷ ಶಿಕ್ಷಣದ ಈ ಪಿಡುಗಿನಿಂದ ಆರ್ಯ ಸಂಸ್ಕೃತಿಯ ಅಳಿಗಾಲವೇ ಸಮೀಪಿಸಿತೆಂದು, ಭಾರತೀಯರು ಭಯಭೀತರಾದರು. ತಮ್ಮ ಸಂಸ್ಕೃತಿಯ ಬಗ್ಗೆ ಒಳ್ಳೇ ಅಭಿಮಾನವಿದ್ದರೂ ಅದನ್ನು ಹೇಗೆ ಉಳಿಸಿಕೊಳ್ಳಬೇಕೆಂಬುದು ಹೊಳೆಯದಾಯಿತು. ಸುಶಿಕ್ಷಿತರೆಲ್ಲರೂ ಸುಧಾರಕರು. ಇಂಗ್ಲೀಷ ಸಂಸ್ಕೃತಿಗೆ ಮೆಚ್ಚಿದವರು. ಅವರಿಗೇ ರಾಜ ದರ್ಬಾರದಲ್ಲಿಯೂ ಸಮಾಜದಲ್ಲಿಯೂ ಮರ್ಯಾದೆ. ಮೇಲಧಿಕಾರಿ ಗಳೆಲ್ಲರೂ ಅವರೇ.

ಇಂಥ ಸಮಯದಲ್ಲಿ ಲೋಕಮಾನ್ಯರು ಅವತರಿಸಿದರು. ಇಂಗ್ಲೀಷ ಶಿಕ್ಷಣವನ್ನು ಪಡೆದೂ ಆರ್ಯ ಸಂಸ್ಕೃತಿಯೇ ಮಿಗಿಲಾದುದೆಂದೂ ಪಾಶ್ಚಾತ್ಯ ಸಂಸ್ಕೃತಿಯು ಆರ್ಯ ಸಂಸ್ಕೃತಿಯನ್ನು ಸರಿಗಟ್ಟಲಾರ ದೆಂದೂ ಜಗತ್ತಿಗೇ ಸಾರಿ ಹೇಳಿದರು. ಅದರ ರಕ್ಷಣೆಗಾಗಿ ಟೊಂಕ ಕಟ್ಟಿ ಭಾರತೀಯರನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಣಿಮಾಡಿದವ ರೆಂದರೆ, ಲೋಕಮಾನ್ಯರೆ!

ಲೋಕಮಾನ್ಯರು ರತ್ನಾಗಿರಿಯಲ್ಲಿ ೧೮೫೬ರಲ್ಲಿ ಜನಿಸಿದರು. ೧೮೭೨ ರಲ್ಲಿ ಮ್ಯಾಟ್ರಿಕ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಪುಣೆಯ ಪ್ರಸಿದ್ಧ ಡೆಕ್ಕನ ಕಾಲೇಜನಲ್ಲಿ ಮುಂದಿನ ಅಭ್ಯಾಸವನ್ನು ಮಾಡಿ, ೧೮೭೬ ರಲ್ಲಿ ಬಿ. ಎ. ಆದರು. ೧೮೭೯ರಲ್ಲಿ ಎಲ್ ಎಲ್. ಬಿ. ಪದವಿಯನ್ನು ದೊರಕಿಸಿದರು. ಪದವೀಧರರಾಗಿ, ಸರಕಾರದ ದೊಡ್ಡ ದೊಡ್ಡ ಹುದ್ದೆಗಳನ್ನು ಹಿಡಿದು, ಚೈನಿಯಿಂದ ಕಾಲಹರಣಮಾಡಬೇಕೆಂಬುದೇ ಆಗಿನ ಕಾಲದ ತರುಣರ

ಧ್ಯೇಯ, ಅದೇ ಅವರ ಆದರ್ಶ. ಲೋಕಮಾನ್ಯರೊಡನೆ ಕಲಿತ ಸಾವಿರಾರು ತರುಣರು ಇದೇ ಹಾದಿಯನ್ನೇ ಹಿಡಿದರು. ಎಷ್ಟೋ ಜನರು ಹಾಯಕೋರ್ಟಿನ ನ್ಯಾಯಾಧೀಶರಾಗಿ, ಐದೈದು ಸಾವಿರ ಸಂಬಳವನ್ನು ತೆಗೆದುಕೊಂಡವರೂ ಉಂಟು.

ಆದರೆ ಲೋಕಮಾನ್ಯರ ಸ್ವಾತಂತ್ರ್ಯಪ್ರೇಮವು ಮತ್ತೂ ಮಾತೃಭೂಮಿಯ ಕರೆಯು ಅವರನ್ನು ತಪಶ್ಚರ್ಯಕ್ಕೆ ಸಿದ್ಧಮಾಡಿದವು. ಕಾಲೇಜಿನಲ್ಲಿರುವಾಗಲೇ ಇವರೂ ಇವರ ಪರಮ ಮಿತ್ರರಾದ **ಅಗರಕರರೂ** ದೇಶಸೇವಾ ವ್ರತವನ್ನು ಕೈಕೊಂಡರು. ಎಂಥ ಪ್ರಸಂಗ ಬಂದರೂ ಸರಕಾರೀ ನೌಕರಿಯನ್ನು ಮಾಡಲಿಕ್ಕಿಲ್ಲೆಂದು ಪ್ರತಿಜ್ಞೆಗೈದರು. ಇವರ ಈ ವೀರಪ್ರತಿಜ್ಞೆಯು ಸಾವಿರಾರು ತರುಣರಿಗೆ ದಿವ್ಯಸ್ಫೂರ್ತಿಯಾಯಿತು. ಭಾರತದಲ್ಲಿಯೇ ನವಯುಗ್ವಂತರವನ್ನುಂಟುಮಾಡಿತು. ಪ್ರತಿಜ್ಞಾಬದ್ಧರಾದ ಈ ಪದವೀಧರರು, ಸರಕಾರದ ಸಹಾಯವಿಲ್ಲದೆಯೇ **ನ್ಯೂ ಇಂಗ್ಲೀಷ ಸ್ಕೂಲ**ವೆಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಅಗರಕರರು ಮುಖ್ಯಾಧ್ಯಾಪಕರಾದರು. ಟಿಳಕ, ಚಿಪಳೂಣಕರ, ಆಪಟೆ, ನಾಮಜೋಸಿ, ಈ ಐವರು ಇದರ ಸಂಚಾಲಕರಾದರು. ತರುಣರ ಅಂತಃಕರಣವನ್ನು ಜಾಗೃತಗೊಳಿಸಲು ಶಾಲೆಯನ್ನು ತೆಗೆದಂತೆಯೇ ಸಾರ್ವಜನಿಕರಲ್ಲಿ ಜಾಗೃತಿಯನ್ನೂ ಸ್ವಾಭಿಮಾನವನ್ನೂ ಹುಟ್ಟಿಸುವದಕ್ಕಾಗಿ, ಕೇಸರಿ ಹಾಗು ಮರಾಠಾ ವೃತ್ತಪತ್ರಗಳನ್ನು ಪ್ರಾರಂಭಿಸಿದರು. ಇವರ ಈ ವಿದ್ಯಾಮಂದಿರವೂ ವೃತ್ತಪತ್ರಗಳೂ ಅಲ್ಪಾವಧಿಯಲ್ಲಿಯೇ ಮಹಾರಾಷ್ಟ್ರದ ಮನವನ್ನು ತಮ್ಮ ಕಡೆಗೆ ಎಳೆದುಕೊಂಡವು. ಮಹಾಷ್ಟ್ರ ಚಳವಳಿಯ ಮುಖ್ಯ ಜೀವಿತಗಳಾದವು.

ರಾಷ್ಟ್ರೀಯ ಭಾವನೆಯ ಈ ಸಂಸ್ಥೆಗಳು ಸಾರ್ವಜನಿಕರಲ್ಲಿ ಸ್ವಾತಂತ್ರ್ಯದ ಭಾವನೆಯನ್ನೂ ಸ್ಫೂರ್ತಿಯನ್ನೂ ಬಿತ್ತಿದವು. ಜನರ ದುಃಖಗಳನ್ನು ಜಗತ್ತಿನೆದುರು ಇಡುವ ಮುಖ್ಯ ಮುಖಗಳಾದವು. ಕೊಲ್ಹಾಪೂರದ ಮಹಾರಾಜರ ಕರುಣಾಕತೆಯನ್ನು ಹೃದಯದ್ರಾವಕವಾಗಿ ವರ್ಣಿಸಹತ್ತಿದವು. ಮಹಾರಾಜರನ್ನು ಅತ್ಯಂತ ಕೆಟ್ಟರೀತಿಯಿಂದ

ಮಂತ್ರಿಗಳು ನಡೆಯಿಸಿಕೊಳ್ಳುವರೆಂದು ಕೇಸರಿ ಮತ್ತು ಮರಾಠಾ ಪತ್ರಗಳಲ್ಲಿ ಬಂದ ಟೀಕೆಗಳಿಗಾಗಿ, ಆ ಸಂಸ್ಥಾನದ ಮುಖ್ಯ ಮಂತ್ರಿಗಳಾದ ಬರ್ವೆಯವರು ಮಾನಹಾನಿಯ ಖಟ್ಲೆಯನ್ನು ಮಾಡಿದರು. ಅಗರಕರ ಮತ್ತು ಟಿಳಕರಿಗೆ ಇದರಲ್ಲಿ ೪ ತಿಂಗಳ ಶಿಕ್ಷೆಯಾಯಿತು. ಇದರಿಂದ ಇವರ ಕೀರ್ತಿಯು ಮಹಾರಾಷ್ಟ್ರ ಕರ್ನಾಟಕದಲ್ಲೆಲ್ಲ ಹಬ್ಬಿತು. ಇವರ ವಿಷಯದಲ್ಲಿ ಮಹಾರಾಷ್ಟ್ರದಲ್ಲಿ ಪ್ರೀತ್ಯಾದರಗಳು ಉತ್ಪನ್ನವಾಗುವದು ಸಹಜವಿದೆ. **ಸಾರ್ವಜನಿಕ ಕಾರ್ಯವನ್ನು ನಿಷ್ಕಾಮಕರ್ಮದಿಂದ ಪರಮಾತ್ಮನ ಸೇವೆ** ಎಂದು ಮಾಡುವವರನ್ನು ಜನತೆಯು ಪ್ರೀತಿಸುವದು ನಿಸರ್ಗನಿಯಮವಾಗಿದೆ. **ಡೊಂಗರಿ** ತುರಂಗದಲ್ಲಿ ಇಬ್ಬರೂ ಶಿಕ್ಷೆಯನ್ನು ಮುಗಿಸಿದರು.

ತುರಂಗದಲ್ಲಿರುವಾಗ ಇಬ್ಬರೂ ತಮ್ಮ ಆಯುಷ್ಯದ ಕಾರ್ಯಕ್ರಮವನ್ನು ನಿರ್ಣಯಿಸಿಕೊಂಡರು. ಅನೇಕ ವಿಷಯಗಳನ್ನು ಚರ್ಚಿಸಿ ನಿರ್ಣಯಗಳನ್ನು ಮಾಡಿಕೊಂಡರು. ಸಾರ್ವಜನಿಕ ಸೇವೆಯೇ ತಮ್ಮ ಜೀವನದ ಧ್ಯೇಯವೆಂಬ ದಿವ್ಯತೇಜಸ್ಸಿನಿಂದ ಹೊರಬಿದ್ದರು. ೧೮೮೪ರಲ್ಲಿ ಇವರೆಲ್ಲರೂ ಕೂಡಿ '**ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿ**' ಎಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ೧೮೮೫ರಲ್ಲಿ ಶಾಲೆಯು ಮಹಾವಿದ್ಯಾಲಯವಾಯಿತು. ಟಿಳಕರು ತಮ್ಮ ಪ್ರೀತಿಯ ವಿಷಯಗಳಾದ ಗಣಿತ ಮತ್ತು ಸಂಸ್ಕೃತಗಳನ್ನು ಕಲಿಸುತ್ತಿದ್ದರು. ೧೮೯೦ರ ವರೆಗೆ ಇದೇ ಕಾರ್ಯವು ಅವ್ಯಾಹತವಾಗಿ ಸಾಗಿತು. ಕಾರ್ಯಕರ್ತರಲ್ಲಿಯ ಮತಭೇದದ ಮೂಲಕ ಮಹಾವಿದ್ಯಾಲಯದಿಂದ ಟಿಳಕರು ದೂರ ಸರಿದು ಕೇಸರಿ ಮತ್ತು ಮರಾಠಾ ಪತ್ರಗಳ ಪೂರ್ಣ ಹೊಣೆಗಾರಿಕೆಯನ್ನು ಹೊತ್ತರು.

ಇಷ್ಟರಲ್ಲಿಯೇ **ಕ್ರಾಫರ್ಡ**ರ ಪ್ರಕರ್ಣಕ್ಕೆ ಕೈಹಾಕಿದರು. ರತ್ನಾಗಿರಿಯ ಕಮೀಶನರರಾದ ಕ್ರಾಫರ್ಡನ ಲಂಚದ ಪ್ರಕರ್ಣವನ್ನೆಲ್ಲ ಬೈಲಿಗೆಳೆದರು. ಇದರಲ್ಲಿ ಇವರ ಪಕ್ಷಕ್ಕೆ ಪೂರ್ಣ ಜಯ ದೊರೆಯದಿದ್ದರೂ ಭಾರತಕ್ಕೆ ದೊಡ್ಡ ಲಾಭವಾಯಿತು. ಈ ಪ್ರಕರ್ಣದಿಂದ ಬ್ರಿಟೀಶ ನ್ಯಾಯದೇವತೆಯ ಮೇಲಿದ್ದ ವಿಶ್ವಾಸವು ಹಾರಿಹೋಯಿತು. ಭಾರತದಲ್ಲಿ

ಇದರಿಂದ ವಿಲಕ್ಷಣ ಜಾಗೃತೆಯಾಯಿತು. ಇದರಿಂದ ಟಿಳಕರ ಕೀರ್ತಿಯು ಭಾರತವನ್ನು ವ್ಯಾಪಿಸಿತು.

ಕೇಸರಿ, ಮರಾಠಾ ಪತ್ರಗಳು ಜನಜಾಗೃತೆಯನ್ನು ಮಾಡುತ್ತಿದ್ದರೂ, ಹೊಟ್ಟೆಗೇನು ಗತಿ! ಇದಕ್ಕಾಗಿ 'ಲಾ, ಕ್ಲಾಸನ್ನು ತೆಗೆದು ಚರಿತಾರ್ಥವನ್ನು ಜರುಗಿಸಿಕೊಂಡು ಸಾರ್ವಜನಿಕ ಕಾರ್ಯವನ್ನು ಮುಂದೆ ಸಾಗಿಸಿದರು.

ಕೇಸರಿಯಿಂದ ಟಿಳಕರ ಮತ್ತು ಜನತೆಯ ಸಂಬಂಧವು ಹೆಚ್ಚೆಚ್ಚು ಸಮೀಪವಾಯಿತು. ಸಮ್ಮತಿ ವಯಸ್ಸಿನ ಬಿಲ್ಲಿನ ವಿರುದ್ಧವಾಗಿ ಜನತೆಯ ಪಕ್ಷವನ್ನು ಹಿಡಿದು ಹೋರಾಡಿ ತಮ್ಮ ಪಾಂಡಿತ್ಯದ ಬಲದಿಂದ ವಿರೋಧಪಕ್ಷಗಳ ಬಾಯಿ ಬಂದು ಮಾಡಿದರು. ಇದರಿಂದ ಸನಾತನಿಗಳೆಲ್ಲರೂ ಧರ್ಮಸಂರಕ್ಷಕರೆಂದು ಲೋಕಮಾನ್ಯರ ಬೆನ್ನು ಹತ್ತಿದರು.

ಚಾಣಾಕ್ಷರಾದ ಲೋಕಮಾನ್ಯರು ಜನರಲ್ಲಿಯ ಭಾವನೆಗಳ ಅಭ್ಯಾಸ ಮಾಡಿ, ಹಿಂದಿನ ಪರಂಪರೆಗೇ ಹೊಸ ಸ್ವರೂಪ ಕೊಟ್ಟರೆ, ಜನತೆಯು ಜಾಗೃತವಾಗುವದೆಂದು ಕಂಡುಹಿಡಿದರು. ಇದನ್ನೇ ಕೇಸರಿ ಮುಖಾಂತರವಾಗಿಯೂ ವ್ಯಾಖ್ಯಾನಗಳ ಮುಖಾಂತರವಾಗಿಯೂ ತಮ್ಮ ತತ್ವಗಳನ್ನು ಪ್ರತಿಪಾದಿಸಹತ್ತಿದರು. ಈ ಉದ್ದೇಶದಿಂದಲೆ ಗಣಪತಿ ಉತ್ಸವ, ಹಾಗು ಶಿವಾಜಿ ಉತ್ಸವಗಳನ್ನು ಹೂಡಿದರು. ಮೊದಲಿನದರ ಉದ್ದೇಶವು ಧರ್ಮಜಾಗೃತಿ, ಎರಡನೆಯದರ ಉದ್ದೇಶವು ರಾಜಕೀಯ ಜಾಗೃತಿ. ಈ ಎರಡೂ ಉತ್ಸವಗಳು ಅತ್ಯಂತ ಲೋಕಪ್ರಿಯವಾದವು. ಅಖಿಲ ಭಾರತವನ್ನು ವ್ಯಾಪಿಸಿದವು. ಮಹಾರಾಷ್ಟ್ರದ ತರುಣರಲ್ಲಿ ಇಷ್ಟೇ ಅಲ್ಲ, ಭಾರತೀಯರಲ್ಲಿ ಸ್ವಧರ್ಮ ಸ್ವರಾಜ್ಯಗಳ ಪ್ರೇಮವನ್ನು ಹುಟ್ಟಿಸಲು ಈ ಎರಡೂ ಉತ್ಸವಗಳು ದೊಡ್ಡ ಸಾಧನಗಳಾದವು.

ಇದೇ ಸಮಯಕ್ಕೆ ಅವರು **'ಓರಾಯಿನ್'** ಎಂಬ ತಮ್ಮ ಅಮೌಲ್ಯವಾದ ಗ್ರಂಥವನ್ನು ಪ್ರಕಟಮಾಡಿದರು. ವೇದಗಳಲ್ಲಿ ವರ್ಣಿಸಿದ ಮೃಗಶಿರಾ ನಕ್ಷತ್ರದ ಚಲನವಲನಗಳ ಮೇಲಿಂದ ವೇದಗಳ ಕಾಲವು

ಕ್ರಿಸ್ತಪೂರ್ವದಲ್ಲಿ ೪೦೦೦ ಸಾವಿರ ವರ್ಷಗಳಿರುವವೆಂದು ಸಿದ್ಧಮಾಡಿದರು. ಈ ಗ್ರಂಥದಿಂದ ಇವರ ಕೀರ್ತಿಯು ಯುರೋಪದಲ್ಲೆಲ್ಲ ಹರಡಿತು. ೧೮೯೫ರಲ್ಲಿ ಇವರು ಕೌನ್ಸಿಲ್ಲಿನ ಸಭಾಸದರಾದರು. ಇದೇ ಸಮಯದಲ್ಲಿ ಭಯಂಕರವಾದ ಬರಗಾಲವು ಬಿತ್ತು. ಲೋಕಮಾನ್ಯರು ಜನತೆಯ ಪಕ್ಷವನ್ನು ಎತ್ತಿಹಿಡಿದು ಕೇಸರಿಯಲ್ಲಿ ಜನತೆಯ ಕಷ್ಟಗಳನ್ನು ವರ್ಣಿಸ ಹತ್ತಿದರು. ಸರಕಾರದಿಂದ ಸಹಾಯ ದೊರಕಿಸಿಕೊಡಲು ಸಹಾಯ ಮಾಡಿದರು. ಶ್ರೀಮಂತ ಜನರಿಗೆ ಉಪದೇಶಮಾಡಿ ಕಾಳುಕಡಿಗಳನ್ನು ಅಲ್ಪ ಬೆಲೆಯಲ್ಲಿ ದೊರೆಯುವಂತೆ ಅಂಗಡಿಗಳನ್ನು ತೆರೆಯಿಸಿದರು. ಹೀಗೆ ವಿವಧ ಸಾರ್ವಜನಿಕ ಜೀವನದಲ್ಲಿ ಲೋಕಮಾನ್ಯರ ಕೈವಾಡವಿರುತ್ತಿತ್ತು. ಲೋಕಮಾನ್ಯರ ಜೀವನವು ಈ ಸಮಯಕ್ಕೆ ಪೂರ್ಣವಾಗಿ ಸಾರ್ವ ಜನಿಕ ಜೀವನದಲ್ಲಿ ಸಮರಸವಾಗಿತ್ತು.

೧೮೯೭ರಲ್ಲಿ ಪ್ಲೇಗಿನ ಹಾವಳಿಯು ಪುಣೆಯಲ್ಲಿ ಭಯಂಕರವಾಯಿತು. ಆಗ ಟಿಳಕರು ಮಾಡಿದ ಜನಸೇವೆಯು ಅವರ್ಣನೀಯವಾದದ್ದು. ಬಂಗಾರದ ಬೆಲೆಯು ಬೆಂಕಿಯಲ್ಲಿ ತಿಳಿಯುತ್ತದೆಂಬಂತೆ, ಆ ಸಂಕಟಸಮಯದಲ್ಲಿ ಎಲ್ಲ ದೇಶಾಭಿಮಾನಿಗಳು ಜೀವದಂಜಿಕೆಯಿಂದ ಊರು ಬಿಟ್ಟರು. ಆದರೆ ಲೋಕಮಾನ್ಯರು ಬಡವರ ಮಧ್ಯದಲ್ಲಿಯೇ ನಿಂತು, ಆಸ್ಪತ್ರೆಗಳನ್ನು ತೆಗೆದು, ತೆಗೆಯಿಸಿ, ಜನತೆಯ ಸೇವೆಯನ್ನು ಕೈಕೊಂಡರು. ಈ ಸಮಯದಲ್ಲಿ ಸೈನಿಕರು ನಡೆಯಿಸಿದ ಅತ್ಯಾಚಾರಗಳನ್ನೂ ಅನ್ಯಾಯಗಳನ್ನೂ ಕೇಸರಿ ಪತ್ರದಲ್ಲಿ ಬೈಲಿಗೆಳೆದರು. ಸರಕಾರದ ದೋಷಕ್ಕೆ ಪಾತ್ರರಾದರು. ಸ್ವಾಭಿಮಾನಿಗಳಾದ ಜನರು ಅನ್ಯಾಯವನ್ನೂ ಅಪಮಾನವನ್ನೂ ತಾಳ ಲಾರದೆ ರೊಚ್ಚಿಗೆದ್ದರು. **ಚಾಫೇಕರ ಬಂಧುಗಳು** ಪ್ಲೇಗಾಧಿಕಾರಿಗಳ ಉಪಟಳವನ್ನು ನಿಲ್ಲಿಸಬೇಕೆಂದು, ೧೮೯೭ರ ಜೂನ ೨೨ನೇ ತಾರೀಖಿನ ದಿವಸ **ರ್‍ಯಾಂಡ** ಸಾಹೇಬನ ಕೊಲೆಯನ್ನು ಮಾಡಿದರು. ಈ ಕೊಲೆಯಿಂದ ಸರಕಾರದ ಎದೆಯು ಧಸಕ್ಕೆಂದಿತು. ಕೊಲೆಗಡಕರನ್ನು ಹುಡುಕ ಹತ್ತಿದರು. ಚಾಫೇಕರ ಬಂಧುಗಳನ್ನು ಹಿಡಿದು ಗಲ್ಲಿಗೇರಿಸಿದರು. ಈ ಕೃತ್ಯದಲ್ಲಿ ಲೋಕಮಾನ್ಯರ ಕೈವಾಡವು ಇರಲೇಬೇಕೆಂದೂ, ಅವರ ಕೇಸರಿ

ಯಲ್ಲಿಯ ಲೇಖಗಳಿಂದಲೇ ಈ ಪರಿಸ್ಥಿತಿಯುಂಟಾಯಿತೆಂದೂ ಒಗೆದು, ಒಂದೆರಡು ಲೇಖಗಳನ್ನು ಹುಡುಕಿ ಎಳೆದಾಡಿ, ರಾಜದ್ರೋಹದ ಖಟ್ಲೆಯನ್ನು ಹಾಕಿದರು. ೧೮ ತಿಂಗಳ ಸಶ್ರಮ ಶಿಕ್ಷೆಯಾಯಿತು. ಈ ಶಿಕ್ಷೆಯ ಅವಧಿಯಲ್ಲಿ 'The Arctic Home in the Vedas' **'ದಿ ಆರ್ಕಟಿಕ್ ಹೋಮ್ ಇನ್ ದಿ ವೇದಾಜ,** ವೆಂಬ ಗ್ರಂಥವನ್ನು ಬರೆದರು. ಈ ಗ್ರಂಥದಿಂದಂತೂ ಇವರ ಕೀರ್ತಿಯು ಇಮ್ಮಡಿಯಾಯಿತು. ಈ ಖಟ್ಲೆಯಿಂದ ಲೋಕಮಾನ್ಯರು ಭಾರತೀಯರ ಆದರಕ್ಕೆ ಪಾತ್ರರಾದರು. ಭಾರತದ ರಾಜಕೀಯ ಎಲ್ಲ ಮುಖಂಡರ ಲಕ್ಷ್ಯವನ್ನು ತಮ್ಮ ಕಡೆಗೆ ಎಳೆದುಕೊಂಡರು.

ಜೇಲಿನಿಂದ ಹೊರಬಿದ್ದು ಸ್ವಲ್ಪ ದಿನಗಳಲ್ಲಿಯೇ ಲೋಕಮಾನ್ಯರು ಇನ್ನೊಂದು ಖಟ್ಲೆಗೆ ಎದುರಾಗಬೇಕಾಯಿತು. ಇದು **'ತಾಯಿ ಮಹಾರಾಜ ಕೇಸ,** ಎಂದು ಪ್ರಸಿದ್ಧವಾಗಿದೆ. ಲೋಕಮಾನ್ಯರ ಪರಮ ಮಿತ್ರರಾದ ಸರದಾರ ಬಾಬಾ ಮಹಾರಾಜರು ಮರಣಕಾಲದಲ್ಲಿ ಮಕ್ಕಳಿಲ್ಲದ್ದರಿಂದ ತಮ್ಮ ಆಸ್ತಿಗೆ ತಾವೂ ಒಬ್ಬ ಟ್ರಸ್ಟರಾಗಬೇಕೆಂದು ಆಗ್ರಹ ಹಿಡಿದದ್ದರಿಂದ ಒಪ್ಪಿದರು. ಅದರಂತೆ ಮೃತ್ಯುಪತ್ರವು ಬರೆಯಲ್ಪಟ್ಟಿತ್ತು. ಮಹಾರಾಜರ ಮರಣದ ನಂತರ ಅವರ ಹೆಂಡತಿಯ ಅನುಮತಿಯಿಂದ ಒಬ್ಬನನ್ನು ದತ್ತಕ ಮಾಡಿದರು. ಮುಂದೆ ಅವಳು ಈ ದತ್ತಕವು ತನ್ನ ಮನಸ್ಸಿನಂತೆ ಆಗಿಲ್ಲವೆಂದೂ ಟ್ರಸ್ಟಿನವರು ಈ ವಿಷಯದಲ್ಲಿ ತನ್ನ ಮೇಲೆ ಜುಲುಮೆ ಮಾಡಿದರೆಂದೂ, ಜಗಳವನ್ನು ತೆಗೆದಳು. ಇದರಲ್ಲಿ ಖೊಟ್ಟಿ ಆರೋಪವು ಟಿಳಕರ ಮೇಲೆ ಹೊರಿಸಲ್ಪಟ್ಟು ಖಟ್ಲೆಯು ಆರಂಭವಾಯಿತು. (ಇದರಲ್ಲಿ ಸರಕಾರದ ಕೈವಾಡವಿತ್ತೆಂದು ಜನರು ಅನ್ನುತ್ತಾರೆ). ಇದರಲ್ಲಿ ಲೋಕಮಾನ್ಯರಿಗೆ ೧೮ ತಿಂಗಳ ಶಿಕ್ಷೆಯಾಯಿತು. ಆದರೆ ಹಾಯಕೋರ್ಟಿನಲ್ಲಿ ಲೋಕಮಾನ್ಯರು ನಿರ್ದೋಷಿಗಳೆಂದು ನಿರ್ಣಯವಾಗಿದ್ದಲ್ಲದೆ ಸರಕಾರದ ಪಕ್ಷದವರೇ ಖೊಟ್ಟಿ ಕಾಗದಪತ್ರಗಳನ್ನು ಸಿದ್ಧಪಡಿಸಿದ್ದರೆಂಬುದು ಬಹಿರಂಗವಾಯಿತು. ಈ ರೀತಿಯಾಗಿ ಟಿಳಕರ ಮೋರೆಗೆ ಮಸಿಹಚ್ಚಬೇಕೆಂದು ಹೂಡಿದ ಸರಕಾರದ ಮೋರೆಗೆ ಮಸಿ ಹತ್ತಿತು.

೧೮೯೯ರಲ್ಲಿ **ಲಾರ್ಡ ಕರ್ಝನನ** ಆಳಿಕೆಯು ಪ್ರಾರಂಭ ವಾಯಿತು. ಬೂದಿಯಿಂದ ಮುಚ್ಚಿದ ಕೆಂಡವು ಕಂಡಂತಾಯಿತು. ಪ್ರಜಾ ರಾಜ್ಯವು ಇಂಗ್ಲೀಷರಿಂದ ದೊರೆಯುವದೆಂದು ಕುಳಿತ ಜನರ ಕಣ್ಣಲ್ಲಿ ಅಂಜನ ಹಾಕಿದಂತಾಯಿತು. ಉದ್ದಾಮತನದ ದಬ್ಬಾಳಿಕೆಯ ಆಳಿಕೆಯು ಎಲ್ಲರನ್ನೂ ರೊಚ್ಚಿಗೆಬ್ಬಿಸಿತು. ಈ ದಬ್ಬಾಳಿಕೆಯ ಶಿಖರವೆಂದರೆ ವಂಗ ಭಂಗವು. ವಂಗವನ್ನು ಭಂಗಮಾಡಬಾರದೆಂದು ಜನರು ಬೇಡಿದರು, ಕೇಳಿದರು, ಕೈಜೋಡಿಸಿದರು, ಅರ್ಜಿಗಳನ್ನು ಕಳಿಸಿದರು, ಸಭೆಗಳನ್ನು ಮಾಡಿದರು, ಗೊತ್ತುವಳಿಗಳ ಮಳೆಗರೆದರು. ಆದರೆ ಎಲ್ಲವೂ ಹೊಳೆಯಲ್ಲಿ ಹೋಮಮಾಡಿದಂತಾಯಿತು. ಕರ್ಝನನು ತನ್ನ ಹಟಮಾರಿತನವನ್ನು ಬಿಡಲಿಲ್ಲ. ೧೯೦೫ರಲ್ಲಿ ವಂಗಭಂಗವನ್ನು ಮಾಡಿ ವಂಗಭಂಗವು ವಜ್ರಲೇಪ ವೆಂದು ಸಾರಿದನು. ಕರ್ಝನನು ಇದರಿಂದ ಬ್ರಿಟನ್ನಕ್ಕೆ ಹಿತವನ್ನು ಮಾಡದೆ ಅದಕ್ಕೆ ಬೆಂಕಿಯನ್ನು ಹಚ್ಚಿದಂತಾಯಿತು. ಇಂಗ್ಲಂಡಕ್ಕೆ ಹೋದನು. ಇದರಿಂದ ಜನತೆಗೆ ಭಯಂಕರ ಅಪಮಾನವಾಗಿ ಸೇಡು ತೀರಿಸಿಕೊಳ್ಳುವ ಬುದ್ಧಿಯು ತಲೆಯೆತ್ತಿತು. ಕೆಲವು ತರುಣರ ತಲೆ ತಿರುಗಿ, ಕ್ರಾಂತಿಕಾರಕ ಪಕ್ಷವು ಹುಟ್ಟಿತು. ಕೊಲೆ-ಸುಲಿಗೆಗೆ ಪ್ರಾರಂಭ ವಾಯಿತು. ಅಲ್ಲಲ್ಲಿ ಬಾಂಬುಗಳು ಹಾರಹತ್ತಿದವು. ದಬ್ಬಾಳಿಕೆಯನ್ನು ನಡೆಯಿಸುವ ಅಧಿಕಾರಿಗಳ ಪಾರುಪತ್ಯಕ್ಕೆ ಕೈಹಾಕಿದರು. ಇಂಗ್ಲೀಷರ ಜೀವಿತವೂ ರಾಜ್ಯವೂ ಹಾಳಾಗಿ ಹೋಗುವವೋ ಏನೋ ಎಂಬುವಂತೆ ಪರಿಸ್ಥಿತಿಯು ಉತ್ಪನ್ನವಾಯಿತು. ತರುಣರ ತಲೆಯು ತಿರುಗಿ ಅವರು ಕೊಲೆಗೆ ಯಾವ ಕಾರಣದಿಂದ ಪ್ರವೃತ್ತರಾಗಿದ್ದರೆಂಬದನ್ನು ತಿಳಿಯದೆ ಇಂಗ್ಲೀಷ ಸರಕಾರದವರು ಎಷ್ಟೋ ಜನ ತರುಣರನ್ನು ಗಲ್ಲಿಗೇರಿಸಿ ದರು; ಹದ್ದುಪಾರು ಮಾಡಿಸಿದರು; ಅವರ ಆಸ್ತಿಯ ಮೇಲೆ ನೇಗಿಲ ವನ್ನು ಹೊಡಿಸಿದರು; ಇಷ್ಟಕ್ಕೇ ಶಾಂತವಾಗದೆ ಕಟ್ಟಳೆಗನುಸರಿಸಿ ಹೋರಾಡುವಂಥ ಮುಂದಾಳುಗಳ ಮೇಲೆಯೂ ರಾಜದ್ರೋಹದ ಖಟ್ಲೆ ಗಳನ್ನು ಹೇರಿ ಅವರಿಗೆ ಶಿಕ್ಷೆಗಳನ್ನು ಕೊಡಹತ್ತಿದರು. ೧೯೦೮ರಲ್ಲಿ ಇದೇ ದಬ್ಬಾಳಿಕೆಯ ರಾಜ್ಯದಲ್ಲಿ ಲೋಕಮಾನ್ಯರ ಮೇಲೆಯೂ

ರಾಜದ್ರೋಹದ ಖಟ್ಲೆಯಾಗಿ ೬ ವರ್ಷ ಶಿಕ್ಷೆಯೂ ೧೦೦೦ ರೂಪಾಯಿ ದಂಡವೂ ಆಯಿತು. ಅವರನ್ನು ಮಂಡಾಲೆಯ ತುರಂಗದಲ್ಲಿಟ್ಟರು. ಇದರಿಂದ ಅವರು ಎದೆಗುಂದದೆ, ಆರು ವರ್ಷಗಳವರೆಗೆ ವೇದೋಪನಿಷತ್ತು-ಗೀತೆಗಳ ಅಧ್ಯಯನ ಮಾಡಿ 'ಗೀತಾರಹಸ್ಯ' ವೆಂಬ ಸುಂದರವಾದ ಗ್ರಂಥವನ್ನು ಬರೆದರು. 'ಓರಾಯನ್' ಮತ್ತು 'ಆರ್ಕ್‌ಟಿಕ್ ಹೋಮ್ ಇನ್ ದಿ ವೇದಾಜ' ಎಂಬ ಗ್ರಂಥಗಳನ್ನು ಪರದೇಶದ ಪಂಡಿತರ ಮತಗಳ ಖಂಡನವನ್ನು ಮಾಡುವದಿದ್ದುದರಿಂದ ಇಂಗ್ಲಿಷಿನಲ್ಲಿ ಬರೆದರು. ಸ್ವದೇಶದ ಜನರು ನಿಷ್ಕಾಮಕರ್ಮದ ಮಾರ್ಗವನ್ನು ಹಿಡಿದು ದೇಶಕಲ್ಯಾಣಕ್ಕೋಸ್ಕರ ಹೋರಾಡಬೇಕೆಂಬ ಉದ್ದೇಶವನ್ನಿಟ್ಟು ಗೀತಾರಹಸ್ಯವನ್ನು ಮರಾಠಿಯಲ್ಲಿ ಬರೆದರು. ಗೀತಾರಹಸ್ಯದಂಥ ಉತ್ತಮ ಗ್ರಂಥವು ಜಗತ್ತಿನ ವಾಙ್ಮಯದಲ್ಲಿಯೇ ಮಿಗಿಲಾದ ತತ್ವಜ್ಞಾನದ ಗ್ರಂಥವೆಂದರೇನೂ ಅತಿಶಯೋಕ್ತಿಯಾಗಲಿಕ್ಕಿಲ್ಲ.

೧೯೧೪ರಲ್ಲಿ ಟಿಳಕರು ಮಂಡಾಲೆಯಿಂದ ಬಿಡುಗಡೆಯಾಗಿ ಬಂದರು. ಬಂದಕೂಡಲೇ ೬ ವರ್ಷದ ಸಂಗತಿಗಳನ್ನೆಲ್ಲ ಪರಿಶೀಲಿಸಿ ಮತ್ತೆ ರಾಜಕೀಯ ಕೆಲಸಕ್ಕೆ ಕೈಹಾಕಿದರು. ೧೯೧೪ರಲ್ಲಿ ಮಹಾಯುದ್ಧವು ಪ್ರಾರಂಭವಾದ್ದರಿಂದ ಈ ಕಾಲಕ್ಕೆ ಸಾಮ್ರಾಜ್ಯವು ಗಂಡಾಂತರದಲ್ಲಿದ್ದುದರಿಂದ ಜನರು ಬ್ರಿಟಿಶರಿಗೆ ಸಹಾಯ ಮಾಡಬೇಕೆಂದು ತಮ್ಮ ಮತವನ್ನು ಹೊರಗೆಡವಿದರು. ಸ್ವಾಭಿಮಾನಕ್ಕೆ ತಕ್ಕಂತೆ ಅಧಿಕಾರಗಳನ್ನು ಕೊಟ್ಟರೆ ಅವುಗಳನ್ನು ಸ್ವೀಕರಿಸಿ ಕೆಲಸ ಮಾಡಬೇಕೆಂದು ಜನರನ್ನು ಹುರಿದುಂಬಿಸಿದರು. ೧೯೧೬ರಲ್ಲಿ ಲಖನೌದ ರಾಷ್ಟ್ರೀಯ ಸಭೆಯಲ್ಲಿ ಇವರು ಪ್ರವೇಶಮಾಡಿ ಹಿಂದೂ ಮುಸಲ್ಮಾನರ ಐಕ್ಯದ ತಳಹದಿಯನ್ನು ಹಾಕಿದರು. ಹಿಂದೂದೇಶಕ್ಕೆ ಸುಧಾರಣೆಗಳನ್ನು ಕೊಡುವ ಉದ್ದೇಶದಿಂದ ಭಾರತ ಮಂತ್ರಿಯಾದ ಮಾಂಟೆಗ್ಯೂ ಸಾಹೇಬರು ಈ ದೇಶಕ್ಕೆ ಬಂದಾಗ ಅವರ ಸಂಗಡ ಮಾತನಾಡಿ ಹಿಂದೀಯರಿಗೆ ಅವಶ್ಯವಾಗಿರುವ ರಾಜಕೀಯ ಸುಧಾರಣೆಗಳನ್ನು ಅವರ ಮುಂದಿಟ್ಟರು. ಹೋಮರೂಲ ಚಳವಳಿಯ ಬಗ್ಗೆ ಇಂಗ್ಲಂಡಕ್ಕೆ ಹೋಗಿ ಕೆಲಸ ಮಾಡಬೇಕೆಂದು ೧೯೧೮ರಲ್ಲಿ ಬಿಪಿನ ಚಂದ್ರ

ಪಾಲ, ಖಾಪರ್ಡೆ, ಕೇಳಕರರನ್ನೊಡಗೊಂಡು ಟಿಳಕರು ಇಂಗ್ಲಂಡಕ್ಕೆ ಹೊರಟರು. ಕೋಲಂಬೋದಲ್ಲಿ ಅಪ್ಪಣೆಯು ಇಲ್ಲೆಂದು ಅವರಿಗೆ ವ್ಹಾಯಿಸರಾಯನ ಆಜ್ಞೆಯು ಬಂದಿತು. ಯುದ್ಧವು ನಡೆದ ಹೊತ್ತಿನಲ್ಲಿ ಹೋಮರೂಲ ಚಳವಳಿಯನ್ನು ಜೋರಿನಿಂದ ನಡೆಸುತ್ತಿದ್ದ ಟಿಳಕರಿಗೆ ಮುಂಬಯಿ ಸರಕಾರದವರು ಭಾಷಣ ಮಾಡಕೂಡದೆಂಬ ಆಜ್ಞೆಯನ್ನು ಕೊಟ್ಟರು. ೧೯೧೮ರ ಅಕ್ಟೋಬರದಲ್ಲಿ ವ್ಹ್ಯಾಲೆಂಟಾಯನ ಚಿರೋಲರ ಮೇಲೆ ಮಾಡಿದ ಖಟ್ಲೆಗಾಗಿಯೂ ಹಿಂದುಸ್ತಾನದ ಸುಧಾರಣೆಗಳ ಬಗ್ಗೆ ಪ್ರಯತ್ನ ಮಾಡುವದರ ದೆಶೆಯಿಂದಲೂ ಇಂಗ್ಲಂಡಕ್ಕೆ ತೆರಳಿದರು. ಚಿರೋಲ ಖಟ್ಲೆಯು ಇವರ ವಿರುದ್ಧವಾದದ್ದರಿಂದ ಮೂರು ಲಕ್ಷ ರೂಪಾಯಿಗಳವರೆಗೆ ಇವರಿಗೆ ನಷ್ಟವಾಯಿತು. ಇದನ್ನು ಹಿಂದುಸ್ತಾನದ ಜನರು ಸ್ವಸಂತೋಷದಿಂದ ಟಿಳಕರಿಗೆ ಕೊಟ್ಟರು. ಇಂಗ್ಲಂಡದ ಕೆಲಸವು ಮುಗಿದನಂತರ ೧೯೧೯ರಲ್ಲಿ ಕೊಡಲ್ಪಟ್ಟ ಸುಧಾರಣೆಗಳನ್ನು ಯಶಸ್ವಿ ಯಾಗಿ ಮಾಡುವ ಉದ್ದೇಶದಿಂದ ೧೯೨೦ ನೇಯ ಎಪ್ರಿಲದಲ್ಲಿ 'Congress Democratic Party' '**ಕಾಂಗ್ರೆಸ್ ಡೆಮೋಕ್ರಾಟಿಕ್ ಪಾರ್ಟಿ**' ಎಂಬ ಸಂಘವನ್ನು ಸ್ಥಾಪಿಸಿ ಅದಕ್ಕಾಗಿ ಚಳವಳಿಯನ್ನೆಬ್ಬಿಸಿದರು. ಆಗಿನ ಕಾಲದಲ್ಲಿ ಮೂವರು ಮುಂದಾಳುಗಳ ಕಡೆಗೆ ಎಲ್ಲ ಜನರ ಕಣ್ಣು ಗಳು ಇದ್ದವು. ಲೋಕಮಾನ್ಯ ಟಿಳಕ, ಮಹಾತ್ಮಾ ಗಾಂಧಿ ಮತ್ತು ಲಜಪತರಾಯ. ಗಾಂಧಿಯವರು ಸುಧಾರಣೆಗಳಲ್ಲಿ ಅರ್ಥವಿಲ್ಲವೆಂದೂ, ಪಂಜಾಬದೊಳಗಾದ ಕೊಲೆಯಲ್ಲಿ ನ್ಯಾಯವು ಸಿಗಲಿಲ್ಲವೆಂದೂ ಅಸಹಕಾರತೆಯ ಚಳವಳವನ್ನು ಹೂಡಬೇಕೆನ್ನುತ್ತಿದ್ದರು. ಲಜಪತ ರಾಯರೂ ಪಂಜಾಬದೊಳಗಾದ ಅತ್ಯಾಚಾರದ ದೆಶೆಯಿಂದ ವಿರೋಧ ವೆಂದು (Protest) ಪಂಜಾಬದ ಕೌನ್ಸಿಲಿನಲ್ಲಿ ಯಾರೂ ಹೋಗಬಾರ ದೆಂದು ಚಳವಳವನ್ನು ನಡೆಸಿದ್ದರು. ಲೋಕಮಾನ್ಯ ಟಿಳಕರು ಮಾತ್ರ ಸಿಕ್ಕಷ್ಟನ್ನು ಸ್ವೀಕರಿಸಿ ಹೆಚ್ಚಿನದಕ್ಕಾಗಿ ಹೋರಾಡೋಣ ವೆಂಬ ಮತ ದವರಿದ್ದದರಿಂದ ಸುಧಾರಣೆಗಳು ಅಸಮಾಧಾನಕರವಾಗಿದ್ದರೂ ಕೂಡ ಅವುಗಳನ್ನು ಯಶಸ್ವಿಯಾಗಿ ಮಾಡಿ ತೋರಿಸಬೇಕೆಂದು ಪ್ರಯತ್ನವನ್ನು ಮಾಡುತ್ತಿದ್ದರು.

ತಾಯೀಮಹಾರಾಜ ಖಟ್ಲೆಯಲ್ಲಿ ಯಶಸ್ಸು ಸಿಕ್ಕಿತ್ತು. ಆದ್ದರಿಂದ ಇವರು ಬೇಗನೆ ಮರಣವನ್ನು ಹೊಂದುವರೆಂದು ಯಾರಿಗೂ ಅನಿಸಿದ್ದಿಲ್ಲ. ೧೯೨೦ರ ಜುಲೈ ೩೧ನೇ ತಾರೀಖಿಗೆ ಅವರ ಮೈಯಲ್ಲಿ ಸ್ವಾಸ್ಥ್ಯವಿಲ್ಲದಾಯಿತು. ಔಷಧೋಪಚಾರಗಳಲ್ಲಿ ಏನೂ ಕಡಿಮೆಯಾಗಲಿಲ್ಲ. ಮಹಾತ್ಮಾ ಗಾಂಧಿಯವರಂತೂ ಕಡೆತನಕ ಅವರ ಸಮೀಪದಲ್ಲಿಯೇ ಉಪಚಾರಕರಾಗಿದ್ದರು. ಕಟ್ಟಕಡೆಗೆ ೩೧ನೇ ತಾರೀಖಿನ ದಿವಸ ಅವರು ಈ ಲೋಕವನ್ನು ಬಿಟ್ಟು ತೆರಳಿ ಹಿಂದುಸ್ಥಾನವನ್ನು ದುಃಖಸಾಗರದಲ್ಲಿ ಮುಳುಗಿಸಿದರು. ಇವರ ಪ್ರೇತವಿಧಿಗೆ ಎಲ್ಲ ಜಾತಿಯ ಎಲ್ಲ ಮತದ ಎಲ್ಲ ಪಂಗಡಗಳ ಜನರು ಬಂದಿದ್ದರು ಎಂಬದು ಒಂದೇ ಸಂಗತಿಯಿಂದ ಟಿಳಕರು ಎಷ್ಟು ಲೋಕಮಾನ್ಯರಿದ್ದರೆಂಬುದು ವ್ಯಕ್ತವಾಗುವದು. ಚಿಕ್ಕಂದಿನಿಂದಲೇ ರಾಷ್ಟ್ರದ ಕೆಲಸವನ್ನು ಮಾಡುವೆನೆಂದು ಪಣತೊಟ್ಟು ರಾಷ್ಟ್ರೀಯತ್ವವನ್ನು ದೇಶದ ಜನಸಾಮಾನ್ಯರಲ್ಲಿ ಹುಟ್ಟಿಸಿ ದಬ್ಬಾಳಿಕೆಯ ಸರಕಾರದ ಸಂಗಡ ನಾಲ್ವತ್ತು ವರ್ಷಗಳ ವರೆಗೆ ಹೋರಾಡಿದ ಈ ದೇಶಭಕ್ತನಿಗೆ ಜನರು ಸ್ವಂತಸ್ಫೂರ್ತಿಯಿಂದ 'ಲೋಕಮಾನ್ಯರೆಂಬ' ಅಜರಾಮರ ಬಿರುದನ್ನು ಕೊಟ್ಟರು. ರಾಷ್ಟ್ರೀಯೋನ್ನತಿಯ ಮಾರ್ಗವು ಹೂವಿನ ಹಾಸಿಗೆಯಲ್ಲ, ಮುಳ್ಳಿನಿಂದ ತುಂಬಿರುವ ಕಠಿಣವಾದ ಹಾದಿಯೆಂಬುದನ್ನೂ, ಸಹನದಿಂದಲೇ ಸ್ವಾತಂತ್ರ್ಯವೆಂಬ ಮಂತ್ರವನ್ನೂ ಲೋಕಮಾನ್ಯರ ಚರಿತ್ರವು ಪಾರತಂತ್ರ್ಯದಲ್ಲಿ ತೊಳಲಾಡುತ್ತಿರುವ ಭಾರತೀಯರಿಗೆ ಉಪದೇಶಿಸುತ್ತದೆ.

———

# ಲೋಕಮಾನ್ಯರ ರಾಜಕೀಯ ಧೋರಣ

ಲೋಕಮಾನ್ಯರ ಚರಿತ್ರೆಯೆಂದರೆ ಹಿಂದುಸ್ತಾನದ ಸ್ವಾತಂತ್ರ್ಯ ಯುದ್ಧದ ಇತಿಹಾಸವೆಂದೇ ಹೇಳಬಹುದು. ಹಿಂದುಸ್ತಾನದ ಸ್ವಾತಂತ್ರ್ಯ ಯುದ್ಧವು ೧೯೦೫ರಲ್ಲಿ ವಂಗಭಂಗದಿಂದಲೇ ಪ್ರಾರಂಭವಾಯಿತೆಂದು ಎಲ್ಲರಿಗೂ ಗೊತ್ತಿದ್ದ ಮಾತು. ರಾಷ್ಟ್ರೀಯ ಸಭೆಯು ೧೮೮೫ರಿಂದಲೇ ಪ್ರಾರಂಭವಾದರೂ ೧೯೦೫ರ ವರೆಗೆ ಅದರಲ್ಲಿ ರಾಷ್ಟ್ರೀಯ ಹೋರಾಟದ ಕುರುಹು ಇರಲಿಲ್ಲ. ರಾಷ್ಟ್ರೀಯ ಸಭೆಯು ಹುಟ್ಟಿದ್ದು ಮೊದಲು ಎ. ಓ. ಹ್ಯೂಮರಿಂದ. ಹ್ಯೂಮ ಸಾಹೇಬರು ಎಷ್ಟೇ ಉದಾರ ಮನಸ್ಸಿನವರಿದ್ದರೂ ಹಿಂದುಸ್ತಾನವು ಇಂಗ್ಲಂಡದ ಕೈಯಿಂದ ಪಾರಾಗಿ ಸ್ವತಂತ್ರವಾಗಬೇಕೆಂಬುವದು ಅವರ ಮನಸ್ಸಿನಲ್ಲಿರಲು ಸಾಧ್ಯವಿಲ್ಲ. ಸರಕಾರದ ದಬ್ಬಾಳಿಕೆಯಿಂದ ಸುಶಿಕ್ಷಿತರ ಹೃದಯದಲ್ಲಿ ಸ್ವಾತಂತ್ರ್ಯದ ಬೀಜವು ಬಿತ್ತಲ್ಪಟ್ಟು ಒಂದಿಲ್ಲೊಂದು ದಿನ ಅದು ಭಯಂಕರವಾದ ಬೆಂಕಿಯನ್ನು ಕಾರುವದೆಂಬ ಶಂಕೆಯು ಹ್ಯೂಮ ಸಾಹೇಬರಿಗೆ ಬಂದದ್ದರಿಂದ ಸುಧಾರಣೆಯನ್ನು ಪಡೆಯುವದಕ್ಕಾಗಿ ಕ್ರಾಂತಿಕಾರಕ ಮಾರ್ಗವನ್ನು ಬಿಟ್ಟು ನಿಯಮಬದ್ಧ ಮಾರ್ಗವನ್ನು ಜನರಿಗೆ ತೋರಿಸಿ ಕೊಡುವದೇ ಅವರ ಮುಖ್ಯ ಉದ್ದೇಶವಾಗಿತ್ತು.

'So far as the union was constituted, there was absalute unanimity that unswering loyalty to the British Crown was the key-note of the institution...it was prepared when necessary to oppose by all constitutional methods, all authorities, high or low, here or in England, whose acts or omissions are opposed to their principles of the Government of India as laid down from time to time by the British parliament and endorsed by the British sovereign.'

'ಈ ಸಂಸ್ಥೆಯು ಬಗ್ಗೆ ಎಲ್ಲರೂ ಒಪ್ಪಿಕೊಂಡ ಮಾತೇನೆಂದರೆ :— ಬ್ರಿಟಿಶರಾಜರಿಗೆ

ಕೂದಲೆಳೆಯಷ್ಟು ಕದಲದಂಥ ಸ್ವಾಮಿಭಕ್ತಿಯು ಈ ಸಂಸ್ಥೆಯ ತಳಹದಿಯಾಗಿರುತ್ತದೆ ಆದರೆ ಈ ಸಂಸ್ಥೆಯು ಎಲ್ಲ ನಿಯಮಬದ್ಧ ರೀತಿಯಿಂದ ಸರಕಾರದ ಉಚ್ಚ ನೀಚ ಅಧಿಕಾರಿಗಳನ್ನು, ಅವರು ಇಲ್ಲಿಯೇ ಇರಲಿ, ಇಂಗ್ಲಂಡದಲ್ಲಿಯೇ ಇರಲಿ ಅವರ ಕಾರ್ಯ ಗಳ ಬಗ್ಗೆಯೂ, ಕರ್ತವ್ಯಚ್ಯುತಿಯ ಬಗ್ಗೆಯೂ ವಿರೋಧಿಸಲಿಕ್ಕೆ ಸಿದ್ಧವಾಗಿದೆ. ಆದರೆ ಅವರ ಕಾರ್ಯಗಳು ಮಾತ್ರ ರಾಜನ ಬೆಂಬಲದಿಂದ ಯುಕ್ತವಾದ ಪಾರ್ಲಿಮೆಂಟಿನ ಕಾಯದೆಯ ವಿರುದ್ಧವಾಗಿರಲಿಕ್ಕೆ ಬೇಕು.'

ಈ ಧ್ಯೇಯವನ್ನಿಟ್ಟುಕೊಂಡು ಹೊರಟಂಥ ರಾಷ್ಟ್ರೀಯ ಮಹಾ ಸಭೆಯು ಮಂದಗಮನದಿಂದ ಮುಂದಕ್ಕೆ ಸಾಗಿತ್ತು. ಇಲ್ಲಿಯ ವರೆಗೆ (೧೯೦೫)ಅದು ಮಾಡಿದ ಕಾರ್ಯವಾದರೂ ಏನು? ಅರ್ಜಿಗಳನ್ನು ಮಾಡು ವದು, ಬೇಡಿಕೊಳ್ಳುವದು, ನೌಕರಿಗಳನ್ನು ಕೊಡಿರೆಂದು ವಿನಯದಿಂದ ಶರಣು ಹೋಗುವದು, ಕಾಯದೆ ಮಂಡಲದಲ್ಲಿ ಪ್ರತಿನಿಧಿಗಳನ್ನು ತೆಗೆದುಕೊಳ್ಳಬೇಕೆಂದು ಯತ್ನಿಸುವದು. ಕಾಯದೇಬದ್ಧ ಚಳವಳಿ ಯೆಂದರಾದರೂ ಏನು? ಪಾರ್ಲಿಮೆಂಟಿನವರು ಗೊತ್ತುಪಡಿಸಿದ ಕಾಯದೆ ಗಳಂತೆಯೇ ನಡೆದುಕೊಳ್ಳುವದು, ಅದರ ಎಲ್ಲೆಯನ್ನು ಮೀರದಂತೆ- ವಿನಯದಿಂದಲೂ ನಮ್ರತೆಯಿಂದಲೂ ನಡೆಯುವದು, ಪ್ರಾರ್ಥನೆ ಮಾಡು ವದು, ಗವ್ಹರ್ನರ ಮುಂತಾದ ಅಧಿಕಾರಿಗಳಿಗೆ ಮಾಲೆಗಳನ್ನು ಹಾಕು ವದು, ಅವರನ್ನು ಸಂತುಷ್ಟಪಡಿಸುವದು, ಅಪಮಾನವಾದರೂ ಸಹಿಸಿ ಕೊಳ್ಳುವದು, ಮತ್ತೆ ಅವರಿಗೆ ತಲೆಬಾಗಿ ಅಧಿಕಾರಗಳನ್ನು ಕೊಡಿರೆಂದು ಬೇಡಿಕೊಳ್ಳುವದು. ಇವೇ ಅಲ್ಲವೇ? ಇದರ ಪರಿಣಾಮವೇನಾಯಿತು? ಕೆಲವರಿಗೆ ನೌಕರಿಗಳು ಸಿಕ್ಕಿರಬಹುದು. ಕೆಲವರು ದೊಡ್ಡ ದೊಡ್ಡ ನ್ಯಾಯಾಧೀಶರಾಗಿರಬಹುದು. ಆದರೆ ರಾಷ್ಟ್ರದ ದೃಷ್ಟಿಯಿಂದೇನು ಲಾಭ? ಪಾಪ! ದಾದಾಭಾಯಿ ನವರೋಜಿಯವರು ೫೦ ವರ್ಷಗಳ ವರೆಗೆ ಸಿವ್ಹಿಲ್ ಸರ್ವ್ಹೀಸ ಪರೀಕ್ಷೆಯ ಬಗ್ಗೆ ಪ್ರಯತ್ನ ಪಟ್ಟರೂ ಅದರ ಪರಿಣಾಮವೇನಾಯಿತು? ಹೀಗೆ ಭಿಕ್ಷಾಂದೇಹಿ ಎನ್ನುವ ಮುಂದಾಳು ಗಳಿಂದ ರಾಷ್ಟ್ರದ ಹೆಜ್ಜೆಯು ಹೇಗೆ ಮುಂದೆ ಬೀಳಬೇಕು?

ಲೋಕಮಾನ್ಯರು ಈ ಯುಗವನ್ನೇ ಬದಲು ಮಾಡಿದರು. ವಂಗ ಭಂಗವು ಜನರನ್ನು ಬಡಿದೆಬ್ಬಿಸಿತು. ರಾಷ್ಟ್ರಕ್ಕಾಗಿ ಅಂತಃಕರಣ

ಪೂರ್ವಕ ಆಯುಷ್ಯವನ್ನರ್ಪಿಸುವ ತರುಣರು ಮುಂದೆ ಬಂದರು. ಇವರು ಧ್ಯೇಯವಾದಿಗಳಾಗಿದ್ದರು. ಇವರ ಧ್ಯೇಯವು ಬ್ರಿಟಿಶರ ಸಾಮ್ರಾಜ್ಯವು ಹೇಗೆ ಸ್ಥಿರವಾಗಬೇಕೆಂಬುದಲ್ಲ. ನಮ್ಮ ಭಾರತಮಾತೆಯು ಹೇಗೆ ಸ್ವತಂತ್ರಳಾಗುವಳೆಂಬುದು. ರಾಷ್ಟ್ರೀಯ ಸಭೆಯ ಪ್ರವರ್ತಕರು ಸರಕಾರದ ಸ್ಫೂರ್ತಿಯಿಂದಲೂ ಸಹಾನುಭೂತಿಯಿಂದಲೂ ಪ್ರೇರಿತರಾಗಿದ್ದರು. ಆದರೆ ರಾಷ್ಟ್ರೀಯ ಈ ಮುಖಂಡರು ತಮ್ಮ ಉಜ್ವಲವಾದ ಧ್ಯೇಯದಿಂದ ಉತ್ತೇಜಿತರಾಗಿದ್ದರು. ಮೊದಲಿನವರು ಸರಕಾರೀ ನೌಕರಿಗಳಿಗೆ ಹಾತೊರೆಯುತ್ತಿದ್ದರು. ಈ ರಾಷ್ಟ್ರೀಯರು ಸರಕಾರದ ನೌಕರಿಯನ್ನು ತಿರಸ್ಕರಿಸುತ್ತಿದ್ದರು. ಮೊದಲಿನವರ ಅಧಿದೇವತೆಯೆಂದರೆ ಬ್ರಿಟೀಶರ ಪಾರ್ಲಿಮೆಂಟು. ಎರಡನೆಯವರ ಮುಖ್ಯ ದೈವತವು ಸ್ವಾತಂತ್ರ್ಯ ಪ್ರಿಯವಾದ ಜನತೆಯು. ಮೊದಲಿನವರ ಕಣ್ಣು ಇಂಗ್ಲಂಡದ ಕಡೆಗೆ, ಎರಡನೆಯವರ ಕಾರ್ಯಕ್ಷೇತ್ರ ಭಾರತದಲ್ಲಿ. ಅವರ ಸಾಧನವು ಭಿಕ್ಷಾಂದೇಹಿ, ಇವರ ಸಾಧನವು ಸ್ವಾವಲಂಬನ. ಮೊದಲಿನವರು ಜನಸಾಮಾನ್ಯರಲ್ಲಿ ಬೆರೆಯುತ್ತಿದ್ದಿಲ್ಲ. ಅವರೆಂದರೆ ಇವರಿಗೆ ಮೂಕಪ್ರಾಣಿಗಳು. ಅವೇ ಮೂಕಪ್ರಾಣಿಗಳೇ ಎರಡನೇ ಪಂಗಡದ ಶಸ್ತ್ರಾಸ್ತ್ರಗಳು. ಮೊದಲಿನವರು ಐಷಆರಾಮಿನಲ್ಲಿ ವೇಳೆ ಕಳೆದು ಮನಸ್ಸಿಗೆ ಸಮಾಧಾನವಿದ್ದಾಗ ರಾಷ್ಟ್ರೀಯ ಕೆಲಸವನ್ನು ಮಾಡುವವರು. ಆದರೆ ಎರಡನೇಯವರು ಸರ್ವಸಾಧಾರಣವಾದ ಅನುಕೂಲತೆಗಳನ್ನು ಸಹ ತೊರೆದು ತಮ್ಮ ದೇಶದ ಸ್ವಾತಂತ್ರ್ಯದ ಸಲುವಾಗಿ ತುರಂಗವಾಸವನ್ನು ಅನುಭೋಗಿಸುತ್ತ ತುರಂಗಗಳಲ್ಲಿಯೇ ದೇಶಸೇವೆಯ ಚಿಂತೆಯನ್ನು ಮಾಡುವವರು. ಮೊದಲಿನವರಲ್ಲಿ ಸ್ವದೇಶಾಭಿಮಾನವಿದ್ದರೂ ಸ್ವದೇಶಪ್ರೀತಿಯ ದೇಶೆಯಿಂದ ತಮ್ಮ ಪ್ರಾಣವನ್ನು ಹಿಂಡಿ ತೆಗೆಯುವ ಸಿದ್ಧತೆಯಿರಲಿಲ್ಲ. ಎರಡನೆಯವರಲ್ಲಿ ಸ್ವಾತಂತ್ರ್ಯದ ಧ್ಯೇಯವೂ ಉಕ್ಕುವ ಸ್ವದೇಶಾಭಿಮಾನವೂ ಇದ್ದದರಿಂದ ಪ್ರಸಂಗಬಿದ್ದರೆ ಪ್ರಾಣಗಳನ್ನು ಸಹ ನೀಗುವದಕ್ಕೆ ಅವರು ಸಿದ್ಧರಿರುತ್ತಿದ್ದರು. ಇಂಥ ಬಡವರ ಭಾಗ್ಯದೇವತೆಗಳೂ ಸ್ವಾತಂತ್ರ್ಯದೇವಿಯ ಪರಮಭಕ್ತರೂ ಸರಕಾರದ ನೌಕರಿಯೆಂದರೆ

ನರಕಸಮನಾಗಿ ಭಾವಿಸುವವರೂ ದೇಶಕಾರ್ಯದಲ್ಲಿ ತಮ್ಮ ಪ್ರಾಣಗಳನ್ನಾದರೂ ಕೊಡುವವರೂ ಆದ ತರುಣ ಮುಂದಾಳುಗಳಲ್ಲಿ ಲೋಕಮಾನ್ಯ ಟಿಳಕರೇ ಮೊದಲಿಗರೂ ಅಗ್ರಗಣ್ಯರೂ ಎಂದು ಹೇಳಬಹುದು.

ಲಾರ್ಡ ಕರ್ಝನನ ಆಳಿಕೆಯಷ್ಟು ಸುಂದರವಾದ ಔಷಧವು ಗುಲಾಮರಾಷ್ಟ್ರಕ್ಕೆ ಸಿಗುವದು ಅಪರೂಪ. ಮಂದಪಕ್ಷದ ಅಗ್ರಣಿಗಳಾದ ಗೋಖಲೆಯವರು ಕೂಡ ಲಾರ್ಡ ಕರ್ಝನನ ಆಳಿಕೆಯನ್ನು ಔರಂಗಜೇಬನ ಆಳಿಕೆಗೆ ಹೋಲಿಸಿರುವರು. 'ಇಂಥ ಆಳಿಕೆಗೆ ಉಪಮೆಯನ್ನು ಹುಡುಕಬೇಕಾದರೆ ನಾನು ನಮ್ಮ ಇತಿಹಾಸದೊಳಗಿನ ಔರಂಗಜೇಬನ ಆಳಿಕೆಗೇ ತಿರುಗಬೇಕಾಗುವದು.' ಬ್ರಿಟಿಶಸಾಮ್ರಾಜ್ಯವು ಸ್ಥಿರವಾಗಲೆಂದು ಹಗಲಿರುಳು ಪ್ರಯತ್ನ ಮಾಡುವಂಥವರು ಹೀಗೆಂದ ಮೇಲೆ ಹಿಂದುಸ್ಥಾನವು ಸ್ವಾತಂತ್ರ್ಯವನ್ನು ಪಡೆಯಬೇಕೆನ್ನುವವರಿಗೆ ಏನು ಅನಿಸಿರಬಹುದೆಂಬದನ್ನು ವಾಚಕರೇ ಊಹಿಸಬೇಕು. ಮುಂದೆ ಅದರ ಪರಿಣಾಮನ್ನು ಕುರಿತು ಗೋಖಲೆಯರು,

'I think even the most droted admirer of Lord Curzon cannot claim that he has strengthened the foundations of British Rule in India.'

'ಲಾರ್ಡ ಕರ್ಝನನಲ್ಲಿ ಭಕ್ತಿಯುಕ್ತ ಅಂತಃಕರಣವುಳ್ಳವನೂ ಸಹ ಅವನು ಬ್ರಿಟಿಶ ಸಾಮ್ರಾಜ್ಯದ ತಳಗಲ್ಲನ್ನು ಸ್ಥಿರಪಡಿಸಿದನೆಂದು ಅನ್ನಲಾರನೆಂದು ನನಗೆ ಅನಿಸುತ್ತದೆ.'

ಲಾರ್ಡ ಕರ್ಝನನು ಬ್ರಿಟಿಶಸಾಮ್ರಾಜ್ಯದ ತಳಗಲ್ಲನ್ನು ಸ್ಥಿರಪಡಿಸಲಿಲ್ಲ. ಇಷ್ಟೇ ಅಲ್ಲ; ಅವನು ಬ್ರಿಟಿಶಸಾಮ್ರಾಜ್ಯಕ್ಕೆ ಬೆಂಕಿಯನ್ನೇ ಹಚ್ಚಿದನೆಂದೇ ಹೇಳಬಹುದು. ಲಾರ್ಡ ಕರ್ಝನನ ಆಳಿಕೆಯಿಂದ **ಹಿಂದೀ ರಾಷ್ಟ್ರದ ಉದಯವಾಯಿತು.** ಇಂಗ್ಲೀಷ ರಾಜ್ಯದ ಮುಂದೆ ನಮ್ಮ ಆಟವೇನೂ ಸಾಗುವದಿಲ್ಲವೆಂಬ ಭ್ರಮವು ಮಾಯವಾಗಿ ಒಮ್ಮೆ ಎಚ್ಚತ್ತ ರಾಷ್ಟ್ರವು ಸ್ವರಾಜ್ಯವನ್ನು ದೊರಕಿಸದೇಬಿಡದೆಂದು ಎಲ್ಲರಿಗೂ ಕಂಡು ಬಂದಿತು! ಈ ಕಾಲಕ್ಕೆ ಹಿಂದುಸ್ಥಾನದಲ್ಲಿ ಮೂರು ಬಣಗಳಾದವು. ಮೊದಲನೆಯದು ಮವಾಳಪಕ್ಷ ಅಥವಾ ಮಂದಪಕ್ಷ.

ಎರಡನೆಯದು ಜಹಾಲಪಕ್ಷ ಅಥವಾ ವೀರಪಕ್ಷ. ಮೂರನೆಯದು ಕ್ರಾಂತಿಕಾರಕಪಕ್ಷ. ಬಂಗಾಲದ ಭಂಗವಾದರೂ ಮೊದಲನೆಯ ಪಕ್ಷದವರು. ಮತ್ತೆ ಇಂಗ್ಲಂಡಕ್ಕೆ ಹೋಗಿ ಪ್ರಯತ್ನಮಾಡುವದರಲ್ಲಿಯೇ ಪುರುಷಾರ್ಥವಿದೆಯೆಂದು ತಿಳಿಯುತ್ತಿದ್ದರು. ಜೀವವು ಹೋಗವಲ್ಲದೇಕೆ ಕಾಯದೆಯನ್ನು ಮೀರಿ ಹೋಗುವದಿಲ್ಲವೆಂದು ಇವರ ಪ್ರತಿಜ್ಞೆ. ಎರಡನೇಯ ಪಕ್ಷದವರ ಭಾರವು ಹಿಂದುಸ್ಥಾನದ ಜನತೆಯ ಮೇಲೆ. ತಮ್ಮ ಲೇಖಗಳಿಂದಲೂ ಭಾಷಣಗಳಿಂದಲೂ ಹಿಂದುಸ್ಥಾನದೊಳಗೆ ರಾಷ್ಟ್ರೀಯ ಶಕ್ತಿಯನ್ನು ಹುಟ್ಟಿಸಿ ಹಿಂದುಸ್ಥಾನದ ಜನರ ಕಡೆಯಿಂದ ಬ್ರಿಟಿಶ ಆಳರಸುತನದ ( Beauracracy ) ಬಿಂಕವನ್ನು ಮುರಿಯುವೆವೆಂದು ಇವರ ಮತ; ಇವೆರಡು ಮತಗಳುಳ್ಳ-ವೀರ ಮತ್ತು ಮಂದ-ಪಕ್ಷಗಳು ರಾಷ್ಟ್ರೀಯ ಸಭೆಯ ಅಂಕಿತರು. ಮೂರನೆಯ ಪಕ್ಷದವರು ಮಾತ್ರ ಇವೆರಡು ಪಕ್ಷಗಳು ಗುಲಾಮತನದ ಸೋಗುಗಳಾಗಿರುವವೆಂದು ರಾಷ್ಟ್ರೀಯ ಸಭೆಯನ್ನು ಬಿಟ್ಟು ತಮ್ಮ ಮೂರನೆಯ-ಕ್ರಾಂತಿಪಕ್ಷವನ್ನು ಸ್ಥಾಪಿಸಿದರು. ಲೋಕಮಾನ್ಯ ಟಿಳಕರು ಎರಡನೆಯ ಪಕ್ಷದವರಿದ್ದರು. ಮಂದಪಕ್ಷದವರು ಬ್ರಿಟಿಶಸಾಮ್ರಾಜ್ಯದ ಬೆಳವಣಿಗೆಯೇ ಮುಖ್ಯವಾಗಿಟ್ಟುಕೊಂಡಿದ್ದರು. ಟಿಳಕರು ರಾಷ್ಟ್ರೀಯ ಸ್ವಾತಂತ್ರ್ಯವು ಸಿಗುವದಾದರೆ ಬ್ರಿಟಿಶಸಾಮ್ರಾಜ್ಯದ ವಿಷಯವಾಗಿ ಮನಸು ಹಾಕುವೆವೆಂದು ಅನ್ನುತ್ತಿದ್ದರು. ಇಬ್ಬರ ಧ್ಯೇಯವೂ ಒಂದೇ. ಸಾಮ್ರಾಜ್ಯಾಂತರ್ಗತ ಸ್ವರಾಜ್ಯ. ಆದರೆ ಇದನ್ನು ಸಾಧಿಸುವ ಮಾರ್ಗದಲ್ಲಿ ಇವರಿಬ್ಬರಲ್ಲಿಯೂ ಅಜಗಜದಷ್ಟು ಅಂತರವಿತ್ತು. ಮಂದಪಕ್ಷದವರು ಕೃತಜ್ಞತೆಯಿಂದ ಇಂಗ್ಲೀಷರ ಕಡೆಗೆ ನೋಡುತ್ತಿದ್ದರು. ವೀರಪಕ್ಷದವರಿಗೆ ತಮ್ಮ ಹಿಂದುಸ್ಥಾನವು ಪರಕೀಯರ ಕೈಗೆ ಸಿಕ್ಕದ್ದರಿಂದ ದುಃಖವೆನಿಸುತ್ತಿತ್ತು. ಮಂದರಿಗೆ ಬ್ರಿಟಿಶಪ್ರಜಾಜನರು ನಾವಿದ್ದೇವೆನ್ನುವದರಲ್ಲಿ ಅಭಿಮಾನವೆನಿಸುತ್ತಿತ್ತು. ವೀರರಿಗೆ ನಾವು ಬ್ರಿಟಿಶರ ಆಳಾದವಲ್ಲ? ಎಂದು ಕಣ್ಣೀರು ಬರುತ್ತಿತ್ತು. ಎರಡುಪಕ್ಷಗಳು ನಿಯಮಬದ್ಧಮಾರ್ಗವಾಗಿಯೇ ನಡೆಯುತ್ತಿದ್ದವು. ಆದರೂ ಅವರ ಮಾರ್ಗಭೇದದಿಂದಲೂ ಸ್ವದೇಶಾಭಿಮಾನ-

ದಲ್ಲಿರುವ ಅಂತರದಿಂದಲೂ ಮಂದಪಕ್ಷದವರಿಗೆ ದೊಡ್ಡ ದೊಡ್ಡ ಪಗಾರದ ನೋಕರಿಗಳು ಸಿಗುತ್ತಿದ್ದವು. ವೀರಪಕ್ಷದವರಿಗೆ ತುರಂಗ ವಾಸವು ಸಿಗುತ್ತಿತ್ತು. ಕ್ರಾಂತಿಕಾರರ ಪಕ್ಷದವರು ಸಾಮ್ರಾಜ್ಯವನ್ನೇ ಹಾರಿಸಬೇಕೆಂದು ಬೊಂಬುಗಳನ್ನು ಹೂಡಿದ್ದರು. ಇವರ ಮಾತೇ ಬೇರೆ. ಧ್ಯೇಯವೇ ಬೇರೆ.



# ರಾಜಕೀಯ ಜೀವನದ ಮೂರು ಮೆಟ್ಟಿಲುಗಳು

ಲೋಕಮಾನ್ಯರ ರಾಜಕೀಯ ಜೀವನದೊಳಗೆ ಮೂರು ಭಾಗಗಳನ್ನು ಮಾಡಬಹುದು. ಮೊದಲನೆಯ ಭಾಗವು ೧೮೮೦ ರಿಂದ ೧೮೯೭ರ ವರೆಗೆ; ಎರಡನೆಯದು ೧೮೯೭ ರಿಂದ ೧೯೦೮ ವರೆಗೆ; ಮೂರನೆಯದು ೧೯೧೪ ರಿಂದ ೧೯೨೦ ರ ವರೆಗೆ. ಟಿಳಕರು ಪದವೀಧರರಾದ ಕೂಡಲೇ ದೇಶಸೇವೆ ಮಾಡುವದನ್ನೇ ನಿಶ್ಚಯ ಮಾಡಿದರು. ಸ್ವತಂತ್ರ ರಾಷ್ಟ್ರೀಯ ಶಿಕ್ಷಣವೇ ರಾಷ್ಟ್ರದ ಮೂಲಾಧಾರವೆಂದು ಮೊದಲು ನ್ಯೂ ಇಂಗ್ಲೀಶ ಸ್ಕೂಲ್ ಆಮೇಲೆ ಫರ್ಗ್ಯುಸನ್ ಕಾಲೇಜವನ್ನು ಸ್ಥಾಪಿಸಿ ಅದರಲ್ಲಿ ಹುಡುಗರಿಗೆ ಸ್ಫೂರ್ತಿಯುತ್ಪನ್ನವಾಗುವಂತೆ ಶಿಕ್ಷಣವನ್ನು ಕೊಟ್ಟರು. ಇದೇ ಹತ್ತು ಹದಿನೈದು ವರ್ಷಗಳಲ್ಲಿ ತಮಗೆ ಪ್ರಿಯವಾಗಿರುವ ವಿಷಯಗಳ ಮೇಲೆ ಗ್ರಂಥವನ್ನೋದಿ ಜ್ಞಾನ ಸಂಗ್ರಹವನ್ನು ಮಾಡಿದರು. ಇದಲ್ಲದೆ ಕೇಸರಿ ಮತ್ತು ಮರಾಠಾ ಪತ್ರಗಳ ಮುಖಾಂತರವಾಗಿ ಸಾರ್ವಜನಿಕ ರಾಷ್ಟ್ರೀಯ ಜಾಗೃತಿಯನ್ನು ಮಾಡಿ ಜನರ ಮನಸ್ಸಿನಲ್ಲಿ ಹೊಸ **ಮಾದರಿಯ** ವಿಚಾರಗಳನ್ನು ತುಂಬಿದರು. ಈ ಸ್ವತಂತ್ರ ವಿಚಾರಗಳ ಪ್ರಚಾರದ ಪರಿಣಾಮವು ಕೊಲ್ಹಾಪುರ ಪ್ರಕರಣದಲ್ಲಿ ಅವರಿಗೆ ೪ ತಿಂಗಳು ತುರಂಗವಾಸವನ್ನನುಭೋಗಿಸಬೇಕಾಯಿತು. ಆದರೆ ಇದರಲ್ಲಿ ಸರಕಾರದ ಸಂಬಂಧವೇನೂ ಇರಲಿಲ್ಲ. ಇದರಿಂದಲೇ ಮೊದಲು ಟಿಳಕರು ಮಹಾರಾಷ್ಟ್ರದಲ್ಲಿಯ ಪ್ರಮುಖ ಮುಂದಾಳುಗಳೆಂದು ಪ್ರಸಿದ್ಧರಾದರು. ಫರ್ಗ್ಯುಸನ್ ಕಾಲೇಜಕ್ಕೆ ಶರಣು ಹೊಡೆದು ಕೇಸರಿ ಮತ್ತು ಮರಾಠಾ ಪತ್ರಗಳ ಸಂಪಾದಕತ್ವವನ್ನು ವಹಿಸಿ ಮತ್ತೆ ಸ್ವತಂತ್ರ ವಿಚಾರಗಳನ್ನೂ ಆಗಿನ ಪ್ರಚಲಿತ ರಾಜಕೀಯ ವಿಷಯಗಳ ಮೇಲೂ ರಾಜ್ಯಪದ್ಧತಿಯ ಮೇಲೂ ಕಟುತರವಾದ ಟೀಕೆಗಳನ್ನು ಬರೆದದ್ದರಿಂದಲೂ ಸರಕಾರ ಮತ್ತು ಜನತೆಯ ನಡುವೆ ಪಕ್ಷ ಹಿಡಿಯುವ ಪ್ರಸಂಗ ಬಂದಾಗ ಜನಸಾಮಾನ್ಯರನ್ನೇ ಬೆನ್ನಿಗೆ ಹಾಕಿಕೊಂಡು ಸರಕಾರದ

ಸಂಗಡ ಹೋರಾಡಿದ್ದರಿಂದಲೂ ಇವರಿಗೆ ೧೮೯೭ರಲ್ಲಿ ಮತ್ತೆ ಶಿಕ್ಷೆಯಾಯಿತು.

ಭಾರತದ ರಾಜಕೀಯ ಇತಿಹಾಸದಲ್ಲಿ ಕಟ್ಟಳೆಯ ಪ್ರಕಾರ ಶಿಕ್ಷೆಯಾದುದು ಆಧುನಿಕ ಕಾಲದಲ್ಲಿ ಮೊದಲನೆಯದಾದುದರಿಂದ ಇವರು ಭಾರತೀಯ ಮುಂದಾಳುಗಳಲ್ಲಿ ಗಣ್ಯರಾದರು. ೧೮೮೦ರಿಂದ ೯೭ರ ವರೆಗಿನ ಇವರ ಚರಿತ್ರವೆಂದರೆ, ಮುಂದಿನ ರಾಜಕೀಯ ಹೋರಾಟದ ಸಿದ್ಧತೆಯೆಂದೇ ಹೇಳಬಹುದು.

ಹಿಂದುಗಳ ರಕ್ತದ ಕಣಕಣಗಳಲ್ಲಿ ತುಂಬಿರುವ ಧಾರ್ಮಿಕ ಶ್ರದ್ಧೆಯ ತಳಹದಿಯ ಮೇಲೆಯೇ ನವಭಾರತದ ಸಂಘಟನೆಯನ್ನೂ ರಾಜಕೀಯ ಜಾಗೃತಿಯನ್ನೂ ಮಾಡಿದರೇ ಅದು ಬಾಳಬಲ್ಲದೆಂದು ಬಗೆದು, ಗಣಪತಿ ಉತ್ಸವವನ್ನೂ ಶಿವಾಜಿ ಉತ್ಸವವನ್ನೂ ಪ್ರಾರಂಭಿಸಿದರು. ಈ ಉತ್ಸವಗಳು ಜನಸಾಮಾನ್ಯರ ಅಂತಃಕರಣವನ್ನು ತಮ್ಮ ಕಡೆಗೆ ಎಳೆದುಕೊಂಡವು. ಅವರ ಅಂತಃಕರಣವನ್ನು ಕಲಕುಮಲಕು ಮಾಡಿದವು. ಅಲ್ಪಾವಧಿಯಲ್ಲಿಯೇ ಭಾರತದಲ್ಲೆಲ್ಲ ವ್ಯಾಪಿಸಿದವು. ಜನಪ್ರಿಯವಾದವು. ಇವುಗಳಿಂದ ಭಾರತದಲ್ಲಿ ಭಯಂಕರವಾದ ಆಂದೋಲನವೆದ್ದಿತು. ರಾಷ್ಟ್ರೀಯ ಜಾಗೃತೆಯೂ ಜನಸಾಮಾನ್ಯರ ವರೆಗೆ ಮುಟ್ಟಿತು. ಗಣಪತಿ ಉತ್ಸವದಿಂದ ಸ್ವಸಂಸ್ಕೃತಿಯ ಅಭಿಮಾನವು ಜಾಗೃತವಾಗಿ ಸಂಘಟನೆಗೆ ಪ್ರಾರಂಭವಾಯಿತು. ಶಿವಾಜಿ ಉತ್ಸವವು ರಾಷ್ಟ್ರದಲ್ಲಿ ಕ್ಷತ್ರಿಯತ್ವವನ್ನುಂಟುಮಾಡಿ ಸ್ವಾಭಿಮಾನ, ಸ್ವದೇಶಾಭಿಮಾನಗಳನ್ನು ಜಾಗೃತಗೊಳಿಸಿದವು. ಲೋಕಮಾನ್ಯರ ಉದ್ದೇಶವು ಇಡೇರಿತೆನ್ನಬಹುದು. ಈ ಉತ್ಸವಗಳ ಬೆಳವಣಿಗೆಯನ್ನು ಕಂಡು ಸರಕಾರದ ಹೊಟ್ಟೆಯಲ್ಲಿ ಬೆಂಕಿಬಿದ್ದಿತು. ವಕ್ರದೃಷ್ಟಿಯೂ ಬಿತ್ತು. ದಬ್ಬಾಳಿಕೆಯನ್ನೂ ಪ್ರಾರಂಭಿಸಿತು. ಆದರೆ, ಈ ಉತ್ಸವಗಳು ಸಾಪರಾಧ ತರುಣರಲ್ಲಿ ನವಚೈತನ್ಯವನ್ನುಂಟುಮಾಡಿದವೆಂದು ಧಾರಾಳವಾಗಿ ಹೇಳಬಹುದು. ಇವುಗಳ ಯಶಸ್ವಿತೆಯನ್ನು ಭಾರತೀಯರ ವಿರೋಧಕರಾದ ಸರ ವ್ಯಾಲಂಟಾಯಿನ ಚಿರೋಲರು **ಭಾರತೀಯ ಅಶಾಂತಿ** ಎಂಬ

ಪುಸ್ತಕದಲ್ಲಿ '**ಹಿಂದು ಸಂಸ್ಕೃತಿಯ ಕಟ್ಟಡದ ಮುಖಂಡರೂ, ಗಣೇಶೋತ್ಸವದ** ಪ್ರಧಾನ **ಪುರೋಹಿತರೂ, ನವರಾಷ್ಟ್ರ ಧರ್ಮದ ಪ್ರವರ್ತಕರೂ'** ಲೋಕಮಾನ್ಯರು ಎಂದು ವರ್ಣಿಸಿದ್ದಾರೆ.

ಇಲ್ಲಿಯ ವರೆಗೆ ರಾಷ್ಟ್ರೀಯ ಚಳವಳಿಯು ಕೇವಲ ಇಂಗ್ಲೀಷ ಕಲಿತವರವರೆಗೆ ಮಾತ್ರ ಮುಟ್ಟಿತ್ತು. ತಮ್ಮ ಸುಖಲೋಲುಪತೆಗೆ ಧಕ್ಕೆ ತಾಗದಂತೆ ಸಮಯ ಸಿಕ್ಕಾಗ ವಿನೋದಕ್ಕೆಂದು ಕಾಂಗ್ರೆಸ್ಸಿನ ಕಾರ್ಯ ಮಾಡುವವರಿಗೆ ಜನಸಾಮಾನ್ಯರ ಸಂಬಂಧವು ಹೇಗೆ ಬರಬೇಕು ? ಆದರೆ ಲೋಕಮಾನ್ಯರ ಅಧಿದೈವತವು ಜನತೆಯು. ಜನಸಾಮಾನ್ಯರಲ್ಲಿಯೇ ಬೆರೆತು ಕಾರ್ಯಮಾಡುವವರು. ಅವರಿಗಾಗಿ ಹೋರಾಡುವವರು. ಅಂದ ಕೂಡಲೇ ಜನಸಾಮಾನ್ಯರು ಲೋಕಮಾನ್ಯರ ಬೆನ್ನು ಹತ್ತುವದು ಸ್ವಾಭಾವಿಕವಿದೆ. ಸ್ವಾಭಾವಿಕವಾಗಿಯೇ ಜನತೆಯ **ಮುಂದಾಳುತನವು** ಇವರ ಕಡೆಗೆ ಬಂದಿತು. ಈ ಕಾಲದ ಟಿಳಕರ ಕಾರ್ಯವನ್ನು ಕುರಿತು **ಅರವಿಂದ ಘೋಷರು** ಕೆಳಗಿನ ಉದ್ಗಾರಗಳನ್ನು ತೆಗೆದರು.

'**ಭೂತಕಾಲದ ವೈಭವದ ತಳಹದಿಯ ಮೇಲೆಯೇ ಭವಿಷ್ಯತ್ತಿನ** ಕಟ್ಟಡವನ್ನು ಕಟ್ಟಿ ಭಾರತೀಯ ಜನಸಾಮಾನ್ಯರ ಸಂಘಟನೆ ಮಾಡಿ, ಭಾರತೀಯ ರಾಜಕಾರಣವು ಧರ್ಮದ ಸ್ಫೂರ್ತಿಯಿಂದಲೂ, ಆಧ್ಯಾತ್ಮಿಕತೇಜದಿಂದಲೂ ತುಂಬಿತುಳುಕುವಂತೆ ಮಾಡಿ ರಾಷ್ಟ್ರೀಯತ್ವವನ್ನು ಹುರಿಗೊಳಿಸಬೇಕೆಂಬುದನ್ನು ಎಷ್ಟೋ ಲೇಖಕರಿಗೂ, ಧರ್ಮಗುರುಗಳಿಗೂ ಹೊಳೆದಿದ್ದರೂ ಅದನ್ನು ಮೊದಲು ಆಚರಣೆಯಲ್ಲಿ ತಂದವರು ಲೋಕಮಾನ್ಯರೇ.'

'He ( Mr. Tilak ) was the triamphant champion of Hindu orthodoxy, the high-priest of Ganesh, the inspired prophet of a new nationalism, which in the name of Shivaji would cast out the mlenchas and restore the glories of the maharatta history'

*Indian Unrcst. Page 47*

೧೮೯೮ರಲ್ಲಿ ಲೋಕಮಾನ್ಯರು ತುರಂಗದಿಂದ ಹೊರಗೆ ಬಂದ

ಕೂಡಲೇ ಇಡೀ ದೇಶದ ದೃಷ್ಟಿಯು ಇವರ ಕಡೆಗೆ ಹತ್ತಿತು. ಅಂದಿನಿಂದ ಅವರು ಕೇವಲ ಮಹಾರಾಷ್ಟ್ರದ ಮುಂದಾಳುಗಳೆಂದು ಎಣಿಸಲ್ಪಡುತ್ತಿರಲಿಲ್ಲ. ಅವರ ಮತಕ್ಕೂ ಶಬ್ದಕ್ಕೂ ಭಾರತದಲ್ಲಿ ಬೆಲೆಯಿತ್ತು. ಮಹಾರಾಷ್ಟ್ರದ ಮತವನ್ನು ಅಂದರೆ ಲೋಕಮಾನ್ಯರ ಮತವನ್ನು ತೆಗೆದುಕೊಳ್ಳದೆ ಯಾವ ರಾಜಕೀಯ ಕಾರ್ಯವೂ ಸಾಗುತ್ತಿದ್ದಿಲ್ಲ. ೧೮೯೯ ರಿಂದ ೧೯೦೫ ರ ವರೆಗೆ ಆಧುನಿಕ ಔರಂಗಜೇಬನ ಆಳಿಕೆಯು ಆಯಿತು. ಆ ಆಳಿಕೆಯ ಕೊನೆಯು ವಂಗಭಂಗದಲ್ಲಿಯಾಗಿ ಸ್ವದೇಶಿ ಚಳವಳಕ್ಕೆ ಪ್ರಾರಂಭವಾಯಿತು. ಬಂಗಾಲದಲ್ಲಿ ಸಾವಿರಾರು ತರುಣರು ಸಂಘಗಳನ್ನು ಸ್ಥಾಪಿಸಿ ಕೆಲಸ ಮಾಡಹತ್ತಿದರು. **ಬಂಗಾಲದಲ್ಲಿ ಉಂಟಾದ ಸ್ವದೇಶಾಭಿಮಾನಕ್ಕೆ ಮಾರ್ಗವನ್ನು ತೋರಿಸಿದವರು ಲೋಕಮಾನ್ಯರೇ.** ಬಂಗಾಲಿ ಜನರು ಭಾವನಾಪ್ರಧಾನರಾದ್ದರಿಂದ ಅವರಿಂದ ರಾಷ್ಟ್ರೀಯತ್ವದ ಪ್ರಸಾರವು ಬೇಗನೇ ಆಯಿತು. ಆದರೆ ಈ ಮಿಂಚಿನ ಶಕ್ತಿಯನ್ನು ರಾಜಕಾರಣದಲ್ಲಿ ಮಾಡಲಿಕ್ಕೆ ಹಚ್ಚುವದು ಅವಶ್ಯವಿತ್ತು. ಆ ಶಕ್ತಿಯ ಉಪಯೋಗಕ್ಕೆ ಮಹಾರಾಷ್ಟ್ರದಂಥ ವ್ಯವಹಾರ ತಜ್ಞರ ಸಹಾಯವೇ ಬೇಕಾಗಿತ್ತು. ಅದು ಲೋಕಮಾನ್ಯರಿಂದ ಅವರಿಗೆ ಸಿಕ್ಕಿತು. ವಂಗಭಂಗದ ಬಗ್ಗೆ ರಾಷ್ಟ್ರೀಯ ಸಭೆಯಲ್ಲಿ ಗೊತ್ತುವಳಿಗಳೂ ಆದವು. ಆದರೆ ಕೆಲಸವೇನೂ ಆಗಲಿಲ್ಲ. ೧೯೦೩ ನೇ ಇಸ್ವಿಯ ದಿಸೆಂಬರ ೩ ನೇ ತಾರೀಖಿನ ದಿವಸ ವಂಗಭಂಗವು ಮಾಡಬೇಕೆಂದು ಸರಕಾರವು ತಮ್ಮ ಮತವನ್ನು ಪ್ರಸಿದ್ಧಮಾಡಿತು. ಆ ದಿನದಿಂದ ವಂಗಭಂಗವಾಗುವವರೆಗಿನ ಅಂದರೆ ೧೯೦೫ನೆಯ ಇಸ್ವಿಯ ೧೬ನೆಯ ಅಕ್ಟೋಬರದ ವರೆಗೆ ಸಾವಿರಾರು ಗೊತ್ತುವಳಿಗಳು ಮಾಡಲ್ಪಟ್ಟವು. ಲಕ್ಷಾವಧಿ ಅರ್ಜಿಗಳು ಇಲ್ಲಿಯ ಸರಕಾರಕ್ಕೂ ಇಂಗ್ಲಂಡದ ಸರಕಾರಕ್ಕೂ ಕಳಿಸಲ್ಪಟ್ಟವು. ಆದರೂ ಅದನ್ನು ಯಾರೂ ಕೇಳದೆ ೧೯೦೫ರ ಅಕ್ಟೋಬರದಲ್ಲಿ ವಂಗಭಂಗವಾಗಿಯೇ ಹೋಯಿತು. ಇದರಿಂದ ಚಿತಗಾಂಗ, ಡಾಕಾ, ಮೈಮನಸಿಂಗದ ಭೂಮಿಯು ಆಸಾಮಕ್ಕೆ ಕೊಡಲ್ಪಟ್ಟಿತು. ಇದನ್ನು ಕಂಡು ಮಂದಪಕ್ಷದ ಮುಂದಾಳುಗಳಿಗೂ ಸಿಟ್ಟು

ಬಂದಿತು. ಆದರೆ ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲದ್ದರಿಂದ ಅವರು ಮುಂದುಗಾಣದೆ ಇಂಗ್ಲಂಡಕ್ಕೆ ಹೋಗಿ ಚಳವಳಿಮಾಡುವ ನಿಶ್ಚಯ ಮಾಡಿದರು. ೧೯೦೩-೪-೫ ಮತ್ತು ೬ರ ರಾಷ್ಟ್ರೀಯ ಸಭೆಗಳಲ್ಲಿ ವಂಗ ಭಂಗವು ಅಯೋಗ್ಯವೆಂದು ಮಂದಪಕ್ಷದವರೇ ಗೊತ್ತುವಳಿಗಳನ್ನು ಮಾಡಿದರು. ಆದರೆ ಮಂತ್ರಗಳನ್ನು ಹಾಕಿದರೆ ಮಾವಿನ ಹಣ್ಣುಗಳು ಹೇಗೆ ಬೀಳಬೇಕು? ಸರಕಾರದವರು ಆ ಠರಾವುಗಳಿಗೆ ಎಳ್ಳಷ್ಟು ಬೆಲೆ ಕೊಡಲಿಲ್ಲ. ಆದ್ದರಿಂದ ಮುಂದೆ ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯದ ಚಳವಳವನ್ನು ಬಂಗಾಲದ ತರುಣ ದೇಶ ಭಕ್ತರು ಮಹಾರಾಷ್ಟ್ರದ ಜ್ಞಾನವೃದ್ಧ ಮುಂದಾಳುಗಳಾದ ಟಿಳಕರನ್ನು ಮುಂದುಮಾಡಿಕೊಂಡು ಪ್ರಾರಂಭಿಸಿದರು. ಈ ಪ್ರಕಾರ ಬಂಗಾಲದ ಸ್ಫೂರ್ತಿಯಿಂದಲೂ ಮಹಾರಾಷ್ಟ್ರದ ವ್ಯವಹಾರ ಚಾತುರ್ಯದಿಂದಲೂ ಹೊಸ ರಾಷ್ಟ್ರೀಯ ಚಳವಳಿಯು ಉದ್ಭವವಾಯಿತು. ವಂಗಭಂಗವು ಪ್ರಾಂತೀಯ ಪ್ರಶ್ನೆಯಾಗದೆ, ಲೋಕಮಾನ್ಯರ ಚಾತುರ್ಯದಿಂದ ಭಾರ ತೀಯ ಪ್ರಶ್ನೆಯಾಯಿತು. ಸ್ವದೇಶಿ ಎಂದರೆ ನಮ್ಮ ದೇಶದಲ್ಲಿ ಮಾಡಿರುವ ವಸ್ತುಗಳನ್ನೇ ಕೊಂಡುಕೊಳ್ಳುವದು. ಪರದೇಶೀ ಸಕ್ಕರೆ, ಬಳೆ ಮತ್ತು ಅರಿವೆ ಇವುಗಳನ್ನು ಬಿಟ್ಟುಬಿಡುವದು. ಬಿಸಿ ಹತ್ತಿದ ಹೊರ್ತು ಬೆಣ್ಣೆ ಕರಗುವದಿಲ್ಲೆಂದು ಇಂಗ್ಲಂಡದ ವ್ಯಾಪಾರವನ್ನೇ ಹಾಳು ಮಾಡಿ ಬಿಟ್ಟರೆ ಇಂಗ್ಲಂಡದೊಳಗಿನ ಜನರು ಹೊಟ್ಟೆಗಿಲ್ಲದೆ ಪಾರ್ಲಿಮೆಂಟಿಗೆ ಬಿಸಿ ಹತ್ತಿ ಅವರು ವಂಗಭಂಗವನ್ನು ರದ್ದುಮಾಡುವರೆಂದು ರಾಷ್ಟ್ರೀಯ ಸಭೆಯ ಮತವಿತ್ತು. ಬಹಿಷ್ಕಾರವೆಂದರೆ ಪರಕೀಯ ವಸ್ತುಗಳನ್ನು ಬಿಡುವದು. ಈ ಪರಕೀಯ ವಸ್ತುಗಳಲ್ಲಿ ಮೇಲೆ ಹೇಳಿದ ವಸ್ತುಗಳಂತೂ ಇದ್ದೇ ಇದ್ದವು. ಇವಲ್ಲದೆ ಪರದೇಶೀ ಶಿಕ್ಷಣ, ಪರದೇಶೀ ಉಡುಪುತೊಡುಪು, ಪರದೇಶೀ ಭಾಷೆ ಇವುಗಳ ಸಮಾವೇಶವೂ ಆಗುತ್ತಿತ್ತು. ಈ ಬಹಿಷ್ಕಾರ ದಿಂದ ಇಂಗ್ಲೀಷ ಜನರ ವಿಷಯಕ್ಕೆ ದ್ವೇಷವು ಬೆಳೆಯುತ್ತದೆಂದು ಮಂದಮತದವರ ವಿರೋಧವಿತ್ತು. ಪರದೇಶೀ ಶಾಲೆಕಾಲೇಜುಗಳನ್ನು ಬಿಡಬೇಕೆಂದಕೂಡಲೇ ರಾಷ್ಟ್ರೀಯ ಶಿಕ್ಷಣದ ವ್ಯವಸ್ಥೆಯು ಮಾಡಲ್ಪ ಡಲೇಬೇಕು. ಆದ್ದರಿಂದ ವಿದ್ಯಾರ್ಥಿಗಳು ಪರದೇಶೀ ಶಾಲೆಗಳನ್ನು ಬಿಟ್ಟು

ರಾಷ್ಟ್ರೀಯ ವಿದ್ಯಾಲಯಗಳಿಗೆ ಬರಹತ್ತಿದರು. ರಾಷ್ಟ್ರೀಯ ಚಳವಳದಲ್ಲಿ ಈ ವಿದ್ಯಾರ್ಥಿಗಳೇ ಭಾಗವನ್ನು ತೆಗೆದುಕೊಳ್ಳುತ್ತಿದ್ದರು. ಜನರು ಸ್ವರಾಜ್ಯದ ವಿಷಯವಾಗಿಯೇ ಮಾತಾಡುತ್ತಿದ್ದರು. **ಒಂದು ಕಡೆಗೆ ಜನತೆ, ಮತ್ತೊಂದು ಕಡೆಗೆ ಅನಿಯಂತ್ರಿತ ಸರಕಾರ,** ಈ ಪ್ರಕಾರವಾಗಿ ಯುದ್ಧವು ನಡೆಯಿತು. ಪುಣೆಯಲ್ಲಿ ಕೇಸರಿ, ಮರಾಠಾ, ಕಾಳ, ರಾಷ್ಟ್ರಮತ ಮುಂತಾದ ವರ್ತಮಾನಪತ್ರಗಳಲ್ಲಿಯೂ ಬಂಗಾಲಿಯ ಸಂಧ್ಯಾ, ಯುಗಾಂತರ ಮತ್ತು ವಂದೇಮಾತರಂ ಮುಂತಾದ ಪತ್ರಗಳಲ್ಲಿಯೂ ಈ ಹೊಸ ಹುರುಪಿನ ರಾಷ್ಟ್ರೀಯತ್ವದ ವಿಚಾರಗಳ ಚರ್ಚೆಯು ಬರುತ್ತಿತ್ತು. ಮಹಾರಾಷ್ಟ್ರಕ್ಕಿಂತಲೂ ಬಂಗಾಲಿಯೊಳಗಿನ ಪತ್ರಗಳು ಸರಸ ಮತ್ತು ಸ್ಫೂರ್ತಿಯುಳ್ಳವಾಗಿದ್ದವೆಂಬುದರಲ್ಲಿ ಸಂದೇಹವಿಲ್ಲ. ಇಂಗ್ಲೀಷ ಜನರಿಂದ ನಡೆಸಲ್ಪಟ್ಟ ವರ್ತಮಾನಪತ್ರಗಳು ಹಿಂದೂ ಜನರಿಗೂ ಅವರ ಚಳವಳಿಗೂ ಬೈಯುತ್ತಿದ್ದವು. 'Baffings, B. As.' ಬಡಬಡಿಸುವ ಬಿ. ಎ. ಜನರು. 'ಹಾದರಕ್ಕೆ ಹುಟ್ಟಿದ ಜನರು, 'ಗುಲಾಮರು, ಸವಾರಿ ಹತ್ತಿದ ಭಿಕಾರಿಗಳು, ಮುಂತಾದ ಅಪಶಬ್ದಗಳ ಉಪಯೋಗವಾಗುತಿತ್ತು. **ಯುಗಾಂತರ** ಮುಂತಾದ ಪತ್ರಗಳು ಅವರ ಅಸಲಿಗೆ ಅಸಲನ್ನು ಮುಟ್ಟಿಸುತ್ತಿದ್ದವಲ್ಲದೆ ಬಡ್ಡಿಯನ್ನು ಕೂಡ ಕೊಡುತ್ತಿದ್ದವು. ಈ ರೀತಿಯಾಗಿ ಆಂಗ್ಲೋ ಇಂಡಿಯನ್ ಪತ್ರಗಳು ಹಾದಿಬಿಟ್ಟು ಭಾರತೀಯರ ಅಪಮಾನ ಮಾಡುತ್ತಿದ್ದರೂ ಅವರ ಪತ್ರಗಳು ಸುರಕ್ಷಿತವಾಗಿದ್ದು, ಹಿಂದೀ ಪತ್ರಗಳು ಏನಾದರೊಂದು ಅಂದ ಕೂಡಲೇ ಮುದ್ರಾರಾಕ್ಷಸನಿಗೆ ಬಲಿ. ಈ ರೀತಿಯಾಗಿ ಅನ್ಯಾಯನಡೆದದ್ದನ್ನು ಕಂಡು, ಕೆಲವು ಪತ್ರಗಳುಬಾಯಿಬಡಕರನ್ನು ನೇಮಿಸಿದ್ದವು. ಇವರ ಕಾರ್ಯವೆಂದರೆ, ಸೇರಿಗೆ ಸವ್ವಾಸೇರು ಉತ್ತರಕೊಟ್ಟು ಶೆರೆಮನೆಗೆ ತೆರಳುವದು. ಹೀಗೆ ಚಳವಳಿಯು ಗಗನಕ್ಕೆ ಮುಟ್ಟಿತು. ಇದೇ ಸಮಯಕ್ಕೆ ರಾಷ್ಟ್ರೀಯ ಮಹಾಸಭೆಯು ಬಂದಿತು. ಮಂದಪಕ್ಷದವರಿಗೆ ಚಳವಳಿಯನ್ನು ಬಲಿಯಗೊಡುವ ಇಚ್ಛೆಯಿದ್ದಿಲ್ಲ. ವಿಶ್ವಪ್ರಯತ್ನ ಮಾಡಿ ಭಾರತಕ್ಕೇ ಪೂಜ್ಯರಾದ ದಾದಾಭಾಯಿಯವರನ್ನು ೧೯೦೬ರ ರಾಷ್ಟ್ರೀಯ

ಸಭೆಗೆ ಅಧ್ಯಕ್ಷರನ್ನು ಮಾಡಿದರು. ಆದರೆ ಮಂದಪಕ್ಷದವರ ಆಶೆಯು ಭಂಗವಾಯಿತು. ನಮ್ಮ ಎಲ್ಲ ಕಷ್ಟಗಳಿಗೆ ಸ್ವರಾಜ್ಯವೊಂದೇ ತರುಣೋಪಾಯವೆಂದೂ ಅದಕ್ಕಾಗಿ ರಾಷ್ಟ್ರವು ಬೇಕಾದಂಥ ಸ್ವಾರ್ಥತ್ಯಾಗವನ್ನು ಮಾಡಲು ಸಿದ್ಧವಾಗಬೇಕೆಂದೂ ಘೋಷಿಸಿದರು. ಲೋಕಮಾನ್ಯರ ಚತುರತೆಯಿಂದ ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣಗಳೇ ಸ್ವರಾಜ್ಯಕ್ಕೆ ಸಾಧನಗಳೆಂದು ಗೊತ್ತುವಳಿಗಳಾದವು. ಇದರಿಂದ ವೀರಪಕ್ಷಕ್ಕೆ ಕಳೆಯೇರಿತು. ಚಳವಳಿಗೆ ರಾಷ್ಟ್ರದಬೆಂಬಲ ದೊರೆತುದರಿಂದ ಚರಮಸೀಮೆಯನ್ನು ಮುಟ್ಟಿತು. ರಾಜ್ಯಕ್ರಾಂತಿಯ ಲಕ್ಷಣಗಳು ಕಾಣಹತ್ತಿದವು. ಮಂದಪಕ್ಷೀಯರು ಮಂದಗಾಮಿಗಳಾಗಲು ಹವಣಿಸಹತ್ತಿದರು. ಮಾಡಿದ ಕಾರ್ಯವೆಲ್ಲವೂ ವ್ಯರ್ಥವಾಗುವದೆಂದು ಲೋಕಮಾನ್ಯರು ಮಂದಪಕ್ಷೀಯರನ್ನು ಹಾದಿಗೆ ತರಲು ಪ್ರಯತ್ನಿಸಿದರು. ಈ ತಿಕ್ಕಾಟದಲ್ಲಿ ಸುರತ ಕಾಂಗ್ರೆಸ್ಸು ಮುರಿದುಹೋಯಿತು. ಟಿಳಕರ ಮನಸ್ಸಿನಲ್ಲಿ ಸಭೆಯನ್ನು ಮುರಿಯಬೇಂದಿರಲಿಲ್ಲ. ವಿಶ್ವಪ್ರಯತ್ನಪಟ್ಟರು. ಆದರೆ ಮುಂದಗಾಮಿಗಳಆಗ್ರಹದ ಮೂಲಕ ಆ ಪ್ರಸಂಗವು ಬಂದಿತು. ಇದೇ ಸಮಯವೆಂದು ವೀರಪಕ್ಷದ ಮುಂದಾಳುಗಳನ್ನು ಸರಕಾರವು ಹಿಡಿದು ಶಿಕ್ಷಿಸತೊಡಗಿತು.

ಲೋಕಮಾನ್ಯರ ವೀರಪಕ್ಷದಲ್ಲಿ ಬಾಬೂ ಅರವಿಂದಘೋಷ, ಬಿಪಿನ ಚಂದ್ರ ಪಾಲ, ಲಾಲಾಲಜಪತರಾಯ ಮೊದಲಾದ ಮುಂದಾಳುಗಳಿದ್ದರು.

ದಬ್ಬಾಳಿಕೆಯೆಂದರೆ ಸರಕಾರದ ಶಕ್ತಿಪ್ರದರ್ಶನ. ಈ ಶಕ್ತಿಯು ಬಲವಾದರೆ ರಾಷ್ಟ್ರವು ಗುಲಾಮವಾಗುವದು. ಈ ಶಕ್ತಿಯು ಕುಗ್ಗಿದರೆ ಸರಕಾರಕ್ಕೆ ಮೂಗು ತಿಕ್ಕಬೇಕಾಗುವದು. ವಂಗಭಂಗದ ಚಳವಳಿಯಲ್ಲಿ ಕೇವಲ ಅಸಂತುಷ್ಟರಾದ ಬೆರಳಿನಮೇಲೆ ಎಣಿಸುವಷ್ಟು ಸುಶಿಕ್ಷಿತರು ಎಂದು ಸರಕಾರಕ್ಕೆ ತೋರಿದ್ದರಿಂದ ಅವರು ಮೊದಲು ಮೊದಲು ತಿರಸ್ಕಾರವನ್ನು ಮಾಡಿದರು. ಆ ಮೇಲೆ ಚಳವಳಿಯು ಜೋರಿನಿಂದ ನಡೆಯುವದೆಂಬ ಭೀತಿಯು ಹುಟ್ಟಿದ ಕೂಡಲೆ ಸರಕಾರವು ದಬ್ಬಾಳಿಕೆಯನ್ನು ಕೈಕೊಂಡಿತು. ೧೯೦೭ರಲ್ಲಿ ದಬ್ಬಾಳಿಕೆಗೆ ಪ್ರಾರಂಭವಾಯಿತು.

ರಾಷ್ಟ್ರೀಯ ಪಕ್ಷದವರಲ್ಲಿ ಇನ್ನೂ ಒಡಕು ಹುಟ್ಟಿರಲಿಲ್ಲ. ಎಷ್ಟೋ ವರ್ತಮಾನ ಪತ್ರಗಳ ಕುತ್ತಿಗೆಯು ಹಿಚಕಲ್ಪಟ್ಟಿತು. ಎಷ್ಟೋ ಜನರನ್ನು ಸೆರೆಮನೆಗೆ ಕಳಿಸಲಾಗಿತ್ತು. ಸರಕಾರದವರು ಇನ್ನೂ ತಾಳವನ್ನು ಬಿಟ್ಟಿರಲಿಲ್ಲ. ತೋರಿಕೆಗಂತೂ ಖಟ್ಲೆಗಳನ್ನು ಮಾಡುತ್ತಿದ್ದರು; ಪುರಾವೆ ಯಿಂದ ಅಪರಾಧವನ್ನು ಸಿದ್ಧಮಾಡುತ್ತಿದ್ದರು; ಆ ಮೇಲೆ ಅಪರಾಧಿ ಯನ್ನು ಸೆರೆಮನೆಗೆ ಕಳಿಸಿಯೇ ಬಿಡುತ್ತಿದ್ದರು. ಸರಕಾರದವರು ಕಾಯಿದೆ ಯಂತೆ ಶಿಕ್ಷೆಗಳನ್ನು ಕೊಡುತ್ತಿದ್ದದರಿಂದಲೂ ರಾಷ್ಟ್ರೀಯ ಪಕ್ಷ ದವರು ಕಾಯಿದೆಬದ್ಧವಾಗಿಯೇ ಈ ಚಳವಳಿಯನ್ನು ನಡೆಸಬೇಕೆಂಬ ಮತವುಳ್ಳವರಿದ್ದದರಿಂದಲೂ ಏನೂ ಭಯಂಕರವಾದ ಪ್ರಸಂಗವು ಬರ ಲಿಲ್ಲ. ಆದರೆ ೧೯೦೭ ಮೇ ತಿಂಗಳಲ್ಲಿ ಪಂಜಾಬದ ಅನಭಿಷಿಕ್ತ ರಾಜರಾದ ಲಾಲಾಲಜಪತರಾಯರನ್ನು ಸರಕಾರದವರು ಒಮ್ಮಿಂದೊಮ್ಮೆಲೇ ಹದ್ದು ಪಾರು ಮಾಡಿದರು. ಲಜಪತರಾಯರು ವೀರಪಕ್ಷದವರಿಗೆ ಎಷ್ಟು ಪ್ರಿಯರಿದ್ದರೋ ಅಷ್ಟೇ ಮಂದಪಕ್ಷದವರ ಪ್ರೀತಿಗೆ ಪಾತ್ರರಾಗಿದ್ದರು. ಆದ್ದರಿಂದ ಮಂದ ಮತ್ತು ವೀರಪಕ್ಷದವರೆಲ್ಲರೂ ಸರಕಾರದ ವಿಷಯ ವಾಗಿ ತಿರಸ್ಕಾರವನ್ನು ವ್ಯಕ್ತಪಡಿಸಿದರು. ಕೆಲವು ಬಿಸಿ ನೆತ್ತರದ ತರುಣರು ಕಾಯಿದೆಗೆ ಮಾನವನ್ನು ಕೊಡುವ ವೇಳೆ ಇದಲ್ಲವೆಂದು ತಿಳಿದು ಸೇಡುತೀರಿಸಿಕೊಳ್ಳುವೆವೆಂದು ಬಾಂಬುಗಳ ಸಿದ್ಧತೆಯನ್ನು ಮಾಡಹತ್ತಿದರು. ಇದನ್ನು ಕಂಡು ಸರಕಾರದವರು ಲಜಪತರಾಯ ಮತ್ತು ಅಜಿತಸಿಂಹರನ್ನು ೧೧ನೇ ನವ್ಹಂಬರ ೧೯೦೭ರಲ್ಲಿ ಬಿಟ್ಟುಬಿಟ್ಟರು. ೧೯೦೭ರ ರಾಷ್ಟ್ರೀಯ ಸಭೆಯಲ್ಲಿ ಲಜಪತರಾಯರು ಮಂದಪಕ್ಷದವರಿಗೇ ಸಹಾಯಮಾಡಿದ್ದರಿಂದ, ಅವರನ್ನು ಬಿಟ್ಟು ಉಳಿದ ರಾಷ್ಟ್ರೀಯ ಪಕ್ಷದ ಮುಂದಾಳುಗಳ ಮೇಲೆ ರಾಜದ್ರೋಹದ ಖಟ್ಲೆಗಳನ್ನು ಮಾಡಿ ಅವರನ್ನು ತುರಂಗಕ್ಕೆ ಕಳಿಸಿದರು. ದಬ್ಬಾಳಿಕೆಗೆ ಉತ್ತರವೆಂದು ಕ್ರಾಂತಿಕಾರಕರಿಂದ ಬಂಗಾಲದಲ್ಲಿ ಬಾಂಬುಗಳು ಬೀಳಹತ್ತಿದವು. ಸರಕಾರದವರು ಮತ್ತಿಷ್ಟು ದಬ್ಬಾಳಿಕೆಯನ್ನು ಪ್ರಾರಂಭ ಮಾಡಿದರು. ಅರವಿಂದಘೋಷರನ್ನು ಹಿಡಿದು ಹಾಕಿದರು. ಅವರ ಮೇಲೆ ಪುರಾವೆಯು ಹುಟ್ಟಲಿಲ್ಲವೆಂದು

ಅವರನ್ನು ಬಿಡಬೇಕಾಯಿತು. ಬಿಪಿನಚಂದ್ರಪಾಲರಿಗೆ ೬ ತಿಂಗಳ ಶಿಕ್ಷೆಯಾಯಿತು. ಚಿದಂಬರಂ ಪಿಳ್ಳೈ ಎಂಬ ಮದ್ರಾಸದ ದೇಶಭಕ್ತರಿಗೆ ೬ ವರ್ಷದ ಶಿಕ್ಷೆಯಾಯಿತು. ಸಂಯುಕ್ತಪ್ರಾಂತದ ಒಬ್ಬ ಮುಸಲ್ಮಾನ ಮುಂದಾಳುಗಳಾದ ಅಬ್ದುಲ್ ಹಜರತ್ ಮೋಹಾನಿಯವರಿಗೆ ೧ ವರ್ಷದ ಶಿಕ್ಷೆಯಾಯಿತು. ೧೯೦೮ರ ದಿಶೆಂಬರದಲ್ಲಿ ಬಂಗಾಲದ ಒಂಬತ್ತು ಜನ ಮುಂದಾಳುಗಳನ್ನು ಖಟ್ಲೆ ಇಲ್ಲದೆ ಪುರಾವೆ ಇಲ್ಲದೆ ಹಿಡಿದು ಹಾಕಿದರು. ಬಿಪಿನಪಾಲ, ಅರವಿಂದಘೋಷ ಮುಂತಾದವರು ಬಂಗಾಲದ ಜೀವಿತರಾಗಿದ್ದದರಿಂದ ಅವರನ್ನು ಹಿಡಿದು ಬಂಗಾಲವನ್ನು ಶಾಂತ ಮಾಡುವಷ್ಟರಲ್ಲಿ, ಪುಣೆಯಲ್ಲಿಯೂ ಕ್ರಾಂತಿಕಾರಕ ಚಳವಳವು ತಲೆ ಎತ್ತಿತು. ೧೯೦೮ರ ೩೦ನೇ ಎಪ್ರಿಲದ ದಿವಸ ಖುದೀರಾಮನೆಂಬ ತರುಣನು ಮುಝಫರಪೂರದಲ್ಲಿ ಬಾಂಬಿನಿಂದ ಕೊಂದ ಹಾಗೆಯೇ ಮಹಾರಾಷ್ಟ್ರದಲ್ಲಿಯೂ ಆಗಬಹುದೆಂಬ ಸಂಶಯವು ಸರಕಾರಕ್ಕೆ ಒಂದದ್ದರಿಂದ ಅವರು ಮಹಾರಾಷ್ಟ್ರದ ಮುಂದಾಳುಗಳಿಗೂ ಕೈ ಹಚ್ಚಿದರು. ಕಾಳದ ಸಂಪಾದಕರಾದ ದೇ. ಭ. ಶಿವರಾಮ ಮಹಾದೇವ ಪರಾಂಜಪೆಯವರನ್ನು ಹಿಡಿದರು. ಅವರ ಮೇಲೆ ರಾಜದ್ರೋಹದ ಖಟ್ಲೆಯಾಗಿ ಅವರಿಗೆ ೧೮ ತಿಂಗಳ ಕಠಿಣ ಶಿಕ್ಷೆಯಾಯಿತು. ಅವರಿಗೆ ಸಹಾಯ ಮಾಡಲೋಸುಗ ಲೋಕಮಾನ್ಯರು ಮುಂಬಯಿಗೆ ಹೋಗಿದ್ದರು. ಮುಝಫರಪೂರದ ಬಾಂಬಿನ ಸಂಗತಿಯಿಂದ ಹಿಂದುಸ್ಥಾನದಲ್ಲಿ ಕ್ರಾಂತಿಕಾರಕರ ಚಳವಳಿಯು ಬೆಳೆಯುತ್ತಿದ್ದುದರಿಂದ ಅದನ್ನು ಹೇಗೆ ನಿಲ್ಲಿಸಬೇಕೆಂಬ ಬಗ್ಗೆ ಲೋಕಮಾನ್ಯರು ತಮ್ಮ ಕೇಸರಿಯಲ್ಲಿ ಲೇಖಗಳನ್ನು ಮುದ್ರಿಸಿದ್ದರು. ೨೩ನೇ ತಾರೀಖಿನ ದಿವಸ (ಜೂನ ೧೯೦೮) ಇವರ ಮೇಲೆ ರಾಜದ್ರೋಹದ ಖಟ್ಲೆ ಮಾಡಲಿಕ್ಕೆ ಸರಕಾರವು ಅಪ್ಪಣೆಯನ್ನು ಕೊಟ್ಟಿತು. ೨೪ನೇ ತಾರೀಖಿನ ದಿವಸ ಅವರನ್ನು ಹಿಡಿದರು. ಸ್ವತಃ ಟಿಳಕರೇ ವಕೀಲರಾಗಿ ತಮ್ಮನ್ನು ತಾವೇ ಸಮರ್ಥನ ಮಾಡಿಕೊಂಡರು. ಕಟ್ಟ ಕಡೆಗೆ ಏನೂ ಲಾಭವಾಗಲಿಲ್ಲ. ೨೧ ತಾಸಿನ ವರೆಗೆ ಲೋಕಮಾನ್ಯರು ಭಾಷಣ ಮಾಡಿ ಈ ಖಟ್ಲೆಯಿಂದ ವರ್ತಮಾನಪತ್ರಗಳ ಸ್ವಾತಂತ್ರ್ಯವು ಹೇಗೆ ಹರಣವಾಗುವದೆಂಬುದನ್ನು

ವಿಶದಪಡಿಸಿದರು. ಜ್ಯೂರಿಯ ಜನರಲ್ಲಿ ೭ ಜನರು ಯುರೋಪಿಯನ್ನರು ಇಬ್ಬರು ಪಾರ್ಸಿ ಜನರಿದ್ದರು. ಖಟ್ಲೆಯ ಕೊನೆಯೇನಾಗುವದೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿತ್ತು. ಅದರಂತೆ ನ್ಯಾಯಾಧೀಶರಾದ **ಡಾವರರು** ಆರು ವರ್ಷದ ಶಿಕ್ಷೆಯನ್ನೂ ಒಂದು ಸಾವಿರ ರೂಪಾಯಿಯ (೧೦೦೦) ದಂಡವನ್ನೂ ವಿಧಿಸಿದರು. ಇದರ ಮೇಲೆ ಏನಾದರೂ ಮಾತನಾಡಬೇಕೆಂದಿದ್ದರೆ ಮಾತನಾಡಬೇಕೆಂದು ಡಾವರರು ಅನ್ನಲು ಟಿಳಕರು:– ' **ಜ್ಯೂರಿಯು ಬೇಕಾದ ನಿರ್ಣಯವನ್ನು ಕೊಡಲೊಲ್ಲದೇಕೆ? ನನ್ನ ಅಂತರಾತ್ಮವು ನಾನು ನಿರಪರಾಧಿಯೆಂದು ಸಾರುತ್ತದೆ. ಮಾನವನ ಶಕ್ತಿಗಿಂತಲೂ ದೈವೀ ಶಕ್ತಿಯು ಹೆಚ್ಚು ಸಮರ್ಥವಿದೆ. ಈ ಚರಾಚರಗಳ ದೈವವನ್ನಾಳುವಂಥ ದೇವರು ಬೇರೆ ಇರುತ್ತಾನೆ. ನಾನು ಸ್ವತಂತ್ರನಿರುವದಕ್ಕಿಂತ ತುರಂಗದೊಳಗಿದ್ದರೇನೇ ನಾನು ಹಿಡಿದ ಕಾರ್ಯಕ್ಕೆ ಜಯವಾಗುವದೆಂದು ದೇವರ ಸಂಕಲ್ಪವಿರಬೇಕು. ಯಾರಿಗೆ ಗೊತ್ತು.** ' ಈ ಖಟ್ಲೆಯಿಂದ ಲೋಕಮಾನ್ಯರ ಕೀರ್ತಿಯು ಗಗನದೊಳಗೆ ಹಿಡಿಸದಂತಾಯಿತು.

ಎಲ್ಲ ಹಿಂದೀ ವರ್ತಮಾನಪತ್ರಗಳೂ ಕೆಲವು ಆಂಗ್ಲೋ ಇಂಡಿಯನ್ ವರ್ತಮಾನಪತ್ರಗಳೂ ಈ ಶಿಕ್ಷೆಯ ವಿರುದ್ಧ ಬರೆದವು. ಈ ಖಟ್ಲೆಯಲ್ಲಿ ಲೋಕಮಾನ್ಯರು ತೋರಿಸಿದ ಪಾಂಡಿತ್ಯ, ಧೈರ್ಯ ಮುಂತಾದ ಗುಣಗಳಿಂದ ಜನರ ಮನಸ್ಸು ಅವರಲ್ಲಿ ನಟ್ಟುಹೋಯಿತು. **ರಾಷ್ಟ್ರೀಯ ವೀರ**ನೆಂಬ ಬಿರುದು ಮೊದಲು ಸಿಕ್ಕದ್ದು ಇವರಿಗೇನೇ ಸರಿ. ಇದರ ವಿಷಯವಾಗಿ ಅರವಿಂದಘೋಷರನ್ನುವದೇನೆಂದರೆ:–

'From the inception of the boycott to the Surat catastrophe and his last and longest imprisonment, which was its sequel, the name and work of Mr. Tilak area part of Indian History.'

' ಬಹಿಷ್ಕಾರದ ಚಳವಳದಿಂದ ಸುರತದ ಗಂಡಾಂತರದವರೆಗೂ ಆ ಮೇಲೆ ಅವರಿಗಾದ

**ಚಿರಕಾಲಿಕ ತುರಂಗವಾಸದಿಂದಲೂ ಲೋಕಮಾನ್ಯರ ಹೆಸರೂ ಅವರು ಮಾಡಿದ ಕಾರ್ಯವೂ ಹಿಂದುಸ್ತಾನದ ಇತಿಹಾಸದ ಭಾಗಗಳೇ ಆಗಿವೆ.'**

ದಾದಾಭಾಯಿ ನೌರೋಜಿ, ಗೋಖಲೆ ಮೇಥಾ ಮುಂತಾದವರು ಹಿಡಿದ ಮಾರ್ಗವು ಬಹಳ ಸುಲಭವಾಗಿತ್ತು. ಸುಲಭವೆಂದರೆ ಅದರ ಪರಿಣಾಮವು ಮುಂದಾಳುಗಳ ಮೇಲೆ ಏನೂ ಆಗುತ್ತಿದ್ದಿಲ್ಲ. ಪರಕೀಯ ಸರಕಾರಕ್ಕೆ ಸುಧಾರಣೆಗಳನ್ನು ಕೇಳಲಿಕ್ಕೆ ಬೇಕಾಗುವ ಪಾಂಡಿತ್ಯವಿದ್ದರೆ ಸಾಕು. ಸರಕಾರದವರು ಸುಧಾರಣೆಗಳನ್ನು ಕೊಟ್ಟರೆ ಅವೂ ಸಹ ಇವರ ಮಡಲಿನಲ್ಲಿಯೇ ಬೀಳುತ್ತಿದ್ದವು. ಆದರೆ ಟಿಳಕ, ಅರವಿಂದಘೋಷ, ಬಿಪಿನ ಚಂದ್ರಪಾಲ ಮುಂತಾದ ದೇಶವೀರರು ಹಿಡಿದ ಮಾರ್ಗವು ಬಹಳ ಭಯಂಕರವಾಗಿತ್ತು. ಶಸ್ತ್ರಾಸ್ತ್ರಗಳಿಂದ ಸಜ್ಜಾದ ಪರಕೀಯ ಆಳರಸ ರನ್ನು ಜನತೆಯು ಮುಗುದಾಣಕ್ಕೆ ತಂದು ಬಿಗಿಯುವದೇನೂ ಸಾಮಾನ್ಯ ಕೆಲಸವಲ್ಲ. 'Self respect and not mendicaney' 'ಸ್ವಾವಲಂಬನ ವಲ್ಲದೆ ಯಾಚನೆಯಲ್ಲ' ವೆಂಬ ಮಂತ್ರವನ್ನು ಉಪದೇಶಿಸಿದ ಕೂಡಲೇ ಎತ್ತು ಎರಡು ಕೋಡುಗಳಿಂದ ಹೊಡೆಯುವದು ಸ್ವಾಭಾವಿಕವೇ ಆಗಿದೆ. ರಾಷ್ಟ್ರದ **ಸ್ವಾತಂತ್ರ್ಯದ ಸಸಿಯು ದೇಶಭಕ್ತರ ರಕ್ತ ದಿಂದಲೇ ಬೆಳೆಯಬೇಕೆಂಬುದು ನಿಸರ್ಗ ನಿಯಮವಾಗಿದೆ.**

ವಂಗಭಂಗವಾಯಿತು. ಬಹಿಷ್ಕಾರ ಚಳವಳಿಯಾಯಿತು. ವೀರ ಪಕ್ಷದ ಮುಖ್ಯ ಮುಂದಾಳುಗಳೆಲ್ಲರೂ ತುರಂಗವಾಸಕ್ಕೆ ತೆರಳಿದರು. ೧೯೦೮ರಿಂದ ೧೯೧೪ರ ವರೆಗಿನ ಕಾಂಗ್ರೆಸಿನ ಇತಿಹಾಸವೇನೂ ಆಗಲಿಲ್ಲ.

ಮತ್ತೆ ಮೊದಲಿನಂತೆ ಠರಾವುಗಳನ್ನು ಮಾಡುವದು; ಆ ಠರಾವು ಗಳು ಹರಕುಬುಟ್ಟಿಗೆ ಹೋಗಿ ಬೀಳುವದು. ಇದೇ ಪರಿಪಾಠದಿಂದ ರಾಷ್ಟ್ರೀಯ ಸಭೆಯು ನಡೆಯಿತು. ಆದರೆ ಸರಕಾರದ ದಬ್ಬಾಳಿಕೆಯಿಂದ ಕ್ರಾಂತಿಕಾರಕರ ತಲೆತಿರುಗಿತು. ತಮ್ಮ ಪ್ರಾಣಗಳನ್ನು ಪಣಕ್ಕೆ ಹಚ್ಚಿದರು. ೧೯೦೮ರಲ್ಲಿ ಕೊಲೆಗಳಿಗೆ ಪ್ರಾರಂಭವಾಯಿತು. ಬಂಗಾಲ, ಮಹಾರಾಷ್ಟ್ರ ಮತ್ತು ಪಂಜಾಬಗಳಲ್ಲಿ ಕೆಲವು ಕೊಲೆಗಳಾದವು. ಸರಕಾರವು ಎಷ್ಟೋ ಜನರನ್ನು ಗಲ್ಲಿಗೇರಿಸಿತು; ಸಾವಿರಾರು ತರುಣರು ಹಿಡಿಯಲ್ಪಟ್ಟು

ತುರಂಗಕ್ಕೆ ಅಟ್ಟಲ್ಪಟ್ಟರು. ಆದರೂ ಕ್ರಾಂತಿಕಾರಕರ ಕಾರ್ಯಕ್ಕೆ ತಡೆಯಾಗಲಿಲ್ಲ. ೧೯೦೯ರಲ್ಲಿ ಹಿಂದುಸ್ಥಾನವನ್ನು ಸಮಾಧಾನಪಡಿಸ ಬೇಕೆಂದು **ಮೋರ್ಲೆ ಮಿಂಟೋ** ಸುಧಾರಣೆಗಳನ್ನು ಕೊಟ್ಟರು. ಇದೇ ಸ್ವರಾಜ್ಯ ಸ್ವರಾಜ್ಯವೆಂದು ಮಂದಪಕ್ಷದ ಜನರು ಆನಂದದಿಂದ ಕುಣಿ ದಾಡಹತ್ತಿದರು. ವಂಗಭಂಗದದೆಶೆಯಿಂದ ಹೊರಟ ಕ್ರಾಂತಿಕಾರಕ ಚಳ ವಳವು ಈ ಸುಧಾರಣೆಯ ಕಡೆಗೆ ಹಣಿಕೆ ಸಹ ನೋಡಲಿಲ್ಲ. ಕಟ್ಟಕಡೆಗೆ ೧೯೧೧ರಲ್ಲಿ ಜಾರ್ಜಬಾದಶಹರ ಪಟ್ಟಾಭಿಷೇಕದ ಕಾಲಕ್ಕೆ **ವಂಗ-ಭಂಗವು ರದ್ದಾಗಿ ಬಂಗಾಲವು ಮತ್ತೆ ಒಂದಾಯಿತು**. ಇದ ರಿಂದಂತೂ ಮಂದಪಕ್ಷದ ಜನರ ಕೃತಜ್ಞತೆಗೆ ಮಿತಿಯೇ ಉಳಿಯಲಿಲ್ಲ.

ಲೋಕಮಾನ್ಯರ ರಾಜಕೀಯ ಮತಗಳ ವಿಷಯವಾಗಿ ಬೇರೆ ಬೇರೆ ಜನರು ಬೇರೆ ಬೇರೆ ತರ್ಕಗಳನ್ನು ಮಾಡುವದುಂಟು. ಕೆಲವರು ಇವರ ಶತ್ರುಗಳು–ಇವರು ಮಂದಪಕ್ಷೀಯರೇ, ಆದರೆ ಸರಕಾರದವರು ಶಿಕ್ಷೆಮಾಡಿದ ಕೂಡಲೇ ಇವರು ಲೋಕಪ್ರಿಯರಾದರೆಂದೆನ್ನುವರು. ಕೆಲವರು ಇವರು ಕೀರ್ತಿಯದೆಶೆಯಿಂದ ವೀರಪಕ್ಷವನ್ನು ತೆಗೆದರೆಂದೆನ್ನು ವರು. ಕೆಲವರು ಇವರು ಒಳಗಿಂದೊಳಗೇ ಕ್ರಾಂತಿಕಾರಕರಿಗೆ ಸಹಾಯ ಮಾಡುತ್ತಿದ್ದರೆಂದೂ ಅನ್ನುವರು. ಆದರೆ ಒಳಗಿನ ಗುಟ್ಟು ಬೇರೆಯಾಗಿದೆ. H. W. Nevinson ಎಂಬ ಗೃಹಸ್ಥನಿಗೆ ಅವರು ತಮ್ಮ ಮತದ ಬಗ್ಗೆ ಹೀಗೆ ಹೇಳಿದ್ದಾರೆ.

'It is not by our purpose but by our methods only that our party has earned the name of Extremist'

'ನಮ್ಮ ಧ್ಯೇಯದಿಂದಲ್ಲ, ನಮ್ಮ ಯೋಜನೆಗಳಿಂದಲೇ ನಮ್ಮ ಪಕ್ಷಕ್ಕೆ ವೀರಪಕ್ಷ ವೆಂಬ ಹೆಸರು ಬಂದಿತು.'

ಬ್ರಿಟಿಶಸಾಮ್ರಾಜ್ಯವನ್ನು ಕಿತ್ತು ಹಾಕಲಿಕ್ಕೆ ಶಸ್ತ್ರಾಸ್ತ್ರವಿಲ್ಲದಂಥ ಹಿಂದೀ ಜನರಿಗೆ ಹೇಗೆ ಸಾಧ್ಯ? ಸದ್ಯಕ್ಕೆ ಬ್ರಿಟಿಶಸಾಮ್ರಾಜ್ಯವಿರಬೇಕೇ ಇರ ಬಾರದೇ ಈ ಪ್ರಶ್ನೆಯೇ ಹೊರಡುವದಿಲ್ಲ. ಸಾಮ್ರಾಜ್ಯಾಂತರ್ಗತ ಸ್ವರಾಜ್ಯವಾಗಲೀ ಅಥವಾ ಯಾವದೇತರದ ಸ್ವರಾಜ್ಯವಾಗಲೀ ನಾವು ನಮ್ಮ ಪ್ರಯತ್ನದಿಂದ ಗಳಿಸತಕ್ಕದ್ದು.

ನಮ್ಮ ದೇಶದಲ್ಲಿ ನಮ್ಮದೇ ರಾಜ್ಯವಾಗಬೇಕಾದರೆ ಪರಕೀಯರಿಗೆ ಬೇಡಿಕೊಂಡರೆ ಎಂದೂ ಕೆಲಸವಾಗುವದಿಲ್ಲವೆಂದು ಇವರು ಮನಗಂಡಿದ್ದರು. ಮವಾಳರು ಸ್ವಾಭಿಮಾನವನ್ನು ಬಿಸುಟಿ ಪರಕೀಯರಿಗೆ ಸ್ವರಾಜ್ಯವನ್ನು ಬೇಡುವದನ್ನು ನೋಡಿದರೆ ಟಿಳಕರಿಗೆ ಅದು ಅಸಹ್ಯವೆನಿಸುತ್ತಿತ್ತು.

'Home rule is my birth right and I will have it.'

'ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು ಆಗಿರುತ್ತದೆ; ಅದನ್ನು ನಾನು ಗಳಿಸಿಯೇ ತೀರುವೆನು.'

ಅನ್ನುವದು ಬೇರೆ. ಬ್ರಿಟಿಶ ಸಾಮ್ರಾಜ್ಯದ ರಾಜಭಕ್ತಿಯಿಂದ ತುಂಬಿ ತುಳುಕುವ ಪ್ರಜಾಜನರು ನಾವಿದ್ದೇವೆ. ಆದ್ದರಿಂದ ನಮಗೆ ಸ್ವರಾಜ್ಯದ ಹಕ್ಕುಗಳನ್ನು ಕೊಡಿರೆಂದು ಅಂಗಲಾಚಿ ಬೇಡಿಕೊಳ್ಳುವದು ಬೇರೆ. ಬ್ರಿಟಿಶ ಸಾಮ್ರಾಜ್ಯವು ಸ್ಥಿರವಾಗಿ ಉಳಿಯುವದೋ ಇಲ್ಲವೋ ಅದರ ಗೊಡವೆ ಗುಲಾಮರಿಗೆ–ನಮಗೇಕೆ? ಇದ್ದ ರಾಜ್ಯಕಾರಭಾರದಲ್ಲಿಯೇ ಸ್ವಾಭಿಮಾನಕ್ಕೆ ಧಕ್ಕೆಯಾಗದಂತೆ ರಾಜಕೀಯ ಹಕ್ಕುಗಳನ್ನು ಗಳಿಸುವದೇ–ಬೇಡುವದಲ್ಲ–ನಮ್ಮ ಕರ್ತವ್ಯವೆಂದು ಲೋಕಮಾನ್ಯರು ತಿಳಿಯುತ್ತಿದ್ದರು. ಸ್ವರಾಜ್ಯವೆಂದರೇನೆಂಬುವದನ್ನು ಅವರು :–

'The meaning of Swaraj as Stated is retention of our Emperor and the rule of the English people, and the full possession by the people of the authority to manage the remaining affairs 'This is the definition of Swaraj'

ಮೇಲೆ ಹೇಳಿದ ಮೇರೆಗೆ ಸ್ವರಾಜ್ಯವೆಂದರೆ ಸಾಮ್ರಾಜ್ಯದ ಚಕ್ರವರ್ತಿಗಳೂ ಇಂಗ್ಲೀಷರ ಆಳಿಕೆಯೂ ಹಾಗೆಯೇ ಇರಲಿ. ಅಷ್ಟು ಬಿಟ್ಟು ಉಳಿದದ್ದೆಲ್ಲ ಅಧಿಕಾರವು ನಮಗಿರಲಿ. ಅಂದರೆ ತೀರಿತು. ಇದೇ ಸ್ವರಾಜ್ಯದ ವ್ಯಾಖ್ಯೆಯು.' ಬಂಗಾಲದ ಕೆಲವು ವೀರ ಪಕ್ಷೀಯರು ಟಿಳಕರಿಗೆ ಮಂದ ಪಕ್ಷೀಯರೆನ್ನುತ್ತಿದ್ದರು. **ಬಿಪಿನಚಂದ್ರ ಪಾಲರು** ತಮ್ಮ 'ಸ್ವರಾಜ್ಯವೆಂದರೇನು' ಎಂಬ ವ್ಯಾಖ್ಯಾನದಲ್ಲಿ ಇದರ ಚರ್ಚೆಯನ್ನು ಮಾಡಿದ್ದಾರೆ.' ಸಾಮ್ರಾಜ್ಯಾಂತರ್ಗತ ಸ್ವರಾಜ್ಯವೆಂದರೇನು? ಕಲೆಕ್ಟರನು

ನಮ್ಮವನಿರಬೇಕು! ಗವ್ಹರ್ನರನು ನಮ್ಮವನಿರಬೇಕು! ವ್ಹಾಯಿಸ ರಾಯನು ನಮ್ಮವನಿರಬೇಕು! ಎಲ್ಲವೂ ನಮ್ಮ ಕೈಯಲ್ಲಿರಬೇಕು. ಸೈನ್ಯವೂ ನಮ್ಮ ಕೈಯಲ್ಲಿರಬೇಕು. ಇಷ್ಟೆಲ್ಲ ಕೊಟ್ಟ ಮೇಲೆ ಹಿಂದೀ ಜನರು ಸಾಮ್ರಾಜ್ಯದೊಳಗೇಕೆ ಉಳಿಯುವರು. ಆದ್ದರಿಂದ 'ಸ್ವರಾಜ್ಯ ವೆಂದರೆ ಸ್ವಾತಂತ್ರ್ಯವೇ ಸೈ'ಯೆಂದು ಟಿಳಕರು ಇದು ಸದ್ಯಕ್ಕೆ ಅವ್ಯ ವಹಾರ್ಯವೆಂದೆನ್ನುತ್ತಿದ್ದರು.

ವಂಗಭಂಗವು ರದ್ದಾಗಿ ಬಂಗಾಲವು ಒಂದಾಯಿತು. ಆದರೆ, ವಂಗ ಭಂಗದ ಕೈದಿಗಳು ಮಾತ್ರ ಬಿಡುಗಡೆಯಾಗಲಿಲ್ಲ. ಲೋಕಮಾನ್ಯರು ೧೯೧೪ರ ವರೆಗೆ ಜೇಲಿನಲ್ಲಿಯೇ ಕೊಳೆಯಬೇಕಾಯಿತು. ಲೋಕಮಾನ್ಯರು ಹೊರಗೆ ಬಂದಾಗ ರಾಷ್ಟ್ರದ ಪರಿಸ್ಥಿತಿಯೇ ಬದಲಾಗಿತ್ತು. ಹಿಂದಿನ ಆರು ವರ್ಷಗಳ ಪರಿಸ್ಥಿತಿಯನ್ನೂ ಸದ್ಯದ ಪರಿಸ್ಥಿತಿಯನ್ನೂ ನೋಡಿ ವಿಚಾರ ಮಾಡಿ ಮತ್ತೆ ಕಾರ್ಯಕ್ಕೆ ಪ್ರಾರಂಭಿಸಿದರು.

ರಾಷ್ಟ್ರೀಯ ವೀರಪಕ್ಷದ ಮತ್ತು ಕ್ರಾಂತಿಕಾರಕ ಪಕ್ಷದ ಚಳವಳಿಗಳು ಸಮಕಾಲೀನವಾದ್ದರಿಂದ ಲೋಕಮಾನ್ಯರು ಬ್ರಿಟಿಶ ಸಾಮ್ರಾಜ್ಯವನ್ನು ಕಿತ್ತೊಗೆಯಲು ಪ್ರಯತ್ನಿಸುತ್ತಿರುವರೆಂದೂ ಪುಣೆ ಬಂಗಾಲಗಳಲ್ಲಾದ ಕೊಲೆಗಳಿಗೆ ಇವರೇ ಪ್ರೋತ್ಸಾಹನವಿತ್ತವರೆಂದೂ ಸರಕಾರಕ್ಕೆ ಅನಿಸುತ್ತಿತ್ತು. ಅವರು ಕೈತೊಳೆದುಕೊಂಡೇ ಲೋಕ ಮಾನ್ಯರ ಬೆನ್ನುಹತ್ತಿದರು. ಇದನ್ನು ಕಂಡು ಲೋಕಮಾನ್ಯರು ಮರಾಠಾಪತ್ರಿಕೆಯ ಮುಖಾಂತರ ತಮ್ಮ ಮತಗಳೇನಿರುವವೆಂಬುದನ್ನು ಜಗತ್ತಿಗೇ ಸಾರಿದರು. ತಾವು ಕ್ರಾಂತಿಕಾರಕರಿರುವೆವೆಂದು ತಿಳಿಯುವವ ರೆಲ್ಲರೂ ಮೂರ್ಖರಿರುವರೆಂದು ಹೇಳಿ ತಮ್ಮ ರಾಜಕೀಯ ಮತಗಳನ್ನು ಈ ರೀತಿಯಾಗಿ ಪ್ರಕಟಿಸಿದ್ದಾರೆ.

**'ಅಯರ್ಲಂಡ ಹೋಂರೂಲಿನ ಚಳವಳಿಯವರು ರಾಜ್ಯ ಪದ್ಧತಿಯನ್ನು ಬದಲು ಮಾಡಲು ಯತ್ನಿಸುತ್ತಿದ್ದಂತೆಯೇ ನಾವೂ ಪ್ರಯತ್ನಿಸುತ್ತಿದ್ದೇವೆ. ಸರಕಾರವನ್ನೇ ಬುಡಮೇಲು**

**ಮಾಡುವದು ನಮ್ಮ ಉದ್ದೇಶವಿಲ್ಲವೆಂದು ನಾನು ಒಮ್ಮೆ ಹೇಳಿಬಿಡುತ್ತೇನೆ'**

ಈ ಪ್ರಕಟನೆಯಿಂದ ಲೋಕಮಾನ್ಯರು ಕ್ರಾಂತಿಕಾರಕರಲ್ಲವೆಂಬುದು ಸ್ಪಷ್ಟವಾಗುತ್ತದೆ. ಇದೇ ಪ್ರಕಟನೆಯಲ್ಲಿಯೇ ಬ್ರಿಟಿಶಸಾಮ್ರಾಜ್ಯವು ಗಂಡಾಂತರದಲ್ಲಿರುವದರಿಂದ ಭಾರತೀಯರೆಲ್ಲರೂ ಅವರಿಗೆ ಸಹಾಯ ಮಾಡಬೇಕೆಂದೂ ಹೇಳಿದ್ದಾರೆ.

ಈ ತಮ್ಮ ಧೋರಣೆಯನ್ನು ಅನುಸರಿಸಿಯೇ **ಆನಿಬಿಝಂಟರ** ಹೋಮರೂಲ ಚಳವಳಿಯನ್ನು ಎತ್ತಿಹಿಡಿದರು. ಮಹಾರಾಷ್ಟ್ರದಲ್ಲಿ **ಸ್ವರಾಜ್ಯ ಸಂಘವನ್ನು** ಸ್ಥಾಪಿಸಿ, ಪುನಃ ಭಾರತೀಯ ರಾಜಕಾರಣಕ್ಕೆ ಚಾಲನಕೊಟ್ಟರು. ರಾಜಕೀಯ ಆಂದೋಲನವು ಜೀವಕಳೆ ತುಂಬಿತು. ಲೋಕಮಾನ್ಯರು ಸ್ವತಃ ಸಂಚಾರಕ್ಕೆ ಹೊರಟು ಪ್ರಚಾರದ ಕಾರ್ಯವನ್ನು ಕೈಕೊಂಡರು. ಹಾಹಾಯೆನ್ನುವದರಲ್ಲಿಯೇ ಸ್ವರಾಜ್ಯದ ಚಳವಳಿಯು ಭಾರತದ ವಾಯುಮಂಡಲವನ್ನೆಲ್ಲ ವ್ಯಾಪಿಸಿತು. ಲೋಕಮಾನ್ಯರಲ್ಲಿದ್ದ ಅದ್ವಿತೀಯ ಶಕ್ತಿಯೇ ಇದು. ಚಳವಳಿಯ ಶಕ್ತಿಯನ್ನು ಸಹಿಸಲಾರದೆ ಸರಕಾರವು ಬೆಳಗಾವಿಯಲ್ಲಾದ ಟಿಳಕರ ವ್ಯಾಖ್ಯಾನಕ್ಕಾಗಿ ರಾಜದ್ರೋಹದ ಖಟ್ಲೆಯನ್ನು ಹಾಕಿತು. ಜಿಲ್ಲಾ ಮ್ಯಾಜಿಸ್ಟ್ರೇಟರು ಟಿಳಕರು ದೋಷಿಗಳೆಂದು ನಿರ್ಣಯವನ್ನು ಕೊಟ್ಟರು. ಸದ್ವರ್ತನದ ಸಲುವಾಗಿ ೪೦೦೦೦ ರೂ. ಗಳ ಜಾಮೀನೂ ಕೇಳಲಾಯಿತು. ಆದರೆ ಹಾಯ ಕೋರ್ಟಿನ ಅಪೀಲಿನಲ್ಲಿ ಲೋಕಮಾನ್ಯರು ಅಪರಾಧಿಗಳಲ್ಲವೆಂತಲೂ ಅವರು ಕೊಟ್ಟ ವ್ಯಾಖ್ಯಾನಗಳಲ್ಲಿ ರಾಜದ್ರೋಹವಿಲ್ಲೆಂತಲೂ ಸಿದ್ಧವಾಗಿ ಜಾಮೀನು ರದ್ದಾಯಿತು. ಆದರೂ ಸರಕಾರದವರು **ಡಿಫೆನ್ಸ ಆಫ್ ಇಂಡಿಯಾ** ಕಾಯದೆಯಂತೆ ಲೋಕಮಾನ್ಯರು ದಿಲ್ಲಿ ಮತ್ತು ಪಂಜಾಬಕ್ಕೆ ಹೋಗಕೂಡದೆಂದು ಆಜ್ಞೆ ಇತ್ತರು. 'Educate, Agitate and organise' ಶಿಕ್ಷಣ, ಚಳವಳಿ ಮತ್ತು ಸಂಘಟನೆ ಇವೇ ಲೋಕಮಾನ್ಯರ ಬೀಜಮಂತ್ರಗಳು. ಲೋಕಮಾನ್ಯರ ಜೀವನವು ಈ ಮೂರು ತತ್ವಗಳನ್ನೇ ವಿವರಿಸುತ್ತದೆ. ಫರ್ಗ್ಯೂಸನ್ ಕಾಲೇಜ, ನ್ಯೂ ಇಂಗ್ಲೀಷಸ್ಕೂಲ,

ಕೇಸರೀ ಮತ್ತು ಮರಾಠಾ ಇವುಗಳ ಮುಖಾಂತರ ಜನತೆಗೆ ಶಿಕ್ಷಣವನ್ನು ಕೊಟ್ಟರು. ವಿವಿಧ ಉತ್ಸವಗಳ, ವ್ಯಾಖ್ಯಾನಗಳ, ಲೇಖಗಳ ಮುಖಾಂತರ ವಾಗಿ ಜನಜಾಗೃತಿಯನ್ನು ಮಾಡಿದರು. ೧೯೧೪ರಿಂದ ಮರಣದ ವರೆಗೆ ರಾಷ್ಟ್ರದ ಸಂಘಟನೆಯನ್ನು ಕೈಕೊಂಡರು. ಈ ಕಾರಣದಿಂದಲೇ ೧೯೧೬ರಲ್ಲಿ ಹಿಂದೂಮುಸಲ್ಮಾನರ ಐಕ್ಯಕ್ಕೆ ಕೈಹಾಕಿ ಅದನ್ನು ಯಶಸ್ವಿ ಮಾಡಿದರು. ಒಂದು ವೇಳೆ ಭಾರತವು ಯುದ್ಧದಲ್ಲಿ ಸಹಾಯ ಮಾಡಿದ ಬಗ್ಗೆ ಏನಾದರೂ ಕೊಡಬೇಕೆಂದು ಬ್ರಿಟಿಶರ ಮನಸಲ್ಲಿ ಬಂದರೆ ತಮ್ಮ ಬೇಡಿಕೆಯು ಸಿದ್ಧವಾಗಿರಬೇಕೆಂದೂ ಆ ಬೇಡಿಕೆಯು ಅಖಿಲ ಭಾರತೀಯರದಾಗಿರಬೇಕೆಂದೂ ದೂರಾಲೋಚಿಸಿ ಸ್ವರಾಜ್ಯದ ಬೇಡಿಕೆ ಯನ್ನು ಆದೇ ಕಾಂಗ್ರೆಸ್ಸಿನಲ್ಲಿ ಇಟ್ಟರು. ಇದರಿಂದ ಹಿಂದೂ ಮುಸಲ್ಮಾ ನರ ಐಕ್ಯದ ವಿಷಯವಾಗಿ ಅವರೆಷ್ಟು ಆತುರರಿದ್ದರೆಂಬುದು ಸ್ಪಷ್ಟ ವಾಗುವದು.

ಈ ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರ ಬೇಡಿಕೆಗಳನ್ನೆಲ್ಲ ಮಾನ್ಯ ಮಾಡಿದ್ದಕ್ಕೆ ಅನೇಕರು ಅನೇಕ ಬಗೆಯಾಗಿ ಮಾತನಾಡಹತ್ತಿದರು. ಇದಕ್ಕೆ ಲೋಕಮಾನ್ಯರು ತಮ್ಮ ಸಿಂಹನಾದದಿಂದ ಉತ್ತರವಿತ್ತು ದೇನಂದರೆ:—'ಸದ್ಗೃಹಸ್ಥರೇ! ನಾವು ಹಿಂದೂ ಜನರು ಮುಸಲ್ಮಾನರಿಗೆ ಬಹಳ ಹಕ್ಕುಗಳನ್ನು ಕೊಟ್ಟಿರುವೆವೆಂದು ಅನ್ನುತ್ತಿದ್ದಾರೆ. ನಾನು ಹಿಂದುವಿನ ಮತವನ್ನೇ ನಿಮ್ಮ ಮುಂದೆ ಇಡುತ್ತೇನೆ. ನಾವು ಕೊಟ್ಟ ಹಕ್ಕುಗಳು ತೀರ ಕಡಿಮೆ ಇರುವವೆಂದು ನಾನು ತಿಳಿಯುತ್ತೇನೆ. ಸ್ವರಾ ಜ್ಯದ ಪೂರ್ಣ ಹಕ್ಕುಗಳನ್ನೂ ಮುಸಲ್ಮಾನರಿಗಷ್ಟೇ ಕೊಟ್ಟರೂ ನನಗೆ ದುಃಖವಾಗುವದಿಲ್ಲ.' ಇದಲ್ಲದೆ ಸ್ವರಾಜ್ಯದ ಗೊತ್ತುವಳಿಯ ಮೇಲೆ ಮಾತನಾಡುವಾಗ ಈ ಗೊತ್ತುವಳಿಯು ರಾಷ್ಟ್ರೀಯ ಸಭೆಯು ಈ ೩೦ ವರ್ಷಗಳ ವರೆಗೆ ಮಾಡಿದ ಎಲ್ಲ ಗೊತ್ತುವಳಿಗಳ ಗಂಟೆಂದೆನ್ನ ಬಹುದು. ಈ ಹಿಂದೂಮುಸಲ್ಮಾನರ ಐಕ್ಯವು ಮುಂದಿನ ಕಾರ್ಯವನ್ನು ನಿಶ್ಚಿತವಾಗಿ ಹೊಣೆಗಾರಿಕೆಯಿಂದ ಮಾಡಲಿಕ್ಕೆ ಅನುವು ಮಾಡಿಕೊಡು ವದು' ಎಂದು ಹೇಳಿ ತಮ್ಮ ಸ್ವರಾಜ್ಯದ ಗೊತ್ತುವಳಿಯನ್ನು ಪಾಸು

ಮಾಡಿಕೊಂಡರು. ಇದರಿಂದ ಭಾರತದಲ್ಲಿ ಲೋಕಮಾನ್ಯರ ಮುಂದೆ ಮಾತನಾಡುವ ಧೈರ್ಯವು ಯಾರಿಗೂ ಇಲ್ಲದಂತಾಗಹತ್ತಿತು.

ಈಗ ಲೋಕಮಾನ್ಯರು ಅಖಿಲ ಭಾರತೀಯ ಪ್ರತಿನಿಧಿಗಳಾಗಿದ್ದರು. ಕೈಬೆರಳಿನ ಮೇಲೆ ಎಣಿಸುವಷ್ಟು ಜನ ಮಹಾತ್ಮರು ಈ ರಾಷ್ಟ್ರೀಯ ಚಳವಳಿಯಲ್ಲಿಯೇ ಹುಟ್ಟಿದ್ದಾರೆ. ಅವರಲ್ಲಿಯೇ ಲೋಕಮಾನ್ಯರ ಸಮಾವೇಶವಾಗುವದು. ಲೋಕಮಾನ್ಯರ ಈ ಲೋಕಮಾನ್ಯತೆಯು ಅವರ ಜಿಗಟುಸದ ಮತ್ತು ಪಾಂಡಿತ್ಯದ ಪರಿಣಾಮವೆಂದು ಯಾರಿಗಾದರೂ ಅನಿಸಬಹುದು. ಆದರೆ ಅದು ಸಮಂಜಸವಲ್ಲ. ನಮ್ಮ ಹಿಂದುಸ್ತಾನದಲ್ಲಿ ಪಂಡಿತರಿಗೇನೂ ಬರಗಾಲವಿಲ್ಲ. ಲೋಕಮಾನ್ಯತೆಯು ಸಿಗಬೇಕಾದರೆ ದಬ್ಬಾಳಿಕೆಯ ದಿವ್ಯದಲ್ಲಿ ಹಾಯ್ದು ಬರಬೇಕಾಗುವದು. ಲೋಕಮಾನ್ಯರು ಈ ಪದವಿಯನ್ನು ಪಡೆದು ನಮ್ಮ ರಾಷ್ಟ್ರದ ವಿಶ್ವಾಸಕ್ಕೆ ಪಾತ್ರರಾಗಲು ಹತ್ತು ವರ್ಷಗಳ ವರೆಗೆ ತುರಂಗದೊಳಗೆ ತಪಶ್ಚರ್ಯ ಮಾಡಬೇಕಾಯಿತೆಂಬುದನ್ನು ಯಾರೂ ಮರೆಯಬಾರದು.

ಹಿಂದೀ ಜನರು ಯುದ್ಧದಲ್ಲಿ ಮಾಡಿದ ಸಹಾಯದ ಬಗ್ಗೆ ಪಾರ್ಲಿಮೆಂಟಿನಲ್ಲಿ ವಿಶ್ವಾಸವುತ್ಪನ್ನವಾಗಿ ೧೯೧೭ನೇ ಅಗಸ್ಟ ೨೦ನೇ ತಾರೀಖಿನ ದಿವಸ ಕ್ರಮೇಣ ಸ್ವರಾಜ್ಯದ ಹಕ್ಕುಗಳನ್ನು ಹಿಂದುಸ್ತಾನಕ್ಕೆ ಕೊಡುವೆವೆಂದು ಇಂಗ್ಲೀಶ ಜನಾಂಗದ ಪ್ರತಿನಿಧಿಯಾದ ಪಾರ್ಲಿಮೆಂಟಿನಲ್ಲಿ ಗೊತ್ತುವಳಿಯಾಯಿತು. ಈ ಗೊತ್ತುವಳಿಯಾದ ಕೂಡಲೇ ಹಿಂದುಸ್ತಾನದೊಳಗಿನ ಕೆಲಸವಾಯಿತೆಂದು ತಿಳಿದು ಲೋಕಮಾನ್ಯರು ಇಂಗ್ಲಂಡಕ್ಕೆ ತೆರಳುವ ಪ್ರಯತ್ನವನ್ನು ಮಾಡಿದರು. ಮೊಂಟೇಗ್ಯೂ ಸಾಹೇಬರು (ಭಾರತಮಂತ್ರಿ) ಹಿಂದುಸ್ತಾನಕ್ಕೆ ಬಂದು ಎಷ್ಟೋ ಜನರನ್ನು ಕಂಡು ಸಾಕ್ಷಿಗಳನ್ನು ತೆಗೆದುಕೊಂಡು ೮ನೇ ಜುಲೈ ೧೯೧೮ನೇ ದಿವಸ ತಮ್ಮ ವರದಿಯನ್ನು ಜನಮತವನ್ನು ತಿಳಿದುಕೊಳ್ಳುವದಕ್ಕಾಗಿ ಹೊರಗೆಡವಿದರು. ವರದಿಯೊಳಗೇನಿದ್ದರೂ ಕಟ್ಟಕಡೆಗೆ ಸುಧಾರಣೆಗಳು ಪಾರ್ಲಿಮೆಂಟಿನ ಸಭಾಸದರ ಬಹುಮತದಿಂದಲೇ ಬರಬೇಕಾದ್ದರಿಂದ ಲೋಕಮಾನ್ಯರು ಇಂಗ್ಲಂಡಕ್ಕೆ ಹೋಗಿ ಅಲ್ಲಿ ಹಿಂದುಸ್ತಾನದ ರಾಜಕೀಯ

ಸುಧಾರಣೆಗಳ ಬಗ್ಗೆ ವ್ಯಾಖ್ಯಾನದಿಂದಲೂ ಲೇಖಗಳಿಂದಲೂ ಬ್ರಿಟಿಶ ಜನರಿಗೆ ಜ್ಞಾನವನ್ನು ಮಾಡಿಕೊಟ್ಟು, ಸಿಕ್ಕಷ್ಟೆಲ್ಲ ದೊರಕಿಸಬೇಕೆಂಬ ಉದ್ದೇಶದಿಂದ ಮಾರ್ಚ ೧೯೧೮ರಲ್ಲಿ ಇಂಗ್ಲಂಡಕ್ಕೆ ತೆರಳಿದರು. ಆದರೆ ಪರದೇಶಗಮನಕ್ಕೆ ಪಾರ್ಲಿಮೆಂಟಿನ ಸಮ್ಮತಿ ಇಲ್ಲವೆಂಬದಾಗಿ ವ್ಹಾಯಿಸರಾಯನ ಉತ್ತರ ಬಂದಿತು. ಅದೇ ಕಾಲಕ್ಕೆ ಜರ್ಮನ್ನರು ಬಲು ಜೋರಿನಿಂದ ಮುಂದಕ್ಕೆ ಸಾಗಿದ್ದರಿಂದ ಯುದ್ಧದ ಪರಿಣಾಮ ವೇನಾಗುವದೋ ಎಂದು ಇಂಗ್ಲಂಡಕ್ಕೆ ಅಂಜಿಕೆಯುಂಟಾಗಿ ಈಗಿನ ಕಾಲಕ್ಕೆ ಹಿಂದುಸ್ಥಾನವು ಸಹಾಯ ಮಾಡಬೇಕೆಂದು ಬೇಡಿಕೊಂಡರು. ದಿಲ್ಲಿಯಲ್ಲಿ ಯುದ್ಧ ಸಭೆಯಾಯಿತು. (War conference) ಲೋಕ ಮಾನ್ಯರು ಈ ಸಭೆಯಲ್ಲಿ ಮಾತನಾಡಲು ಎದ್ದ ಕೂಡಲೆ ವಿಲಿಂಗ್ಡನ್ನರು 'ಹೀಗೆ ನಾನು ಮಾತನಾಡಗೊಡುವದಿಲ್ಲ' ಎಂದು ಅಂದರು. ಲೋಕ ಮಾನ್ಯರೂ ಅವರ ಪಕ್ಷದವರೂ ಕೂಡಲೇ ಸಭಾತ್ಯಾಗ ಮಾಡಿದರು. ಬ್ರಿಟಿಶ ಸಾಮ್ರಾಜ್ಯವು ಗಂಡಾಂತರದಲ್ಲಿರುವದೆಂದೂ ಅದಕ್ಕೆ ಸಹಾಯ ಮಾಡಬೇಕೆಂದೇ ಲೋಕಮಾನ್ಯರು ಬಂದಿದ್ದರು. ಆದರೆ ಅಪಮಾನವನ್ನು ಮಾಡಿ, ಸಹಕಾರವನ್ನು ಧಿಕ್ಕರಿಸುವವರಿಗೆ ಹೇಗೆ ಸಹಾಯ ಮಾಡು ವದು ? ಲೋಕಮಾನ್ಯರು ಜನತೆಯ ಪ್ರತಿನಿಧಿಗಳಾದ್ದರಿಂದ ಲೋಕ ಮಾನ್ಯರ ಅಪಮಾನವೆಂದರೆ ಹಿಂದೀಜನತೆಯ ಅಪಮಾನವೆಂದು ತಿಳಿಯು ವಷ್ಟು ಜಾಣತನವು ಲೋಕಮಾನ್ಯರಲ್ಲಿತ್ತು. ಆದ್ದರಿಂದಲೇ ಅವರು ಸಭಾತ್ಯಾಗ ಮಾಡಿದರು. ಇಲ್ಲದಿದ್ದರೆ ಅಂದದ್ದು ಅನಿಸಿಕೊಂಡು, ಗವ್ಹರ್ನರನು ಮಾತನಾಡಲಿಕ್ಕೆ ಹೇಳಿದ್ದೇ ಮಹಾಭಾಗ್ಯವೆಂದು ಎಷ್ಟೋ ವೀರರು ಕುಳಿತಹಾಗೆಯೇ ಇನ್ನೂ ಕುಳಿತುಕೊಳ್ಳುತ್ತಿದ್ದರು. ಲೋಕಮಾನ್ಯರಿಗೂ ಸಾಮ್ರಾಜ್ಯವು ಬೇಡವೆಂದಲ್ಲ. ಆದರೆ ಭಾರತದ ಧನದಿಂದಲೇ ಪುಷ್ಟವಾದ ಆಳರಸರು ಭಾರತೀಯರನ್ನು ಅಪಮಾನ ಗೊಳಿಸುವದನ್ನು ಸ್ವಾಭಿಮಾನಿಯಾದವನು ಸಹಿಸುವದು ಶಕ್ಯವಿದೆಯೆ ? ಆದ್ದರಿಂದಲೇ ಲೋಕಮಾನ್ಯರು ಲಾರ್ಡ ವಿಲಿಂಗ್ಡನ್ನರಿಗೆ ಸೊಪ್ಪು ಹಾಕಲಿಲ್ಲ.

ಒಂದು ಕಣ್ಣಿಗೆ ಬೆಣ್ಣೆಯನ್ನೂ ಇನ್ನೊಂದಕ್ಕೆ ಮಣ್ಣನ್ನೂ ಬಳಿಯುವದು ಪರಕೀಯ ಸರಕಾರದ ವಿಶೇಷತಃ—ಇಂಗ್ಲೀಷ ಆಳರಸರ-ರಾಜನೀತಿ. ಮೊಂಟೇಗ್ಯೂ ಸಾಹೇಬರು ಸುಧಾರಣೆಗಳನ್ನು ಕೊಟ್ಟು ಜನರನ್ನು ಸಂತೋಷಗೊಳಿಸುವರೆಂದು ಅಂದೆ ಜನರು ಹಾದೀನೋಡುತ್ತಿರಲು, ಇತ್ತಕಡೆಗೆ ಆಳರಸರು, ರೌಲೆಟ್ ಕಾಯದೆಯನ್ನು ಮಾಡಿ ಭಾರತವನ್ನು ಬಂಧನದಲ್ಲಿರಿಸಲು ಯತ್ನಿಸುವದು ಕಂಡುಬಂದಿತು. ಇದರಿಂದ ಬ್ರಿಟಿಶ ಜನಾಂಗದಲ್ಲಿ ಹಿಂದೀ ಜನರ ವಿಷಯಕ್ಕಿದ್ದ ಭಾವನೆಯು ಬೈಲಿಗೆ ಬಿತ್ತು. ೧೯೧೯ರ ಮಾರ್ಚದಲ್ಲಿ ಈ ಕಾಯದೆಯು ಸಹ ಪಾಸಾಯಿತು. ಆಗ ಲೋಕಮಾನ್ಯರು ಇಂಗ್ಲಂಡದಲ್ಲಿದ್ದರು. ಸ್ವರಾಜ್ಯಕ್ಕಾಗಿ ಇಂಗ್ಲಂಡದಲ್ಲಿ ಚಳವಳಿಯನ್ನು ಹೂಡಿದ್ದರು. ಇದಲ್ಲದೆ, 'ಇವರೇ ಪುಣೆಯೊಳಗಾದ ಕೊಲೆಗಳಿಗೆ ಕಾರಣರೆಂದೂ, ಇವರು ರಾಜದ್ರೋಹದ ಪೂರ್ಣಾವತಾರವೆಂದೂ, ಸಾರಿದ ಚಿರೋಲರ ಮೇಲೆ ಮಾಡಿದ ಮಾನಹಾನಿಯ ಖಟ್ಲೆಯು ನಡೆದಿತ್ತು. ಅದು ಇವರ ವಿರುದ್ಧವಾಯಿತು. ಇದರಿಂದ ಲೋಕಮಾನ್ಯರಿಗೆ ೩ ಲಕ್ಷ ರೂಪಾಯಿಗಳ ಹಾನಿಯಾಯಿತು. ಈ ಖಟ್ಲೆಯು ಮೊದಲು ಮೊದಲು ವ್ಯಕ್ತಿಸ್ವರೂಪದ್ದೇಯಿತ್ತು; ಆದರೆ ಹಿಂದುಸ್ತಾನ ಸರಕಾರದವರು ಚಿರೋಲರಿಗೆ ಸರಕಾರೀ ಕಾಗದಪತ್ರಗಳನ್ನು ಕೊಟ್ಟು ಸಹಾಯಮಾಡಿದ್ದರಿಂದ ಚಿರೋಲನೆಂದರೆ ಸರಕಾರದ ಪ್ರತಿನಿಧಿ, ಲೋಕಮಾನ್ಯರೆಂದರೆ ಜನತೆಯ ಪ್ರತಿನಿಧಿ, ಎಂಬ ವ್ಯಾಪಕ ಸ್ವರೂಪವುಂಟಾಯಿತು. ಎಷ್ಟೋ ವೃತ್ತಪತ್ರಗಳೂ ಸರಕಾರವು ಅನ್ಯಾಯ ಮಾಡುತ್ತಿದೆಯೆಂದು ಸಾರಿದರೂ ಸರಕಾರವು ಲಕ್ಷ್ಯಗೊಡಲಿಲ್ಲ. ಈ ಖಟ್ಲೆಯಲ್ಲಿ ಜನತೆಯ ಪರಾಭವವಾದರೂ **ಬ್ರಿಟಿಶ ನ್ಯಾಯದೇವತೆಯ** ಕೊಲೆಯಾಯಿತು. ಇದೇನೂ ಸಾಮಾನ್ಯ ಕೆಲಸವಲ್ಲ. ಭಾರತ ಜನತೆಯು ಲೋಕಮಾನ್ಯರ ಈ ಹಾದಿಯು ತನ್ನದೆಂದು ತಿಳಿದು, ಬೆಂಬಲಕೊಟ್ಟಿತು. ಲೋಕಮಾನ್ಯರು ಭಾರತೀಯ ಜೀವನದೊಡನೆ ಹೇಗೆ ಸಮರಸರಾಗಿದ್ದರೆಂಬುದು ಇದರಿಂದ ಒಡೆದುಕಾಣುವದು.

೧೯೧೯ರ ಮಾರ್ಚದಲ್ಲಿ ಭಾರತೀಯ ಸ್ವಾತಂತ್ರ್ಯ ಹರಣವನ್ನು

ಮಾಡುವ ಕಾಯಿದೆಯು, ಜನಮತವನ್ನು ಧಿಕ್ಕರಿಸಿ ಪಾಸುಮಾಡಲ್ಪಟ್ಟಿತು. ಮಹಾತ್ಮರು ಇದರ ವಿರುದ್ಧವಾಗಿ ಸತ್ಯಾಗ್ರಹದ ರಣಕಾಳಿಯನ್ನು ಊದಿದರು. ಆದರೆ ಅನೇಕ ಕಡೆಗೆ ಅಧಿಕಾರಿಗಳ ಸ್ವೈರವೃತ್ತಿಯಿಂದ ಜನರು ರೊಚ್ಚಿಗೆದ್ದರು. ಕೆಲವೆಡೆಯಲ್ಲಿ ಚಿಕ್ಕಪುಟ್ಟ ಚಕಮಕಿಗಳಾದವು. ಆದರೆ ಕ್ರೂರಹೃದಯನಾದ ಜನರಲ್ ಡಾಯರನು, ಅಮೃತಸರದಲ್ಲಿ ನಿರಪರಾಧಿಗಳಾದ ಜನರ ಮೇಲೆ ಗುಂಡಿನ ಮಳೆಗರೆದು, ಸಾವಿರಾರು ಜನರನ್ನು ಯಮಸದನಕ್ಕಟ್ಟಿದನು. ಮಹಾತ್ಮರು ತಮ್ಮ ಸತ್ಯಾಗ್ರಹವನ್ನು ದಂಗೆಗಳ ಮೂಲಕ ನಿಲ್ಲಿಸಿದ್ದರು. ಯುದ್ಧದಲ್ಲಿ ಭಾರತೀಯರು ತಮ್ಮ ನೆತ್ತರವನ್ನು ಬಸಿದು ಬ್ರಿಟಿಶರಿಗೆ ಸಹಾಯಮಾಡಿದ್ದಕ್ಕಾಗಿ, ಬ್ರಿಟಿಶರಿಂದ ದೊರೆತ ಫಲವಿದು. ಈ ಸಮಯದಲ್ಲಿ ಲೋಕಮಾನ್ಯರು ಇಂಗ್ಲಂಡದಲ್ಲಿದ್ದರು. ೧೯೧೯ನೇ ಇಸ್ವಿಯ ದಿಶೆಂಬರದಲ್ಲಿ ಲೊಕಮಾನ್ಯರು ತಿರುಗಿಬಂದು ಅಮೃತಸರ ಕಾಂಗ್ರೆಸ್ಸಿನಲ್ಲಿ ಭಾಗವಹಿಸಿದರು. ಈ ಸಮಯದಲ್ಲಿ ಲೋಕಮಾನ್ಯರು ಕಾಂಗ್ರೆಸ್ಸಿನ ಏಕಮೇವಾದ್ವಿತೀಯ ಮುಖಂಡರಾಗಿದ್ದರು. ಇವರು ಅಂದರೆ ಕಾಂಗ್ರೆಸ್ಸು ಕಾಂಗ್ರೆಸ್ಸಿನ ಉಸಿರೇ ಇವರ ಉಸಿರು, ಎಂಬ ಪರಿಸ್ಥಿತಿಯುಂಟಾಗಿತ್ತು. ಸುಧಾರಣೆಗಳ ವಿಷಯವಾಗಿ ಅನೇಕ ಮತಭೇದಗಳಿದ್ದರೂ ಲೋಕಮಾನ್ಯರು ತಮ್ಮ ಅಪ್ರತಿಮವಾದ ನಾಯಕತ್ವದಿಂದ ಏಕತ್ವವನ್ನುಂಟು ಮಾಡಿ, ತಮ್ಮ ಗೊತ್ತುವಳಿಯನ್ನು ಪಾಸುಮಾಡಿಕೊಂಡರು. ಸುಧಾರಣೆಗಳು ಅಸಮಾಧಾನಕರವಾಗಿವೆ. ಆದರೂ ಅವುಗಳನ್ನು ಸ್ವೀಕರಿಸಿ, ಹೆಚ್ಚಿನದಕ್ಕಾಗಿ ಹೋರಾಡಬೇಕೆಂಬ ಗೊತ್ತುವಳಿಯಾಯಿತು. ಜಾಲಿಯನವಾಲಾಬಾಗದ ಅತ್ಯಾಚಾರವು ನಿಷೇಧಿಸಲ್ಪಟ್ಟು, ಜನರಲ್ ಡಾಯರನಿಗೆ ತಕ್ಕ ಶಿಕ್ಷೆಯಾಗಬೇಕೆಂದು ಗೊತ್ತುವಳಿಯಾಯಿತು. ಒಂದು ಕಾಂಗ್ರೆಸ ವಿಚಾರಣಾ ಕಮಿಟಿಯೂ ನಿಯಮಿಸಲ್ಪಟ್ಟಿತು. ಲೋಕಮಾನ್ಯರು ಕಾಂಗ್ರೆಸ ಪ್ರಜಾಪಕ್ಷವನ್ನು ಸ್ಥಾಪಿಸಿ ಚುನಾವಣೆಯ ಹೋರಾಟದ ಸಿದ್ಧತೆಯನ್ನು ನಡೆಯಿಸಿದ್ದರು.

ಆದರೆ ಪರಮಾತ್ಮನ ಸಂಕಲ್ಪವೇ ಬೇರೆಯಾಗಿತ್ತು. ರೌಲೆಟ್

ಕಾಯದೆಯ ವಿಷಯವಾಗಿ ಸರಕಾರವು ಏನನ್ನೂ ಮಾಡದ್ದನ್ನೂ ಮುಸಲ್ಮಾನರಿಗೆ ಕೊಟ್ಟವಚನವನ್ನು ಮುರಿದದ್ದಕ್ಕಾಗಿಯೂ ಖತಿಗೊಂಡು ಮಹಾತ್ಮರು ಸರಕಾರದವರೊಡನೆ, ಅಸಹಕಾರವನ್ನು ಮಾಡಬೇಕೆಂದು ಚಳವಳಿಯನ್ನು ಹೂಡಿದರು. ಲೋಕಮಾನ್ಯರು ರಾಷ್ಟ್ರೀಯ ಸಭೆಯು ತಮ್ಮ ಕಾರ್ಯಕ್ರಮವನ್ನು ಮಾನ್ಯಮಾಡಿದರೆ, ತಮ್ಮದೇನೂ ಅಡ್ಡಿಯಿಲ್ಲವೆಂದೂ ಮಹಾತ್ಮರು ಕಾಂಗ್ರೆಸ್ಸು ಮಾನ್ಯಮಾಡುವಂತೆ ಮಾಡಬೇಕೆಂದೂ ಹೇಳಿದರು. ಇಬ್ಬರಲ್ಲಿಯೂ ಮತಭೇದವಾಗುವದೋ ಏನೋ ಎಂದು ರಾಷ್ಟ್ರವು ನಿರೀಕ್ಷಿಸಹತ್ತಿತು. ಕಾಂಗ್ರೆಸ್ಸಿನ ವಿಶೇಷ ಅಧಿವೇಶನವು ಸಪ್ಟಂಬರ ತಿಂಗಳಲ್ಲಿ ಎಂದು ಗೊತ್ತಾಯಿತು. ಆದರೆ ಲೋಕಮಾನ್ಯರು ಅಗಸ್ಟತಿಂಗಳಲ್ಲಿ ಅಕಸ್ಮಾತ್ತಾಗಿ ಬೇನೆಬಿದ್ದು ೩ನೇ ತಾರೀಖಿನ ದಿವಸ ಈ ಲೋಕವನ್ನು ಬಿಟ್ಟು ಪರಲೋಕಕ್ಕೆ ತೆರಳಿದರು. ಭಾರತಕ್ಕೆ ಎಂದೂ ತುಂಬಿಬರದ ಹಾನಿಯಾಯಿತು. ಯಾರಿಗೆ ಗೊತ್ತು ಮಹಾತ್ಮರ ಅವತಾರವಾದದ್ದರಿಂದ ಲೋಕಮಾನ್ಯರ ಕಾರ್ಯವಾಯಿತೆಂದು ಪರಮಾತ್ಮನ ಸಂಕಲ್ಪವಿತ್ತೋ ಏನೋ ?



# ಮೇಧಾವಿಗಳಾದ ಲೋಕಮಾನ್ಯರು

ಲೋಕಮಾನ್ಯರ ಕೀರ್ತಿಯು ರಾಜಕೀಯ ಕ್ಷೇತ್ರದಲ್ಲಿಯಷ್ಟೇ ಹಬ್ಬಿತೆನ್ನುವಹಾಗಿಲ್ಲ. ಅವರು ಅಸಾಮಾನ್ಯ ಮೇಧಾವಿಗಳಾಗಿದ್ದರು. ಓಜಸ್ವೀ ಲೇಖಕರಾಗಿದ್ದರು. ಇವರು ತಮ್ಮ ಬುದ್ಧಿಬಲದಿಂದ ಎಲ್ಲ ಕ್ಷೇತ್ರಗಳಲ್ಲಿಯೂ ಕ್ರಾಂತಿಯನ್ನುಂಟುಮಾಡಿದರು. ಇವರ ಎಲ್ಲ ವಿಷಯ ಗಳ ಪ್ರಾವೀಣ್ಯತೆಯು ಎಲ್ಲರ ಕಣ್ಣುಗಳನ್ನು ಕುಕ್ಕಿಸಿತು. ಗಣಿತ, ಸಂಸ್ಕೃತ, ಜ್ಯೋತಿಷ, ಇತಿಹಾಸ, ಅರ್ಥಶಾಸ್ತ್ರ, ತರ್ಕಶಾಸ್ತ್ರ, ಕಾಯಿ ದೆಯ ಅಗಾಧಜ್ಞಾನ ಇವುಗಳು ಎಲ್ಲರನ್ನು ಬೊಟ್ಟುಕಚ್ಚಿಸಿದ್ದವು. ವೇಧಾಭ್ಯಾಸಮಾಡಿ, ಪರಕೀಯ ಪಂಡಿತರು ಮಾಡಿದ ಅಪದ್ಧಸಿದ್ಧಾಂತ ಗಳನ್ನು ಖಂಡಿಸಿ ತಮ್ಮ ಮತವನ್ನು 'ಓರಾಯಿನ' ಮತ್ತು 'ಆರ್ಕ ಟಿಕ್ ಹೋಮ ಇನ ದಿ ವೇದಾಜ' ಎಂಬೆರಡು ಗ್ರಂಥಗಳಲ್ಲಿ ಮಂಡಿಸಿ ದರೂ ಮೊದಲಿನದರಲ್ಲಿ ಇವರ ಅಗಾಧವಾದ ಜ್ಯೋತಿಷದ ಜ್ಞಾನವೂ ಎರಡನೇದರಲ್ಲಿ ಭೂಗರ್ಭಶಾಸ್ತ್ರದ ಬಗ್ಗೆ ಇದ್ದ ಇವರ ಆಳವಾದ ಜ್ಞಾನವೂ ಜನರನ್ನು ಮರುಳಗೊಳಿಸಿದವು. ಇದಲ್ಲದೆ, ಇವರ ವೇದದ ಜ್ಞಾನಸದಲ್ಲಿರುವ ಪ್ರಾವೀಣ್ಯತೆಯೂ ನೋಡುವಂಥದಿದೆ. ಆಗಿನ ಕಾಲ ದಲ್ಲಿ ಪರಕೀಯ ಗ್ರಂಥಗಳೇ ಹೇಳಿದ್ದು ವೇದವಾಕ್ಯವೆಂದು ತಿಳಿಯು ತ್ತಿದ್ದ ನಮ್ಮ ಪಂಡಿತರ ಕಣ್ಣುಗಳಿಗೆ ಅಂಜನವನ್ನು ಹಚ್ಚಿದವರು ಲೋಕಮಾನ್ಯರೇ !

ಲೋಕಮಾನ್ಯರ ಕಾಯಿದೆಯ ಪಾಂಡಿತ್ಯವು ಜಗಪ್ರಸಿದ್ಧವಿದೆ. ಇವರನ್ನು ಕಾಯದೆಬದ್ಧ ಮಾಡುವದಕ್ಕಾಗಿ ಸರಕಾರೀ ಕಾಯದೆಗಳನ್ನೇ ತಿದ್ದುವ ಪ್ರಸಂಗವನ್ನು ತಂದುಕೊಟ್ಟ ಬುದ್ಧಿ ಇವರದು. ಇವರ ರಾಜ ದ್ರೋಹದ ಖಟ್ಲೆಯಲ್ಲಿ ಇವರು ಮಾಡಿದ ಕೋಟಿ ಪ್ರತಿಕೋಟಿಗಳು ಜಗತ್ತನ್ನೇ ಮುಗ್ಧಗೊಳಿಸಿವೆ.

ಗೀತಾರಹಸ್ಯವು ಇವರ ಬುದ್ಧಿಮತ್ತೆಯ ಶಿಖರವೆಂದು ಹೇಳಬಹುದು. ಇದರ ಬರವಣಿಗೆಯ ರೀತಿಯೂ, ಪ್ರತಿಪಾದನ ಶಕ್ತಿಯೂ ಸಾಹಿತ್ಯಲೋಕದಲ್ಲಿಯೇ ಕ್ರಾಂತಿಯನ್ನುಂಟುಮಾಡಿತು. ಒಂದು ಗ್ರಂಥವನ್ನು ಎಷ್ಟುಬಗೆಯಿಂದ ಅಭ್ಯಾಸ ಮಾಡಬಹುದೆಂಬುದನ್ನು ಇದರಲ್ಲಿ ನೋಡಬಹುದು. ಗೀತೆಯ ಮೇಲೆ ಟೀಕೆ ಟಿಪ್ಪಣಿಗಳನ್ನು ಬರೆದವರು ಸಾವಿರಾರು ಜನರು ಸಿಗಬಹುದು. ಆದರೆ ಗೀತೆಯಲ್ಲಿ ಹೇಳಿದ ತತ್ವಗಳನ್ನು ಜೀವನದಲ್ಲಿಳಿಸಿದವರು ಎಷ್ಟು ಜನ? ಆಧುನಿಕ ಕಾಲದಲ್ಲಿ ಒಬ್ಬಿಬ್ಬರೆಂದೇ ಹೇಳಬಹುದು. ಭಾರತೀಯ ರಾಜಕೀಯ ರಂಗದಲ್ಲಿಯಂತೂ ಲೋಕಮಾನ್ಯರು ಮತ್ತು ಮಹಾತ್ಮರು ಇವರ ಹೊರತು ನಮಗೆ ಯಾರೂ ಕಾಣುವದಿಲ್ಲ. ಗೀತೆಯ ರಹಸ್ಯವು ಅಥವಾ ಗುಟ್ಟು ಲೋಕಮಾನ್ಯರಿಗೆ ತಿಳದಿದ್ದಿತೋ ಇಲ್ಲವೋ ನೋಡಬೇಕಾದರೆ, ಬೇರೆ ಎಲ್ಲಿಗೂ ಹೋಗುವ ಕಾರಣವಿಲ್ಲ. ಅವರ ೪೦ ವರ್ಷದ ನಿಷ್ಕಾಮಕರ್ಮದ ಜೀವನವೇ ಸಾಕ್ಷಿ. ನಿಷ್ಕಾಮಕರ್ಮದ ವಿವರಣೆಯನ್ನು ಗೀತಾ ರಹಸ್ಯದಲ್ಲಿಯೇ ಓದಬೇಕು. ಅದರ ಆಚರಣೆಯನ್ನು ಲೋಕಮಾನ್ಯರಲ್ಲಿಯೇ ಕಾಣಬೇಕು.

ಇದರಂತೆಯೇ ವೃತ್ತಪತ್ರ ವ್ಯವಸಾಯದಲ್ಲಿಯೂ ಇವರ ಬುದ್ಧಿಯು ಅಪ್ರತಿಹತವಾಗಿ ಹರಿಯುತ್ತಿತ್ತು. ಇವರು ಕಾಲಕಾಲಕ್ಕೆ ರಾಷ್ಟ್ರಕ್ಕೆ ತೋರಿಸಿದ ಮಾರ್ಗಗಳೂ, ತತ್ವಗಳೂ ಇವರ ಮೇಲ್ಮೆಯನ್ನು ಕೈಯೆತ್ತಿ ಸಾರುತ್ತಿವೆ. ಭಾರತದಲ್ಲಿ ಶ್ರೇಷ್ಠವಾದ ವೃತ್ತಪತ್ರಿಕೆಗಳಲ್ಲಿ ಕೇಸರಿಯು ಒಂದಾಗಿತ್ತು. ಲೋಕಮಾನ್ಯರ ಪ್ರೀತಿಯು ಇದರ ಮೇಲೆ ಬಹಳವಿದ್ದುದರಿಂದ ಅದು ಚಿರಕಾಲ ಬಾಳುವಂತೆ ಅದರ ವ್ಯವಸ್ಥೆಯನ್ನು ಮಾಡಿದ್ದಾರೆ. ಹೀಗೆ, ಮೇಧಾವಿಗಳಾದ ಲೋಕಮಾನ್ಯರು ವಿವಿಧ ಕ್ಷೇತ್ರಗಳಿಗೆ ಚಲನೆಕೊಟ್ಟು, ರಾಷ್ಟ್ರದಲ್ಲಿ ನವಚೈತನ್ಯವನ್ನುಂಟುಮಾಡಿದ್ದನ್ನು ಯಾರು ಮರೆಯುವರು?

---

# ರಾಷ್ಟ್ರಮತ ಪ್ರವರ್ತಕ ಲೋಕಮಾನ್ಯರು

ಲೋಕಮಾನ್ಯರ ವ್ಯಕ್ತಿತ್ವವನ್ನು ಅಷ್ಟಿಷ್ಟೆಂದು ಹೇಳಲಾಸಲ್ಲ. ಅವರು ರಾಜಕೀಯ ಕ್ಷೇತ್ರದಲ್ಲಿ ಲೋಕಮಾನ್ಯರಿದ್ದಂತೆ, ಧಾರ್ಮಿಕ ಕ್ಷೇತ್ರದಲ್ಲಿಯೂ ಆಚಾರ್ಯರ ಅಧಿಕಾರದ ಯೋಗ್ಯತೆಯುಳ್ಳವರು. ಇವರು ಬರೆದ ಗೀತೆಯು ಜಗತ್ತಿನೊಳಗಿನ ಧರ್ಮಗ್ರಂಥಗಳೊಳಗೆ ಅತಿ ಅಮೌಲ್ಯವಾದ ಗ್ರಂಥವೆನ್ನಬಹುದು.

ಭಗವಾನ್ ಶ್ರೀಕೃಷ್ಣನು ಹೇಳಿದ 'ಗೀತೆ'ಯ ಮಂಥನವನ್ನು ಎಷ್ಟೋ ಜನರು ಮಾಡಿದ್ದಾರೆ. ಆದರೆ ಆ ವ್ಯಾಖ್ಯಾನಗಳೆಲ್ಲ ಜಗತ್ತಿನಲ್ಲಿ ಬಾಳುವ ಜನರಿಗಾಗಿ ಮಾಡಿವೆಯೋ ಎಂಬುದನ್ನು ಹೇಳುವದು ಕಷ್ಟವಾಗುತ್ತದೆ. 'ಕಿಂ, ಕರ್ಮ ಕಿಂಕರ್ಮೇತಿ, ಎಂದು ಮುಂಗಾಣದೇ ಅರ್ಜುನನು ಹಲಬುತ್ತಿರುವ ಸಮಯದಲ್ಲಿ ಶ್ರೀಕೃಷ್ಣನು ಗೀತಾಮೃತದಿಂದ ಅರ್ಜುನನನ್ನು ಹುರಿದುಂಬಿಸಿ, ಕಾರ್ಯರಂಗಕ್ಕಿಳಿಸಿದಂತೆ, ಲೋಕಮಾನ್ಯರು ಪಾರತಂತ್ರ್ಯದಲ್ಲಿ ಪರಸಂಸ್ಕೃತಿಯ ಮೋಹದಲ್ಲಿ, ಸ್ವಸಂಸ್ಕೃತಿಯ ಅಜ್ಞಾನದ ರೂಢಿಯ ಮಡಲಿನಲ್ಲಿ ಸಿಕ್ಕು ಭಾರತ ರಾಷ್ಟ್ರವು ಮಂಕಾದಾಗ ಗೀತೆಯ ಮುಖಾಂತರ ರಾಷ್ಟ್ರಕ್ಕೆ ರಾಷ್ಟ್ರಧರ್ಮವನ್ನುಪದೇಶಿಸಿದ ಆಚಾರ್ಯರು. ಉಪದೇಶಿಸಿದರಷ್ಟೇ ಅಲ್ಲ. ನಿರ್ಜೀವಿಯಾದ ರಾಷ್ಟ್ರವನ್ನು ಜೀವಂತಮಾಡಿ ಹೋರಾಟಕ್ಕೆ ಹಚ್ಚಿದರು. ಲೋಕಮಾನ್ಯರು ಗೀತೆಯ ಸಂದೇಶವನ್ನು ಜನತೆಗೆ ಅತ್ಯಂತ ಸುಲಭವಾಗಿಯೂ ಸ್ಪಷ್ಟವಾಗಿಯೂ ತಿಳಿಸಿದ್ದಲ್ಲದೆ, ಗೀತೆಯು ಜೀವಂತ ತತ್ವಜ್ಞಾನವೆಂಬುದನ್ನು ತೋರಿಸಿ ಕೊಟ್ಟರು. ಅಂಧ ಪರಂಪರೆಯ ರೂಢಿಗಳ ಮೇಲೆ ಚನ್ನಾಗಿ ಪೆಟ್ಟುಕೊಟ್ಟರು. ಇಂದು ಜಗತ್ತಿನ ಉದ್ಧಾರಕ್ಕೆ ಯೋಗ್ಯವಾದ ಧರ್ಮವೆಂದರೆ, ಗೀತೆಯಲ್ಲಿ ಪ್ರತಿಪಾದಿಸಿದ ಕರ್ಮಯೋಗವೆಂದು ಸಾರಿದರು. **ಗೀತೆಯು ಹಿಂದು ಧರ್ಮದ ಧರ್ಮನೀತಿ ಮತ್ತು ಅಧ್ಯಾತ್ಮವನ್ನು** ಹೇಳುವ ಗ್ರಂಥವೆಂದು

ಸಿದ್ಧಮಾಡಿದರಲ್ಲದೆ ಪಾಶ್ಚಾತ್ಯ ಧರ್ಮನೀತಿ ಅಧ್ಯಾತ್ಮಗಳು ಗೀತೆಗೆ ಹೇಗೆ ತಲೆಬಾಗಬೇಕಾಗುತ್ತದೆಂಬುದನ್ನು ಹೋಲಿಸಿ ತೋರಿಸಿದರು. ಇದರಿಂದ ಭಾರತೀಯರಲ್ಲಿ ಹೊಸದೊಂದು ದೃಷ್ಟಿಯೇ ಉಂಟಾಯಿತು. ಇವರು ಧರ್ಮಾಭಿಮಾನಿಗಳು. ಅಧ್ಯಾತ್ಮವು ಜೀವನದ ಧುರಿಯಾಗಬೇಕೆಂದು ಬಯಸುವವರು. ಅದನ್ನೇ ತಳಹದಿಯನ್ನಾಗಿಟ್ಟುಕೊಂಡು ತಮ್ಮ ಜೀವನ ವನ್ನು ಕಟ್ಟಬೇಕೆನ್ನುವವರು. ಪ್ರತಿಯೊಂದರಲ್ಲಿ ಸುಧಾರಣೆಯಾಗ ಬೇಕೆನ್ನುವವರಿಗೂ ಇವರಿಗೂ ಇರುವ ಮತ-ಭಿನ್ನತೆಯು ಲೋಕ ಪ್ರಸಿದ್ಧವಿದೆ. ಲೋಕಮಾನ್ಯರು ನವಸಂಸ್ಕೃತಿಯ ಸದ್ಗುಣಗಳನ್ನು ಸ್ವಾಗತಿಸುತ್ತಿದ್ದರು. ಆದರೆ ಸ್ವಾತಂತ್ರ್ಯವೆಂದರೆ ಪರರ ಅನುಕರಣವಲ್ಲ ಅಥವಾ ಹಳೆಯದೆಲ್ಲ ಕೀಳೆಂಬ ಭಾವನೆಯೂ ಅಲ್ಲವೆಂದು ಜನರನ್ನು ಎಚ್ಚರಿಸುತ್ತಿದ್ದರು.

ಹೀಗೆ ಲೋಕಮಾನ್ಯರು ಲೋಕಸಂಗ್ರಹದ ದೃಷ್ಟಿಯಿಂದ ಸುಧಾರಕರನ್ನು ಅನುಕರಣದಿಂದ ಪರಾಙ್ಮುಖರನ್ನಾಗಿ ಮಾಡಿಯೂ ನಿಜ ಸಂಸ್ಕೃತಿ ವಿಹೀನರಾದ ಹಳಬರನ್ನು ಶುದ್ಧಾಚರಣೆಯ ಕಡೆಗೆ ಲಕ್ಷ್ಯ ವನ್ನು ಎಳೆದು ಸಂಗ್ರಹಿಸುತ್ತಿದ್ದರು. **ಹಳೆಯದೆಲ್ಲ ಹುಳಿತಿದೆ ಎಂಬ ಭಾವನೆಯೂ ಇವರಲ್ಲಿರಲಿಲ್ಲ, ಹೊಸದೆಲ್ಲ ಹುಸಿ ಎಂಬ ಭಾವ ನೆಯೂ** ಇದ್ದಿಲ್ಲ. ಹಳೆಯದರಲ್ಲಿಯ ಒಳ್ಳೆಯದರ ಮೇಲೆಯೇ ಹೊಸದ ರಲ್ಲಿಯ ಒಳ್ಳೆಯದನ್ನು ಕಟ್ಟಿ ರಾಷ್ಟ್ರವನ್ನು ಹುರಿಕಟ್ಟಾಗಿ ಮಾಡು ವದೇ ಲೋಕಮಾನ್ಯರ ಧಾರ್ಮಿಕ ಧೋರಣವು. ಹೊಸ ಹಳಬರಶಕ್ತಿ ಯನ್ನು **ಸ್ವರಾಜ್ಯದ** ಕಾರ್ಯಕ್ಕೆ ಹಚ್ಚುವದೇ ತಮ್ಮ ಕರ್ತವ್ಯವೆಂದು ಅವರು ಹೊರಟಿದ್ದರು. ನವರಾಷ್ಟ್ರ ನಿರ್ಮಾಣವೇ ಅವರ ಕಾರ್ಯವು. ಲೋಕಮಾನ್ಯ ಟಿಳಕರು ತೀರಿದ ಕೂಡಲೆ ಮಹಾತ್ಮಾ ಗಾಂಧಿಯವರು ಯಂಗ ಇಂಡಿಯಾದಲ್ಲಿ ಒಂದು ಲೇಖನವನ್ನು ಬರೆದು ಅದರಲ್ಲಿ ಅವರ ಎಲ್ಲ ಗುಣಗಳನ್ನು ಕೊಂಡಾಡಿ, ಒಂದೇ ಒಂದು ಶಬ್ದದಲ್ಲಿ ಅವರು ಮಾಡಿದ ಕಾರ್ಯವನ್ನು ಹೇಳಿದ್ದಾರೆ.

'Maker of modern India' 'ಅರ್ವಾಚೀನ ಭಾರತದ ಜನಕರು, ಎಂದು ಯಥಾರ್ಥ ಶಬ್ದದಲ್ಲಿ ವರ್ಣಿಸಿದ್ದಾರೆ.

೧೮೫೭ರ ಹಿಂದುಸ್ತಾನದ ಸ್ಥಿತಿಯನ್ನೂ ೧೯೪೭ರ ಸ್ಥಿತಿಯನ್ನೂ ಹೋಲಿಸಿದರೆ ಅಜಗಜದಷ್ಟು ಅಂತರವು ಕಾಣುವದು. ೧೮೫೭ರಲ್ಲಿ ಭಾರತವು ಬ್ರಿಟಿಶರ ವಶವಾಗಿತ್ತು. ೧೯೪೭ರಲ್ಲಿ ಭಾರತವು ಹಿಂದೀ ಜನರ ಕೈವಶವಾಗಹತ್ತಿತು. ಇದು ರಾಷ್ಟ್ರೀಯತೆಯ ಪ್ರಭಾವವು. ಈ ಕಾಲಾವಧಿಯಲ್ಲಿ ಅನೇಕ ಮಹನೀಯರು ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆಂಬುದು ನಿಜ. ಆದರೆ, ಹಿಂದುಸ್ಥಾನದ ರಾಜಕೀಯ ಸ್ವಾತಂತ್ರ್ಯಕ್ಕೆ ಬೇಕಾಗುವ ರಾಷ್ಟ್ರೀಯ ಭಾವನೆಯನ್ನು ಜಾಗೃತಮಾಡುವ ಕಾರ್ಯದಲ್ಲಿ ಕೊನೆಯವರೆಗೆ ಪ್ರಮುಖತ್ವದಿಂದ ನಿಂತವರೆಂದರೆ ಲೋಕಮಾನ್ಯರೇ! ೧೯೦೫ರ ಪೂರ್ವದ ಚಳವಳಿಯಲ್ಲಿ ಸ್ವಾಭಿಮಾನ ಸ್ವದೇಶಾಭಿಮಾನಗಳ ಉತ್ಸಾಹವಿದ್ದಿಲ್ಲ. ಲೋಕಮಾನ್ಯರು ಈ ಭಾವನೆಗಳನ್ನು ತುಂಬಿದರು. ಲೋಕಮಾನ್ಯ, ಅರವಿಂದ, ಪಾಲ, ಮತ್ತು ಲಜಪತರಾಯರಂಥ ವೀರರು ಈ ಕ್ಷೇತ್ರದಲ್ಲಿ ಕಾಲಿಟ್ಟೊಡನೆಯೇ ಚಳವಳಿಯು ಜೀವಂತವಾಯಿತು. ಮಾನವನಾಗಲೀ ಚಳವಳಿಯಾಗಲೀ ಭಾವನಾತ್ಮಕವಾಯಿತೆಂದರೇ ಮುಂದಡಿ ಇಡುವದು ಸ್ವಾಭಾವಿಕವು. ಆದರೆ ರಾಷ್ಟ್ರಕ್ಕೆ ಮುಂದಡಿ ಇಡಲಿಕ್ಕೆ ಹೇಳಿ ತಾನು ಹಿಂದಡಿ ಇಡುವವನು ರಾಷ್ಟ್ರದ ಎಂಥ ಬುದ್ಧಿವಂತನಿದ್ದರೂ ರಾಷ್ಟ್ರದ ಮುಂದಾಳುವಾಗಲಾರನು. ರಾಷ್ಟ್ರವೀರನಾಗಬೇಕಾದರೆ ತಾನೇ ಮುಂದಾಗಿ ವೈರಿಗಳಿಂದ ಬರುವ ಬಾಣಗಳನ್ನು ನುಂಗಬೇಕಾಗುತ್ತದೆ. ಈವರೆಗೆ ಹತ್ತಿದವರು ಟಿಳಕರೇ. ಆದ್ದರಿಂದಲೇ ಅವರು ಲೋಕಮಾನ್ಯರಾದರು. ಅವರ ಕಡುಹಗೆಗಳಾದ ಆಳರಸರು 'A thorn in the side of the administration' **ರಾಜ್ಯಕಾರಭಾರದ ಕೆರಳಲ್ಲಿ ನಟ್ಟ ಮುಳ್ಳೆಂದು,** ಲೋಕಮಾನ್ಯರನ್ನು ವರ್ಣಿಸಿರುವರು. ಇವರ ಸಹನಶೀಲತೆಯ ಬಗ್ಗೆ ಅರವಿಂದರು ಹೀಗೆ ಹೇಳಿರುವರು:—

'No Prominent Man in India has suffered more for his country, None has taken his sacrifices and sufferings more quietly and as a matter of course'

'ಭಾರತದ ಮುಂದಾಳುಗಳಲ್ಲಿ ತಮ್ಮ ದೇಶದ ಬಗ್ಗೆ ಇವರಷ್ಟು ದುಃಖಗಳನ್ನು ಸೋಸಿದವರು ಯಾರೂ ಇಲ್ಲ. ಮತ್ತು ಇವರಲ್ಲಿ ಸ್ವಾರ್ಥತ್ಯಾಗವೂ ದುಃಖ ಸಹನಶೀಲತೆಯೂ ಸ್ವಾಭಾವಿಕವಾಗಿರುವವೆಂದು ಯಾರೂ ತಿಳಿದಿರಲಿಲ್ಲ.'

ಈ ಪ್ರಕಾರ ೪೦ ವರ್ಷಗಳವರೆಗೆ, ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ, ತಮ್ಮ ತನುಮನಧನಗಳನ್ನು ಅರ್ಪಿಸಿದ ರಾಷ್ಟ್ರೀಯ ವಿಭೂತಿಗಳು.



# ಮಹಾತ್ಮಾ ಮೋಹನದಾಸ ಕರಮಚಂದ ಗಾಂಧಿ

ಜೀವನ ಚರಿತೆ

ಗಾಂಧಿಯವರ ಧಾರ್ಮಿಕ ಜೀವನದ ಮೂಲ ಬೇರುಗಳು.

ಸತ್ಯಾಗ್ರಹ ತರುಣ ತಪಸ್ವಿ.

ಭಾರತೀಯರ ಸ್ವಾತಂತ್ರ್ಯ ಸಂಗ್ರಾಮದ ಸೇನಾಪತಿಗಳು.

ಗಾಂಧಿಯವರ ಜೀವನರಹಸ್ಯ

ಗಾಂಧಿಯವರ ತತ್ವಜ್ಞಾನ

ದೀನದಯಾಳು ಗಾಂಧಿಯವರು

# ಮಹಾತ್ಮಾ ಮೋಹನದಾಸ ಕರಮಚಂದ ಗಾಂಧಿ

Mahatma Gandhi to-day stands at the very Centre of the world's life with fate of centuries poised with his hands.

*John Hayness Holmes.*

ನೂರಾರು ವರ್ಷಗಳ ಭವಿಷ್ಯತ್ತನ್ನು ತಮ್ಮ ಮುಷ್ಟಿಯಲ್ಲಿ ಹಿಡಿದು ಕೊಂಡು ಮಹಾತ್ಮರು ಜಗತ್ತಿನ ಜೀವನದ ಮಧ್ಯರಂಗದಲ್ಲಿ ನಿಂತಿದ್ದಾರೆ.

ಜಾನ ಹೋಮ್ಸ.

## (ಜೀವನ)

ಆದಿಭೌತಿಕ ಸುಧಾರಣೆಗಳು ಮಾನವ ಜೀವನದಲ್ಲಿಯೇ ಕ್ರಾಂತಿ ಯನ್ನುಂಟುಮಾಡಿವೆ. ಈ ಸುಧಾರಣೆಗಳ ಪ್ರಭಾವದಿಂದ ಜಗತ್ತಿನೊಳ ಗಿನ ಅಂತರವು ಕಡಿಮೆಯಾಗಿ ಅಲ್ಪಾವಧಿಯಲ್ಲಿ ಬೇಕಾದವರು ಬೇಕಾ ದಲ್ಲಿಗೆ ಹೋಗಿಬರಲು ಸಾಧ್ಯವಾಗಿದೆ. ಪಾಶ್ಚಾತ್ಯ ರಾಷ್ಟ್ರಗಳು ಪೌರ್ವಾತ್ಯ ರಾಷ್ಟ್ರಗಳನ್ನು ಸುಲಿಯಲು ಇದರ ಉಪಯೋಗವನ್ನು ಮಾಡಿಕೊಂಡಿದ್ದರೂ ಮಾನವ ಜನಾಂಗದದೃಷ್ಟಿಯಿಂದ ಒಂದು ದೊಡ್ಡ ಲಾಭವೇ ಆಗಿದೆ. ರಾಷ್ಟ್ರರಾಷ್ಟ್ರಗಳ ಬಳಿಕೆಯು ಹೆಚ್ಚಾಗಿ ಪ್ರತಿ ಯೊಂದು ರಾಷ್ಟ್ರದ ಜೀವನವು ಜಗತ್ತಿನ ಹಿತಸಂಬಂಧಗಳೊಡನೆ ಬೆರೆಯ ಹತ್ತಿದೆ. ಇಂದು ಜಗತ್ತಿನ ಯಾವ ಮೂಲೆಯಲ್ಲಿಯೇ ಆಗಲಿ ಯಾವು ದೊಂದು ಸಂಗತಿಯು ಸಂಭವಿಸಿದರೆ, ಅದರ ಪರಿಣಾಮವು ಇಡೀ ಮಾನವ ಜನಾಂಗದ ಮೇಲೆಯೇ ಆಗಹತ್ತಿದೆ. ಈ ಕ್ರಾಂತಿಯೇನೂ ಸಾಮಾನ್ಯವಾದುದಲ್ಲ.

ವ್ಯಕ್ತಿ, ದೇಶ, ರಾಷ್ಟ್ರಗಳ ಕಲ್ಪನೆಯನ್ನು ಮೆಟ್ಟಿ ವಿಶ್ವಬಂಧು ತ್ವವು ತಲೆಯೆತ್ತತೊಡಗಿದೆ. ಇಡೀ ಮಾನವ ಜನಾಂಗದ ಐಕ್ಯತೆಯ ಹಾಗು ಉದ್ಧಾರದ ದಿವ್ಯಕನಸುಗಳನ್ನು ತತ್ವದರ್ಶಿಗಳು ಕಾಣಹತ್ತಿದ್ದಾರೆ.

ಪಾಶ್ಚಾತ್ಯ ಪೌರ್ವಾತ್ಯ ರಾಷ್ಟ್ರಗಳ ಸಂಬಂಧವನ್ನುಂಟು ಮಾಡುವದರಲ್ಲಿ ಪರಮಾತ್ಮನ ವಿಶಿಷ್ಟ ಉದ್ದೇಶವೇನೋ ಇರಬೇಕೆಂದೂ ಆದಿಭೌತಿಕ ಹಾಗು ಆಧ್ಯಾತ್ಮಿಕ **ಈ ಎರಡೂ ಸಂಸ್ಕೃತಿಗಳ ಸಮ್ಮೇಳನದ ಸುಮಧುರವಾದ ನವಸಂಸ್ಕೃತಿಯ ಉದಯವೇ** ಪರಮಾತ್ಮನ ಆ ಸಂಕಲ್ಪವೆಂದೂ ಭಾರತೀಯ ತತ್ವಜ್ಞಾನಿಗಳು ಸಾರತೊಡಗಿದ್ದಾರೆ. ಈ ನವಯುಗದ ನಾಯಕತ್ವವು ಭಾರತದ ಕಡೆಗೆ ಇದೆ ಎಂದು ಬಗೆದು ಭಾರತೀಯರು ಹೊಸ ಹುರುಪಿನಿಂದ ಮುಂದಡಿ ಇಡಹತ್ತಿದ್ದಾರೆ.

ಸ್ವಾಮೀ ವಿವೇಕಾನಂದ, ಹಾಗು ರಾಮತೀರ್ಥರು ಈ ಯುಗ ಧರ್ಮವನ್ನು ಆಧ್ಯಾತ್ಮ ದೃಷ್ಟಿಯಿಂದ ಜಗತ್ತಿಗೆ ಬಿಡಿಸಿ ತೋರಿಸಿದರು. ಇಂದು ಅರವಿಂದರು ಈ ದೃಷ್ಟಿಯಿಂದಲೇ ತಪಗೆಯ್ಯುತ್ತಲಿದ್ದಾರೆ. ಕವಿ ರವೀಂದ್ರರು ಈ ದೃಷ್ಟಿಯಿಂದಲೇ ವಿಶ್ವಭಾರತಿಯ ವಿಶ್ವವಿದ್ಯಾಲಯವನ್ನು ಏರ್ಪಡಿಸಿ, ಜಗತ್ತಿನ ಜನಾಂಗವನ್ನು ಒಂದೆಡೆ ತಂದು, ಪ್ರಯೋಗವನ್ನು ಪ್ರಾರಂಭಿಸಿದ್ದಾರೆ. ಪಾಶ್ಚಾತ್ಯ ರಾಷ್ಟ್ರಗಳು ರಾಕ್ಷಸೀ ಮಹತ್ವಾಕಾಂಕ್ಷೆಯಿಂದ ಪ್ರಳಯದ ಕಡೆಗೆ ಸಾಗುತ್ತಿರುವದನ್ನು ಕಂಡು, ಮಹಾತ್ಮಾ ಗಾಂಧಿಯವರು ಮಾನವಜನಾಂಗದ ಸುಖಶಾಂತಿಗಳಿಗಾಗಿ ಇಡೀ ಮಾನವ ಜನಾಂಗಕ್ಕೆ ಸತ್ಯ ಹಾಗು ಅಹಿಂಸಾ ಮಂತ್ರಗಳನ್ನು ಉಪದೇಶಿಸುತ್ತ ಅದರ ಪ್ರಭಾವದಿಂದ ಜಗತ್ತಿನಲ್ಲಿಯೇ ಕ್ರಾಂತಿಯನ್ನುಂಟುಮಾಡಲು ಹೋರಾಡುತ್ತಲಿದ್ದಾರೆ. ರೋಮನ್ ರೊಲಾರಂಥ ಪಾಶ್ಚಾತ್ಯ ತತ್ವಜ್ಞಾನಿಗಳೂ ಇದನ್ನೇ ಉಪದೇಶಿಸಹತ್ತಿದ್ದಾರೆ. ಅಂತರ ರಾಷ್ಟ್ರೀಯ '**ನೋಬಲ ಪ್ರಾಯಿಜ**' ಇದೇ ದೃಷ್ಟಿಯಿಂದ ಏರ್ಪಡಿಸಲ್ಪಟ್ಟಿದೆ. ಈ ರೀತಿಯಾಗಿ, ಸದ್ಯಕ್ಕೆ ಜಗತ್ತಿನ ಸುಖಶಾಂತಿಗಳಿಗಾಗಿ ಹೋರಾಡುತ್ತಿರುವ ವಿಶ್ವವಿಭೂತಿಗಳಲ್ಲಿ ಮಹಾತ್ಮರೇ ಅಗ್ರಗಣ್ಯರು.

ಪೋರಬಂದರದಲ್ಲಿ ಮೋಹನದಾಸರು ೧೮೬೯ ರ ಅಕ್ಟೋಬರ ಎರಡನೇ ತಾರೀಖಿನ ದಿವಸ ಹುಟ್ಟಿದರು. ಇವರ ತಂದೆಯ ಹೆಸರು ಕರಮಚಂದರು. ಇವರು ವೈಶ್ಯರು. ವೈಷ್ಣವರು. ಕರಮಚಂದರು ಪೋರಬಂದರದ ಮಂತ್ರಿಗಳಾಗಿದ್ದಲ್ಲದೆ ರಾಜಕೋಟದ ದಿವಾಣರೂ ಆಗಿದ್ದರು.

ಇವರಲ್ಲಿ ಸ್ವಾಭಿಮಾನವು ಅತ್ಯಂತ ಜಾಗೃತವಿದ್ದುದರಿಂದ ಎಲ್ಲಿಯೂ ಸೇವಕರಂತೆ ಕಾರ್ಯಮಾಡಲಿಲ್ಲ. ಮೋಹನದಾಸರ ತಾಯಿಯು ಪರಮ ಭಗವದ್ಭಕ್ತಳು. ಪ್ರೇಮದ ಮೂರ್ತಿಯೇ ಆಗಿದ್ದಳು. ವ್ರತೋಪವಾಸಗಳಲ್ಲಿಯೇ ತನ್ನ ಜೀವಿತವನ್ನು ಸವೆಸುತ್ತಿದ್ದಳು. ಮಹಾತ್ಮಾ ಗಾಂಧಿಯವರ ತಾಯಿಯೆಂದರೆ ಇಂದ್ರಿಯ ನಿಗ್ರಹ, ಶಾಂತಿ, ಪ್ರೇಮ ಮೊದಲಾದ ಗುಣಗಳ ಕಣಿಯೇ ಆಗಬೇಕಿತ್ತಲ್ಲವೇ ' ತಂದೆಯ ಸ್ವಾಭಿಮಾನವೂ ತಾಯಿಯ ಭಕ್ತಿಪ್ರೇಮಗಳೂ ಕಾಠಿಣ್ಯವೂ ಮೋಹನದಾಸರಲ್ಲಿ ಪೂರ್ಣವಾಗಿ ಇಳಿದಿವೆ.

ರಾಜಕೋಟದ ಹಾಯಸ್ಕೂಲಿನಲ್ಲಿ ಕಲಿತು ಪ್ರವೇಶಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಮೇಲೆ, ಮೋಹನದಾಸರನ್ನು ಹೆಚ್ಚಿನ ಅಭ್ಯಾಸಕ್ಕಾಗಿ ಇಂಗ್ಲಂಡಕ್ಕೆ ಕಳಿಸಲಾಯಿತು. ಇಂಗ್ಲಂಡಕ್ಕೆ ಹೋಗಬಾರದೆಂದು ಎಲ್ಲ ಆಪ್ತೇಷ್ಟರ ಮತವಿದ್ದರೂ ಮೋಹನದಾಸರು ತಮ್ಮ ನಿಶ್ಚಯವನ್ನು ಬದಲಿಸಲಿಲ್ಲ. ಇಂಗ್ಲಂಡಕ್ಕೆ ಹೋದರೆ ಹುಡುಗನು ಅತ್ತ ಹಾದಿಯನ್ನು ಹಿಡಿಯುವನೆಂದು ಬಗೆದು ಅವರ ತಾಯಿಯು ಒಬ್ಬ ಜೈನ ಸನ್ಯಾಸಿಯ ಬಳಿಗೆ ಗಾಂಧಿಯವರನ್ನು ಕರೆದುಕೊಂಡು ಹೋಗಿ ಮದ್ಯ, ಮಾಂಸ ಮತ್ತು ಪ್ರಮದೆಯರನ್ನು ಮುಟ್ಟಲಿಕ್ಕಿಲ್ಲವೆಂದು ಆಣೆಯನ್ನು ಮಾಡಿಸಿಕೊಂಡರು. ಈ ವ್ರತದ ಪರಿಣಾಮವು ಮೋಹನದಾಸರನ್ನು ಅನೇಕ ಗಂಡಾಂತರಗಳಿಂದ ಪಾರುಮಾಡಿತು. ಲಂಡನದ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಬ್ಯಾರಿಸ್ಟರ ಪರೀಕ್ಷೆಯಲ್ಲಿಯೂ ಪಾರಾಗಿ ಮೋಹನದಾಸರು ಭಾರತಕ್ಕೆ ಮರಳಿಬಂದರು. ಮುಂಬಯಿಯಲ್ಲಿ ವಕೀಲಿಗೆ ಪ್ರಾರಂಭವಾಯಿತು.

೧೮೯೩ರಲ್ಲಿ ಒಂದು ವ್ಯಾಜ್ಯದ ಸಲುವಾಗಿ ದಕ್ಷಿಣ ಆಫ್ರಿಕೆಗೆ ತೆರಳಿದರು. ಆ ವ್ಯಾಜ್ಯದ ಕಾರ್ಯಕ್ಕಾಗಿ ಅವರಿಗೆ ಅಲ್ಲಿಯೇ ನೆಲೆಸಬೇಕಾಯಿತು. ಗಾಂಧಿಯವರು ಆಫ್ರಿಕಾಕ್ಕೆ ಹೋದ ಎರಡು ದಿನಗಳಲ್ಲಿಯೇ ಒಂದು ದಿನ ಕೋರ್ಟಿಗೆ ಹೋದರು. ತಮ್ಮ ಪರಿಚಯದ ವಕೀಲನ ಬಳಿಯಲ್ಲಿ ಕುಳಿತುಕೊಂಡರು. ನ್ಯಾಯಾಧೀಶನು ಒಳ್ಳೇ ಕುತೂಹಲ

ದೃಷ್ಟಿಯಿಂದ ಇವರನ್ನು ನೋಡುತ್ತ ತಲೆಯ ಮೇಲಿನ ರುಮಾಲವನ್ನು ತೆಗೆಯಹೇಳಿದನು. ಗಾಂಧಿಯವರು ಈ ಅಪಮಾನವನ್ನು ಸಹನ ಮಾಡಲಿಲ್ಲ. ಅವರ ಸ್ವಾಭಿಮಾನದ ತೇಜವು ಹೊರಬಿದ್ದಿತು. ತೆಗೆಯುವ ದಿಲ್ಲೆಂದು ಗರ್ಜಿಸಿದರು. ಇದರಿಂದ ಇಡೀ ಆಫ್ರಿಕಾದಲ್ಲಿಯೇ ಹಾಹಾ ಕಾರವೆದ್ದಿತು. ಅಂದದ್ದು ಅನಿಸಿಕೊಂಡು ಅಪಮಾನವನ್ನು ಸಹನ ಮಾಡುತ್ತಿರುವ ಹಿಂದೀಯರಲ್ಲಿ ಇಂಥ ತೇಜವನ್ನು ಕಂಡೊಡನೆಯೇ ಬಿಳಿಯ ಜನರ ಎದೆಯು ಧಸಕ್ಕೆಂದಿತು. ಹಿಂದೀಯರಲ್ಲೆಲ್ಲ ಸ್ವಾಭಿಮಾನದ ಮಿಂಚು ಹೊಡೆದಂತಾಯಿತು. ದಕ್ಷಿಣ ಆಫ್ರಿಕಾದಲ್ಲಿರುವ ಎಲ್ಲ ವೃತ್ತ ಪತ್ರಗಳಲ್ಲಿ ಕೆಲವು ದಿನ ಇದೇ ವಿಷಯವಾಯಿತು. ಈ ಮಹತ್ವದ ಪ್ರಸಂಗದಿಂದ ಗಾಂಧಿಯವರ ಪ್ರಸಿದ್ಧಿಯು ಇಡೀ ಆಫ್ರಿಕಾದಲ್ಲಿಯೇ ಆಯಿತು. ಇಲ್ಲಿಂದಲೇ ಮಹಾತ್ಮರ ಹೋರಾಟವು ಪ್ರಾರಂಭವಾಯಿತೆನ್ನ ಬಹುದು.

ನೇಟಾಲಿನ ಮುಖ್ಯ ಕೋರ್ಟಿನಲ್ಲಿ ವಕೀಲಿ ನಡೆಯಿಸಲು ಅಪ್ಪಣೆ ಯನ್ನು ಕೇಳಿದರು. ಬ್ರಿಟಿಶರ ವರ್ಣದ್ವೇಷವು ಕೂಡಲೆ ಒಪ್ಪಿಗೆಯನ್ನು ಕೊಡಲಿಲ್ಲ. ಕೊನೆಗೆ ಕೊಡಬೇಕಾಯಿತು.

ಗಾಂಧಿಯವರಿಗೆ ಸ್ವಲ್ಪ ದಿನಗಳಲ್ಲಿಯೇ ಆಫ್ರಿಕಾವಾಸಿಗಳಾದ ಭಾರತೀಯರ ಪರಿಸ್ಥಿತಿಯು ಚನ್ನಾಗಿ ತಿಳಿಯಿತು. ಭಾರತೀಯರನ್ನು ಪಶುಗಳಿಗಿಂತಲೂ ಕಡೆಯಾಗಿ ನೋಡುವದನ್ನೂ ಅವರ ಕಷ್ಟಗಳನ್ನೂ ಕಂಡು ಅವರ ಅಂತಃಕರಣವು ಕುದಿಯಹತ್ತಿತು. ೧೮೯೪ರಲ್ಲಿ **ನೇಟಾಲ ಇಂಡಿಯನ್ ಕಾಂಗ್ರೆಸ** ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮುಖಾಂತರ ತಮ್ಮ ಕಷ್ಟಗಳನ್ನೆಲ್ಲ ಹೋಗಲಾಡಿಸಲು ಹೋರಾಟವನ್ನು ಹೂಡಿದರು. ವ್ಯಾಪಾರಿಗಳನ್ನೂ ಸಾವುಕಾರರನ್ನೂ ಒಟ್ಟುಗೂಡಿಸಿ **ಭಾರತೀಯರು** ಎಂಬ ಭಾವನೆಯನ್ನು ತುಂಬಿ, ಸಾರ್ವಜನಿಕ ಜೀವನ ವನ್ನುಂಟುಮಾಡಿದರು. ನೇಟಾಲ ಮತ್ತು ಟ್ರಾನ್ಸವಾಲಗಳಲ್ಲಿರುವ ಹಿಂದೀಯರಿಗೆ ಮತಾಧಿಕಾರವಿಲ್ಲೆಂಬ ಕಾಯದೆಯನ್ನು ಮಾಡಿ ನಾಗರಿ ಕರ ಹಕ್ಕುಗಳನ್ನು ಕಸಿದುಕೊಳ್ಳಬೇಕೆಂಬ ಬಿಳಿಜನರು ಹೊಂಚ

ಹಾಕಿದರು. ಆದರೆ ಗಾಂಧಿಯವರ ಅವಿಶ್ರಾಂತ ಶ್ರಮದಿಂದ ಅದು ಸಾಧ್ಯ ವಾಗದೆ ಹೋಯಿತು.

ಇದೇ ಸಮಯದಲ್ಲಿ ಇನ್ನೊಂದು ಸಮಸ್ಯೆಯು ಭಾರತೀಯರ ಎದುರಿಗೆ ಧುತ್ತೆಂದು ಬಂದು ನಿಂತಿತು. ನೇಟಾಲ ಸರಕಾರದವರು, (ಗಿರಮಿಟಿಯಾ) ನಿಯತಕಾಲಿಕ ಕೂಲಿಕಾರರಾದ ಭಾರತೀಯರ ಮೇಲೆ, ಪ್ರತಿವರ್ಷಕ್ಕೆ ೨೫ ಪೌಂಡು (೩೭೫ ರೂ.) ತಲೆಪಟ್ಟಿಯನ್ನು ಹಾಕ ಬೇಕೆಂಬ ಬಿಲ್ಲನ್ನು ತಂದರು. ಇದಂತೂ ಅನ್ಯಾಯದ ಪರಮಾವಧಿ ಯಾಗಿತ್ತು. ಗಾಂಧಿಯವರ ನೇತೃತ್ವದಲ್ಲಿ ಕಾಂಗ್ರೆಸ್ಸು ಚಳವಳಿಯನ್ನು ಹೂಡುವ ಘೋಷಣೆಯನ್ನು ಮಾಡಿತು. ನೇಟಾಲ ಸರಕಾರವು ಭಾರತದ ವ್ಹಾಯಿಸರಾಯರ ಮುಂದೆ, ಈ ಪ್ರಶ್ನೆಯನ್ನು ಇಟ್ಟಿತು. ವ್ಹಾಯಿಸ ರಾಯನು, ೨೫ ಪೌಂಡಿನ ಬದಲು, ೩ ಪೌಂಡು ಇರಬೇಕೆಂದು ತಿದ್ದುಪಡೆ ಮಾಡಿದನು. ಆದರೂ ಇದೂ ಭಾರತೀಯರಿಗೆ ಅಪಮಾನಕಾರಕವಲ್ಲವೇ! ಇಷ್ಟಾದರೂ ಬಡ ಕೂಲಿಕಾರರಿಗೆ ಎಂತು ಸಾಧ್ಯ? ಚಳವಳಿಯು ಉಗ್ರ ಸ್ವರೂಪವನ್ನು ಧಾರಣಮಾಡಿತು; ಕೊನೆಗೆ ಸತ್ಯಾಗ್ರಹದಲ್ಲಿ ಪರಿಣಮಿ ಸಿತು. ಮಹಾತ್ಮರ ಸತ್ಯಾಗ್ರಹದ ಪ್ರಾರಂಭವು ಇದರಿಂದಲೇ ಪ್ರಾರಂಭ ವಾಯಿತು.

ಗಾಂಧಿಯವರು ಈ ವಿಷಯವಾಗಿ ಆಂದೋಲನವನ್ನು ಭಾರತ ದಲ್ಲಿಯೂ ಮಾಡಬೇಕೆಂದು ಬಗೆದು ಭಾರತಕ್ಕೆ ಮರಳಿಬಂದರು. ಭಾರತ ದಲ್ಲೆಲ್ಲ ಸಂಚರಿಸಿ, ಹಿಂದೀಯರ ಗೋಳನ್ನು ವರ್ಣಿಸಿ ಭಾರತದಲ್ಲಿ ಅಪೂರ್ವವಾದ ಜಾಗೃತಿಯನ್ನುಂಟುಮಾಡಿದರು. ಬ್ರಿಟಿಶರಲ್ಲಿರುವ ವರ್ಣ ದ್ವೇಷವನ್ನೂ ಹಿಂದೀ ಜನರನ್ನು ಹೇಗೆ ನಡೆಯಿಸಿಕೊಳ್ಳುತ್ತಿರುವ ರೆಂಬುದನ್ನೂ ವರ್ಣಿಸುವ ಒಂದು ಪುಸ್ತಕವನ್ನು ಪ್ರಸಿದ್ಧಿಸಿದರು. ಇದರ ೧೦ ಸಾವಿರ ಪ್ರತಿಗಳು ಮುದ್ರಿಸಲ್ಪಟ್ಟು ಹಂಚಲ್ಪಟ್ಟವು. ಗಾಂಧಿ ಯವರು ನಡೆಯಿಸಿದ ಈ ಚಳವಳಿಯನ್ನು ದಕ್ಷಿಣ ಆಫ್ರಿಕೆಯ ರೂಟರ ಸುದ್ದಿಗಾರನು ಉಪ್ಪುಕಾರ ಹಚ್ಚಿ ಪ್ರಸಿದ್ಧಿಸಿದನು. ಇದರಿಂದ ಆಫ್ರಿಕಾ ದಲ್ಲಿಯ ಬ್ರಿಟಿಶರ ಹೊಟ್ಟೆಯಲ್ಲಿ ಬೆಂಕಿಬಿದ್ದಿತು. ಗಾಂಧಿಯವರೂ ಹಿಂದೀ

ಜನರೂ ಆಫ್ರಿಕಾಕ್ಕೆ ಬರದಂತೆ ಮಾಡಬೇಕೆಂದು ಯತ್ನಿಸಹತ್ತಿದರು. ಇದಕ್ಕೆ ಅಲ್ಲಿಯ ಸರಕಾರವೂ ಬೆಂಬಲವನ್ನಿಕ್ಕಿತು. ಇಷ್ಟರಲ್ಲಿ ಆಫ್ರಿಕೆಗೆ ತೀವ್ರ ಬರಬೇಕೆಂದು ತಂತಿಯು ಬಂದಿತು. ಕುಟುಂಬ ಸಮೇತರಾಗಿ, ಗಾಂಧೀಯವರು ಆಫ್ರಿಕಾಕ್ಕೆ ಹೊರಟರು. ಇವರೊಡನೆಯೇ ಲ೦೦ ಹಿಂದೀ ಜನರಿಂದ ತುಂಬಿದ ಇನ್ನೊಂದು ಹಡಗವೂ ಇತ್ತು. ಎರಡೂ ಹಡಗಗಳು ದಂಡೆಗೆ ಹತ್ತುವಷ್ಟರಲ್ಲಿ, ಇವುಗಳಲ್ಲಿರುವ ಜನರನ್ನು ಇನ್ನೂ ಐದು ದಿನಗಳವರೆಗೆ ದಂಡೆಯ ಮೇಲೆ ಇಳಿಸಲಾಗದೆಂದೂ, ಪ್ಲೇಗಿನ ಸ್ಥಳದಿಂದ ಬಂದಿರುವರೆಂದೂ ನಿರ್ಬಂಧಿಸಿದರು. ಆದರೆ ಈ ಎಲ್ಲ ಕಾರಣ ಗಳಲ್ಲೇನೂ ಹುರಳಿರಲಿಲ್ಲ. ಗಾಂಧಿಯವರನ್ನು ಬರಗೊಡಬಾರದೆಂಬುದೇ ಇದರ ಉದ್ದೇಶ. ಇವರ ಪಕ್ಷಗಾರನಾದ ಅಬ್ದುಲ್ಲಾ ಸೇಟನನ್ನು ಮೊದಲೇ ಬೆದರಿಸಿದ್ದರು. ಅವರನ್ನು ಮರಳಿ ಹಿಂದುಸ್ಥಾನಕ್ಕೆ ಕಳಿಸ ಬೇಕೆಂದೂ ಬೇಕಾದರೆ ಅದರ ಖರ್ಚು ತಾವು ಕೊಡುವೆವೆಂದೂ, ಇಲ್ಲ ವಾದರೆ ಗಾಂಧಿಯವರ ಜೀವಕ್ಕೆ ಅಪಾಯವಿದೆಯೆಂದೂ ಬೆದರಿಕೆಯ ಗುಂಡನ್ನು ಹಾರಿಸಿದ್ದರು. ಆದರೆ ಗಾಂಧಿಯವರ ನಿಶ್ಚಯದ ಮುಂದೆ ಇವೆಲ್ಲ ಹೇಗೆ ಬಾಳಬೇಕು? ಕೊನೆಗೆ ಇಳಿಯಲು ಅಪ್ಪಣೆ ದೊರೆಯಿತು. ಗಾಂಧಿಯವರಿಗೆ ಇಳಿಯಬೇಡಿರೆಂದೂ ಜನರು ಬೇಡಿಕೊಂಡರು. ಆದರೆ ಅವರು ಕೇಳಲಿಲ್ಲ. ಸಿಟ್ಟಿಗೆದ್ದ ಜನರಿಂದ ಮರಣ ಬಂದರೂ ಒಳ್ಳೆಯ ದೆಂದೂ, ಅಂಜಿ ಒಳಗೆ ಕೂಡುವದು ಹೇಡಿತನವೆಂದೂ ಹೇಳಿ ಕೆಳಗಿಳಿ ದರು. ದಂಡೆಯ ಮೇಲೆ ಸಾವಿರಾರು ಯುರೋಪಿಯನ್ನರು ಸೇಡು ತೀರಿಸಿಕೊಳ್ಳಬೇಕೆಂದು ನೆರೆದಿದ್ದರು ಗಾಂಧಿಯವರೂ ಅವರ ಯುರೋಪಿಯನ್ ಗೆಳೆಯರೊಬ್ಬರೂ ಕಾಲುನಡೆಗೆಯಿಂದಲೇ ಮುಂದಕ್ಕೆ ಸಾಗಿದರು. ಜನಜಂಗುಳಿಯಿಂದ ಮೇಲೆ ಕೇಳುವದೇನು? ಕಲ್ಲು ಮಣ್ಣು ಗಳ ಮಳೆಗರೆದರು. ಆ ಗದ್ದಲದಲ್ಲಿ ಅವರ ಸಂಗಡ ಇದ್ದ ಯುರೋಪಿಯ ಗೃಹಸ್ಥನು ತಪ್ಪಿಸಿಕೊಂಡನು. ಗಾಂಧಿಯವರಿಗೆ ಪೆಟ್ಟುಗಳು ಬಿದ್ದವು. ರುಮಾಲವು ಹಾರಿಹೋಯಿತು. ಕಲ್ಲುಗಳು ಬಡಿಯಹತ್ತಿದವು. ಮೂರ್ಛೆ ಬರಹತ್ತಿತು. ಇಂಥ ಸಮಯದಲ್ಲಿ ಪೋಲೀಸ ಸುಪರಿಂಟೆಂಡೆಂಟನ

ಹೆಂಡತಿಯು ಗಾಂಧಿಯವರ ಗುರುತನ್ನು ಹಿಡಿದು, ಅವರನ್ನು ಕೊಡೆಯಿಂದ ಮುಚ್ಚಿ ತನ್ನ ಮನೆಗೆ ಕರೆದೊಯ್ದಳು. ಸಂಜೆಗೆ ಮತ್ತೆ ಜನರು ಅವರ ಮನೆಯನ್ನೇ ಮುತ್ತಿದರು. ಗಾಂಧಿಯವರು ಪೋಲಿಸರ ಉಡುಪು ತೊಡುಪುಗಳನ್ನುಟ್ಟು ಪಾರಾಗಿ ಹೋದರು. ಬೇಟೆಯು ಪಾರಾದದ್ದನ್ನು ಕಂಡು ಜನರು ಚದರಿದರು. ಜಗತ್ತಿಗೆ ತಾವು ಸುಧಾರಿಸಿದವರೆಂದು ಹೇಳುವ ಬ್ರಿಟಿಶ ಜನಾಂಗದ ನಾಗರಿಕತೆಯಿದು.

ಚೇಂಬರಲೇನ ಎಂಬ ಸದ್ಗೃಹಸ್ಥನು ಗಾಂಧಿಯವರ ಮೇಲೆ ನಡೆಯಿಸಿದ ಪುಂಡರ ಪುಂಡಾಟಿಕೆಯ ವಿಷಯವಾಗಿ ಖಟ್ಲೆಗಳನ್ನು ಹಾಕಬೇಕೆಂದು ನೇಟಾಲ ಸರಕಾರಕ್ಕೆ ತಂತಿಕೊಟ್ಟನು. ಸರಕಾರೀ ವಕೀಲನು ಬಂದು ಗಾಂಧಿಯವರನ್ನು ವಿಚಾರಿಸಲಾಗಿ 'ಅವರು ತಪ್ಪುತಿಳುವಳಿಕೆಯಿಂದ ಈ ರೀತಿಯಾಗಿ ವರ್ತಿಸಿರುವರು, ಇದರಲ್ಲಿ ಅವರ ದೋಷವೇನಿದೆ? ಅವರಿಗೆ ಸಿಕ್ಕ ಸುಳ್ಳುಸಂಗತಿಗಳಿಂದ ಅವರ ತಲೆ ತಿರುಗಿರುವದು. ಅವರಿಗೆ ಯಾವಾಗ ನಿಜ ಸಂಗತಿಗಳು ತಿಳಿಯುವವೋ ಆಗ ಅವರಿಗೆ ಪಶ್ಚಾತ್ತಾಪವಾಗುವದು. ನಾನು ಅವರ ಮೇಲೆ ಖಟ್ಲೆಗಳನ್ನು ಮಾಡಲು ಇಚ್ಛಿಸುವದಿಲ್ಲ.' ಎಂದು ಉತ್ತರ ಕೊಟ್ಟು ಇದೇ ಅರ್ಥದ ಬಂದು ಪತ್ರವನ್ನೂ ಬರೆದು ಕೊಟ್ಟರು. ಇದರಿಂದ ಮಹಾತ್ಮರ ದಯಾಪೂರ್ಣವಾದ ಕ್ಷಮಾ ಗುಣವೂ ಅಹಿಂಸಾ ಮನೋವೃತ್ತಿಯೂ ಹೊರಬಿದ್ದು ಜಗತ್ತನ್ನು ದಂಗುಗೊಳಿಸಿದವು. ಇದರಿಂದ ಬ್ರಿಟಿಶ ಜನಾಂಗದ ಮೇಲೆಯೂ ವಿಲಕ್ಷಣವಾದ ಪ್ರಭಾವವು ಬಿದ್ದಿತು. ಬಿಳಿಯರಿಗೆ ನಾಚಿಕೆ ಎನಿಸಹತ್ತಿತು. ವೃತ್ತಪತ್ರಗಳು ಮಹಾತ್ಮರ ಗುಣಗಳನ್ನು ಕೊಂಡಾಡಿದವು. ಪುಂಡಾಟಿಕೆಯು ಎಲ್ಲ ಕಡೆಗೂ ನಿಷೇಧಿಸಲ್ಪಟ್ಟಿತು. ಭಾರತೀಯರ ಬೆಲೆಯು ಹೆಚ್ಚಿತು. ಮೊದಲನೇ ಯಾತ್ರೆಯಲ್ಲಿ ಭಾರತೀಯರು ಸ್ವಾಭಿಮಾನಿಗಳೆಂದೂ ಎರಡನೇ ಯಾತ್ರೆಯಲ್ಲಿ ಭಾರತೀಯರ ಅಂತಃಕರಣವು ಪವಿತ್ರವೂ ದಯಾಪೂರ್ಣವಾದುದೆಂದೂ ಜಗತ್ತಿಗೆ ಗಾಂಧಿಯವರು ತೋರಿಸಿಕೊಟ್ಟರು.

ಗಾಂಧಿಯವರು ದಿನದಿನಕ್ಕೆ ಭಾರತೀಯರ ಸೇವೆಯಲ್ಲಿಯೇ

ಮಗ್ನರಾದರು. ಈ ಸೇವಾಬುದ್ಧಿಯೂ, ಹೋರಾಟದ ಜೀವನವೂ ಗಾಂಧಿಯವರನ್ನು ಸತ್ಯಾಗ್ರಹಿಗಳನ್ನಾಗಿ ಮಾಡಿದವು. ಸತ್ಯೋಪಾಸನೆಯು ಅವರ ಜೀವನವನ್ನೇ ಬದಲಿಸಿಬಿಟ್ಟಿತು. ವ್ಯಕ್ತಿಗತ ಜೀವನವು ಮಾಯವಾಗಿ ಸಾರ್ವಜನಿಕ ಜೀವನವೇ ಇವರ ಉಸಿರಾಯಿತು.

ಇದೇ ಸುಮಾರಿಗೆ, ೧೮೯೯ರಲ್ಲಿ **ಬೋರ** ಯುದ್ಧವು ಪ್ರಾರಂಭವಾಯಿತು. ಗಾಂಧಿಯವರು ಸಾಮ್ರಾಜ್ಯದ ಭಕ್ತರಾದುದರಿಂದ ಈ ಸಮಯದಲ್ಲಿ ಬ್ರಿಟಿಶರಿಗೆ ಸಹಾಯ ಮಾಡುವದು ಕರ್ತವ್ಯವೆಂದು ಬಗೆದರು. ಶುಶ್ರೂಷಾಪಥಕವನ್ನು ಏರ್ಪಡಿಸಿ, ತಮ್ಮ ಸೇವೆಯನ್ನು ಸ್ವೀಕರಿಸಬೇಕೆಂದು ಸರಕಾರಕ್ಕೆ ಬಿನ್ನವಿಸಿಕೊಂಡರು. ಸರಕಾರವು ಒಪ್ಪಿಕೊಂಡಿತು. ಈ ಪಥಕದಲ್ಲಿ ೧೧೦೦ ಜನರು ಸೇರಿದ್ದರು. ಘಾಯಾಳುಗಳ ಶುಶ್ರೂಷೆಗೆ ಆರಂಭವಾಯಿತು. ಪ್ರತ್ಯಕ್ಷ ಯುದ್ಧಭೂಮಿಯಲ್ಲಿ ಗುಂಡಿನ ಮಳೆ ಸುರಿಯುವ ಸ್ಥಳದಲ್ಲಿ ಕೂಡ ಹೋಗಿ ಘಾಯಾಳುಗಳನ್ನು ತಂದರು. ಅದರಲ್ಲಿ ಅನೇಕ ದೊಡ್ಡಮನೆತನದ ಸರದಾರರೂ ಇದ್ದರು. ಗಾಂಧಿಯವರ ಈ ಸೇವೆಯು ಬಹಳ ಬೆಲೆಯುಳ್ಳದ್ದಾಯಿತು. ಹಿಂದೀ ಜನರು ಅಂಜುಬುರಕರು ಎಂಬ ಭಾವನೆಯು ಬಯಲಾಯಿತು. ಎಲ್ಲಿ ನೋಡಿದಲ್ಲಿ ಗಾಂಧಿಯವರ ಗುಣಗಾನಕ್ಕೆ ಪ್ರಾರಂಭವಾಯಿತು. ಇದರಿಂದ ಭಾರತೀಯರ ಕೀರ್ತಿಯೂ ಹೆಚ್ಚಿತು. ಬ್ರಿಟಿಶರ ವರ್ತನದಲ್ಲಿಯೂ ಬದಲಾಯಿತು.

ಇದೇ ಸುಮಾರಿಗೆ, **ಡರಬನದಲ್ಲಿ** ಪ್ಲೇಗವು ಆರಂಭವಾಯಿತು. ಭಾರತೀಯರ ವಾಸಸ್ಥಳವು ಪ್ರತ್ಯಕ್ಷ ನರಕವಾಗಿತ್ತು. ಮಹಾತ್ಮರು ಸ್ವತಃ ಸೇವೆಗೆ ನಿಂತು, ಮುನಸೀಪಾಲ್ಟಿಯ ನೆರವಿನಿಂದ ಎಲ್ಲ ಸ್ವಚ್ಛ ಮಾಡಿಸಿದರು. ೧೮೯೯ರಲ್ಲಿ ಭಾರತದಲ್ಲಿ ಬರ ಬೀಳಲು ಆಫ್ರಿಕಾದಲ್ಲಿ ಹಣ ಕೂಡಿಸಿ ಕಳಿಸಿಕೊಟ್ಟರು. ಬೋರ ಯುದ್ಧವು ಮುಗಿದ ಮೇಲೆ ಇವರಿಗೆ ಆದ ಅತ್ಯಂತ ಶ್ರಮದಿಂದ, ದೇಹಾರೋಗ್ಯಕ್ಕಾಗಿ ಭಾರತಕ್ಕೆ ಮರಳಬೇಕೆಂದರು. ಆದರೆ, ಅಲ್ಲಿಯ ಜನರಲ್ಲಿ ಇವರನ್ನು ಅಗಲುವ ಇಚ್ಛೆ

ಇದ್ದಿಲ್ಲ. ಒಂದು ವೇಳೆ ಹೋಗುವದೇ ಆದರೆ, ನಮ್ಮ ಕರೆ ಬಂದೊಡನೆಯೇ ತಿರುಗಿ ಬರಬೇಕೆಂಬ ಕರಾರಿನ ಮೇಲೆ ಬೀಳ್ಕೊಟ್ಟರು. ಈ ಸಮಯದಲ್ಲಿ ಅನೇಕ ಜನರು ಮಹಾತ್ಮರಿಗೆ ಕಾಣಿಕೆಗಳನ್ನು ಅರ್ಪಿಸಿದರು.

ಭಾರತಕ್ಕೆ ಬಂದೊಡನೆಯೇ ಕಲಕತ್ತೆಯ ಕಾಂಗ್ರೆಸ್ಸಿಗೆ ಹೋದರು. ಅಧಿವೇಶನಕ್ಕಿಂತಲೂ ಮೂರು ನಾಲ್ಕು ದಿನ ಮೊದಲೇ ಹೋದದ್ದರಿಂದ ಕಚೇರಿಯಲ್ಲಿ ತಮ್ಮ ಪರಿಚಯವನ್ನು ಹತ್ತಗೊಡದೆ ಕಾರಕೂನಿಯ ಕೆಲಸವನ್ನು ಮಾಡಿದರು. ಮುಖ್ಯ ಕಾರ್ಯದರ್ಶಿಗಳಾದ ಘೋಷಾಲ ಬಾಬುಗಳಿಗೆ, ಇವರು ಗಾಂಧಿಯವರೆಂದು ತಿಳಿದೊಡನೆಯೇ ನಾಚಿಕೆಯಾಯಿತು. ಗಾಂಧಿಯವರ ಸೇವಾ ಬುದ್ಧಿಯನ್ನೂ ಸ್ವಾರ್ಥತ್ಯಾಗವನ್ನೂ ಕಂಡು ಎಲ್ಲರೂ ಕೌತುಕಪಟ್ಟರು. ಕಾಂಗ್ರೆಸ್ಸಿನಲ್ಲಿ ದ. ಆಫ್ರಿಕೆಯ ಸಲುವಾಗಿ ಗೊತ್ತುವಳಿಯನ್ನು ಮಾಡಿಸಿಕೊಂಡರು. ಅನೇಕ ಮುಖಂಡರಿಗೆ ಭೆಟ್ಟಿಯಾಗಿ ಆಫ್ರಿಕೆಯ ವಿಷಯವಾಗಿ ಸಹಾನುಭೂತಿಯನ್ನು ದೊರಕಿಸಿದರು. ಭಾರತದಲ್ಲೆಲ್ಲ ಸಂಚರಿಸಿ ಜಾಗ್ರತೆಯನ್ನುಂಟುಮಾಡಿದರು. ಭಾರತೀಯರ ಸಮಸ್ಯೆಗಳನ್ನು ಅಭ್ಯಾಸಮಾಡಹತ್ತಿದರು.

ಆದರೆ ಆಫ್ರಿಕಾದಲ್ಲಿ ದಿನದಿನಕ್ಕೆ ಹಿಂದೀಯರ ಗೋಳು ಹೆಚ್ಚಹತ್ತಿತು. ಭಾರತೀಯರನ್ನು ಹೊರಗೆ ಹಾಕುವ ಪ್ರಯತ್ನಗಳು ಪ್ರಾರಂಭವಾದವು. ಅನ್ಯಾಯದ ಕಾಯದೆಗಳು ಆಗಹತ್ತಿದವು. ಕೂಡಲೆ ಮಹಾತ್ಮರಿಗೆ ಕರೆಬಂದಿತು. ಮಹಾತ್ಮರ ಈ ಪ್ರಯಾಣವು ಯುದ್ಧಕ್ಕೇ ಎಂದು ಹೇಳಬಹುದು. ೧೯೦೩ರಲ್ಲಿ ಮಹಾತ್ಮರು ಆಫ್ರಿಕಾಕ್ಕೆ ಹೊರಟರು. ಮುಂದೆ ೧೯೧೪ರ ವರೆಗೆ ಹಿಂದೀ ಜನರ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಿದರು. ಈ ಹೋರಾಟವೇ ಗಾಂಧಿಯವರನ್ನು ಜಗದ್ವಂದ್ಯ ವ್ಯಕ್ತಿಯನ್ನಾಗಿ ಮಾಡಿತು.

ಹಿಂದೀ ಜನರ ಮತಗಳನ್ನು ಹೊರಗೆಡವುವದಕ್ಕಾಗಿ ೧೯೦೩ರಲ್ಲಿ 'Indian Opinion' ಎಂಬ ವಾರಪತ್ರಿಕೆಯನ್ನು ತೆಗೆದರು. ಅದು ಮೊದಮೊದಲು ಇಂಗ್ಲೀಷ, ಗುಜರಾಥಿ, ಹಿಂದೀ ಮತ್ತು ತಮಿಳು

ಭಾಷೆಗಳಲ್ಲಿ ಪ್ರಕಟಿಸಲ್ಪಡುತ್ತಿತ್ತು. ಇದೊಂದೇ ಕಾರ್ಯಕ್ಕಾಗಿ ಗಾಂಧಿಯವರು ತಾವು ಗಳಿಸಿದ ಹಣದ ಬಹುಭಾಗವನ್ನು ವೆಚ್ಚ ಮಾಡಿದರು. ೧೯೦೪ರಲ್ಲಿ ಟ್ರಾನ್ಸವಾಲದಲ್ಲಿ ೧೦೦ ಎಕರೆ ಭೂಮಿಯನ್ನು ಕೊಂಡು ಆಶ್ರಮವನ್ನು ಪ್ರಾರಂಭಿಸಿದರು. ಯುರೋಪಿಯನ್ನರು ಹಿಂದೀಯರು ಯಾವ ಭೇದಭಾವವು ಇಲ್ಲದಲೆ ಒಂದೆಡೆಯಲ್ಲಿ ವಾಸಿಸಹತ್ತಿದರು. ಸಾದಾವೃತ್ತಿ ಸೇವಾವೃತ್ತಿಗಳೇ ಮುಖ್ಯ ಧ್ಯೇಯಗಳಾಗಿದ್ದವು. ತಾವು ಸ್ವತಃ ಆಚರಿಸಿ ಪ್ರಯೋಗವನ್ನು ಮಾಡಹತ್ತಿದ್ದರಿಂದ ಆಶ್ರಮವಾಸಿಗಳ ಮೇಲೆ,ಒಳ್ಳೇ ಪರಿಣಾಮವಾಯಿತು. ಅದೇ ವರ್ಷದಲ್ಲಿ ಜೋಹಾನ್ಸ ಬರ್ಗದಲ್ಲಿ ಪ್ಲೇಗವು ಹಾವಳಿಯನ್ನು ಮಾಡಿತು. ಗಾಂಧಿಯವರು ಸ್ವತಃ ಧವಾಖಾನೆಗಳನ್ನು ತೆಗೆದು, ಸರಕಾರದಿಂದ ತೆಗೆಯಿಸಿ ಜನರ ಶುಶ್ರೂಷೆಯ ಕಾರ್ಯವನ್ನು ಕೈಕೊಂಡರು. ತಾವೇ ಸ್ವತಃ ರೋಗಿಗಳ ಔಷಧೋಪಚಾರಗಳಿಂದ ಸೇವೆಗೈಯುತ್ತಿದ್ದದರಿಂದ ಹಿಂದೀ ಜನರಲ್ಲಿ ಗಾಂಧಿಯವರ ವಿಷಯದಲ್ಲಿ ಅತ್ಯಂತ ಆದರಭಾವವು ಹುಟ್ಟಿತು. 'ತಂದೆತಾಯಿಯು ನೀನೆ' ಎಂದು ಜನರು ನೋಡಹತ್ತಿದ್ದರಲ್ಲಿ ಆಶ್ಚರ್ಯವೇನು ?

೧೯೦೬ರಲ್ಲಿ ನೇಟಾಲದಲ್ಲಿರುವ **ಝೂಲು** ಜನರು ದಂಗೆಯನ್ನು ಎಬ್ಬಿಸಿದರು. ಈ ಸಮಯದಲ್ಲಿಯೂ ಗಾಂಧಿಯವರು ಘಾಯಾಳುಗಳ ಸೇವೆಯನ್ನು ಕೈಕೊಂಡರು. ಈ ಸಮಯದಲ್ಲಿಯೂ ಇವರ ಸೇವೆಯನ್ನು ಅಲ್ಲಿಯ ಸರಕಾರವು ಕೊಂಡಾಡಿದ್ದಲ್ಲದೆ, ಇಂಗ್ಲಂಡದಲ್ಲಿಯೂ ಕೂಡ ಗೌರವಮಾಡಲ್ಪಟ್ಟಿತು. ಗಾಂಧಿಯವರ ಈ ಸೇವೆಯೂ, ಅಲ್ಲಿಯ ಸರಕಾರದ ಮೇಲೆ, ಯಾವ ಪರಿಣಾಮವನ್ನೂ ಮಾಡಲಿಲ್ಲ. ಅವರ ಅಂತಃಕರಣದಲ್ಲಿ ಯಾವ ಪರಿವರ್ತನವೂ ಆಗಲಿಲ್ಲ. ಟ್ರಾನ್ಸವಾಲ ಸರಕಾರವು ಅನ್ಯಾಯವನ್ನು ಮತ್ತಿಷ್ಟು ಮಾಡಹತ್ತಿತು. ೧೯೦೬ರಲ್ಲಿ 'Asiatic registration' ಎಂಬ ಕಾಯಿದೆಯನ್ನು ಟ್ರಾನ್ಸವಾಲ ಸರಕಾರವು ಮಾಡಿತು. ಇದರಿಂದ ಪ್ರತಿಯೊಬ್ಬ ಹಿಂದೀಯನು ಕೈದಿಯಂತೆ, ತನ್ನ ಹೆಸರನ್ನು ನೋಂದ ಮಾಡಿಸಬೇಕು. ಈ ಕಾಯದೆಯಿಂದ ನಾಗರಿಕರ

ಎಲ್ಲ ಹಕ್ಕುಗಳು ಮುಣಗಿಸಲ್ಪಟ್ಟವು. ಈ ಅನ್ಯಾಯವನ್ನು ಸಹಸ ಮಾಡುವದೆಂದರೆ, ನಾವು ಜೀವಂತ ಹೆಣಗಳೆಂದೇ ಪ್ರಸಿದ್ಧಿಸಿದಂತೆ. ಶಾಂತಸ್ವಭಾವದ ಗಾಂಧಿಯವರು ಕೂಡ ರೊಚ್ಚಿಗೆದ್ದರು. ಇಲ್ಲಿಂದಲೇ ಅವರ ಸತ್ಯಾಗ್ರಹವು ಪ್ರಾರಂಭವಾಯಿತು. ಗಾಂಧಿಯವರು ಸ್ವಭಾವತಃ ಮೃದುಹೃದಯರು. ಸತ್ಯೋಪಾಸಕರು. ಅಹಿಂಸಾವ್ರತಬದ್ಧರು. ಮೊದಲು ಮೊದಲು ಈ ಕಾಯಿದೆಯು ಆಗಬಾರದೆಂದು, ದಕ್ಷಿಣ ಆಫ್ರಿಕೆಯಲ್ಲಿಯೂ, ಇಂಗ್ಲಂಡದಲ್ಲಿಯೂ ಚಳವಳಿಯನ್ನು ಹೂಡಿದರು. ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ನಿಃಶಸ್ತ್ರರ ಶಕ್ತಿಯಾದ ಸತ್ಯಾಗ್ರಹವೊಂದೇ ಇದಕ್ಕೆ ಉಪಾಯವೆಂದು ಬಗೆದು ಗಾಂಧಿಯವರು ಈ ಕಾಯದೆಯನ್ನು ಮುರಿಯಬೇಕೆಂದು ನಿಶ್ಚಯಿಸಿ ಅದರಂತೆ ಜನರಿಗೆ ಉಪದೇಶ ಮಾಡಿದರು. ತಾವು ಸ್ವತಃ ಮೊದಲು ಆ ಕಾಯದೆಯಭಂಗವನ್ನು ಮಾಡಿದರು. ಸರಕಾರವು ಗಾಂಧಿಯವರನ್ನು ಸೆರೆಹಿಡಿಯಿತು. ಇದರಿಂದ ಈ ಚಳವಳಿಗೆ ಮತ್ತಿಷ್ಟು ಕಳೆಯೇರಿತು. ಗಾಂಧಿಯವರ ಶಾಂತಿಸೈನಿಕರು ನಾಮುಂದೆ ನೀಮುಂದೆ ಎಂದು ಮುಂದೆ ಬರಹತ್ತಿದರು. ಸಾವಿರಾರು ಜನರು ಸೆರೆಮನೆಯನ್ನು ಕಂಡರು. ಹೀಗೆ ಮೂರು ತಿಂಗಳವರೆಗೆ ಎಡೆಬಿಡದೆ ಕಾಯದೇಭಂಗವು ಸಾಗಹತ್ತಿದ್ದರಿಂದಲೂ ಸತ್ಯಾಗ್ರಹಿಗಳ ಸಂಖ್ಯೆಯು ಬೆಳೆಯುತ್ತಲೇ ನಡೆದದ್ದರಿಂದಲೂ ಸರಕಾರವು ಕಪಟನಾಟಕವನ್ನು ಮಾಡಿತು. ಸಂಧಾನದ ಮಾತುಗಳಿಗೆ ಪ್ರಾರಂಭವಾಯಿತು. **ಹಿಂದೀಯರು ತಾವಾಗಿಯೇ ನೋಂದಣಿ ಮಾಡಿಸಿದರೆ ಮೂರುತಿಂಗಳಲ್ಲಿ ಕಾಯದೆಯು ಕಿತ್ತೊಗೆಯಲ್ಪಡುವದೆಂದು ವಚನವನ್ನು ಕೊಟ್ಟರು.** ಗಾಂಧಿಯವರು ಇದಕ್ಕೆ ಒಪ್ಪಿಕೊಂಡರು. ತಾವು ಸ್ವತಃ ನೋಂದಣಿ ಮಾಡಿಸಲು ಹೊರಟರು. ಎಷ್ಟೋ ಜನರು ಮಾಡಿಸಿದರೂ ಕೂಡ. ಆದರೆ ಮೂರು ತಿಂಗಳನಂತರ ಕಾಯಿದೆಯು ಕಿಂತೆಗೆದುಕೊಳ್ಳಲ್ಪಡಲಿಲ್ಲ. ಗಾಂಧಿಯವರು ಸರಕಾರಕ್ಕೆ ಬಿನ್ನವಿಸಿದರು. ಆದರೆ ಸರಕಾರವು ತಾನು ವಚನವನ್ನೇ ಕೊಟ್ಟಿಲ್ಲವೆಂದು ಹಾರಿಸಿಬಿಟ್ಟಿತು. ಇದರಿಂದ ಮಹಾತ್ಮರು ತಾವು ಮೋಸಹೋದದ್ದಲ್ಲದೆ ಜನರನ್ನು ಮೋಸ

ಗೊಳಿಸಿದಂತಾಯಿತೆಂದು ಬಹಳ ದುಃಖಪಟ್ಟರು. ಆದರೆ ಇದರಿಂದ ಬ್ರಿಟಿಶರ ಕುಟಿಲ ನೀತಿಯು ಮಾತ್ರ ಜಗತ್ತಿಗೆ ಗೊತ್ತಾಗಿ ಗಾಂಧಿಯವರ ಶಕ್ತಿಯು ಬೆಳೆಯಿತು. ಲಕ್ಷಾವಧಿ ಜನರು ಗಾಂಧಿಯವರ ಅನುಯಾಯಿಗಳಾಗಿದ್ದರು. ಮತ್ತೆ ಸತ್ಯಾಗ್ರಹವು ಸಾರಲ್ಪಟ್ಟಿತು. ಸಾವಿರಾರು ತರುಣ-ತರುಣಿಯರು ಸೆರೆಮನೆಗೆ ಕಳಿಸಲ್ಪಟ್ಟರು. ಆದರೆ ಗಾಂಧಿಯವರನ್ನು ಮಾತ್ರ ಹಿಡಿಯುವದು ಆಗಲಿಲ್ಲ. ಈ ಚಳವಳಿಯು ಉಗ್ರರೂಪವನ್ನು ಧಾರಣಮಾಡಿತು. ಇತ್ತ ಸರಕಾರದ ಪಾಪಕೃತ್ಯಗಳು ಒಂದೊಂದೇ ಹೆಚ್ಚು ಹತ್ತಿದವು. '**ಇಮಿಗ್ರೆಂಟ್ಸ್ ರಿಸ್ಟ್ರಿಕ್ಸನ್ ಆಕ್ಟ**' ಎಂಬ ಕಾಯದೆಯನ್ನು ಪಾಸುಮಾಡಿಕೊಂಡರು. ಇದರಿಂದ ಚಳವಳಿಯು ಮತ್ತಿಷ್ಟು ಹೆಚ್ಚಿತು. ಈ ಕಾಯದೆಯ ಮುಖ್ಯ ಉದ್ದೇಶವಿಷ್ಟೇ! ಹೊಸದಾಗಿ ಭಾರತೀಯರು ಯಾರೂ ಬರಕೂಡದೆಂಬುದು. ಇದನ್ನು ಕಂಡು ಎಷ್ಟೋ ಪ್ರತಿಷ್ಠಿತ ಗೃಹಸ್ಥರೂ ಬಂದು ಸತ್ಯಾಗ್ರಹಕ್ಕೆ ಕೂಡಿದರು. ಮತ್ತೆ ಗಾಂಧಿಯವರು ಹಿಡಿಯಲ್ಪಟ್ಟರು. ಶಿಕ್ಷೆ ಮುಗಿದನಂತರ ಬಂದು ನೋಡಲು, ಜನರೂ ಸರಕಾರವೂ ದಣಿದದ್ದು ಸ್ಪಷ್ಟವಾಗಿ ಕಾಣುತಿತ್ತು. ಇಂಗ್ಲಂಡದಲ್ಲಿ ಪ್ರಯತ್ನಿಸಬೇಕೆಂದು ಅಲ್ಲಿಗೆ ಹೋಗಿ ಪ್ರಯತ್ನಿಸಿದರು. ಅದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ಮರಳಿ ಬಂದ ನಂತರ ಸತ್ಯಾಗ್ರಹವನ್ನು ಮತ್ತೆ ಇಮ್ಮಡಿ ಉತ್ಸಾಹದಿಂದ ಮುಂದೆ ಸಾಗಿಸುವ ದೃಢ ಪ್ರತಿಜ್ಞೆಯನ್ನು ಮಾಡಿದರು.

ಸೆರೆಮನೆಗೆ ಹೋದ ಕುಟುಂಬಗಳ ರಕ್ಷಣೆಗಾಗಿ, **ಟಾಲಸ್ಟಾಯ ಫಾರ್ಮ** ಎಂಬ ಆಶ್ರಮವು ತೆರೆಯಲ್ಪಟ್ಟಿತು. ಸಾದಾ ಜೀವನ, ಹಾಗು ಸ್ವಾವಲಂಬನವೇ ಆಶ್ರಮದ ಜೀವನವಾಗಿದ್ದವು. ಯುರೋಪಿಯನ್, ಹಿಂದು, ಮುಸಲ್ಮಾನ ಎಲ್ಲರೂ ಒಂದೇ ಕುಟುಂಬದಂತೆ ಇರಹತ್ತಿದರು. ಸತ್ಯಾಗ್ರಹದ ಪಾಠಗಳನ್ನು ಕಲಿಯಹತ್ತಿದರು.

ಇದೇ ಸಮಯಕ್ಕೆ ಗೋಖಲೆಯವರು ಆಫ್ರಿಕಾಕ್ಕೆ ಬಂದರು. ಅವರು ಹಿಂದೀ ಜನರಿಂದಲೂ ಸರಕಾರದಿಂದಲೂ ಸ್ವಾಗತಿಸಲ್ಪಟ್ಟರು. ಅಲ್ಲಿಯ ಸರಕಾರದಿಂದ ಈ ಅನ್ಯಾಯದ ಕಾಯದೆಗಳನ್ನು ರದ್ದುಪಡಿಸಲು

ವಚನ ತೆಗೆದುಕೊಂಡರು. ಆದರೆ ಗಾಂಧಿಯವರು ಅದನ್ನು ನಂಬಲಿಲ್ಲ. ಗೋಖಲೆಯವರು ಆಫ್ರಿಕಾ ಬಿಡುವದೊಂದೇ ತಡ. ಮತ್ತೊಂದು ಕಾಯದೆಯು ಮುಂದೆ ಬಂದಿತು.

ಹಿಂದೂಜನರ ವಿವಾಹಗಳನ್ನೆಲ್ಲ ಮಾನ್ಯ ಮಾಡುವದಿಲ್ಲೆಂದೂ, ಕ್ರಿಶ್ಚನ್ನ ಧರ್ಮದಂತೆ ಇಲ್ಲಿಯಾದ ವಿವಾಹಗಳು ಮಾತ್ರ ಮಾನ್ಯ ಮಾಡಲ್ಪಡುವವೆಂದೂ ಘೋಷಿಸಲ್ಪಟ್ಟಿತು. ಭಾರತೀಯರ ಈ ಅಪಮಾನವನ್ನು ಯಾರು ಸಹಸ ಮಾಡುವರು? ಈ ಸುದ್ದಿಯು ಹಾ ಹಾ ಅನ್ನುವಷ್ಟರಲ್ಲಿ ಆಫ್ರಿಕವನ್ನೆಲ್ಲಾ ವ್ಯಾಪಿಸಿತು. ಲಕ್ಷಾವಧಿ ಪತಿವ್ರತೆಯರ ಪಾತಿವ್ರತ್ಯಕ್ಕೆ ಕೊಡಲಿ ಇಟ್ಟುದನ್ನು ಕಂಡು ಅವರು ಕೆರಳಿ ಸಿಂಹಿಣಿಯರಾದರು. ಮಹಾತ್ಮರ ರಣಕಹಳೆಗೆ ಸನ್ನದ್ಧರಾಗಿ ವೀರಮಾತೆಯರೂ ವೀರ ವನಿತೆಯರೂ ಮುಂದೆ ಬಂದರು. ಯುದ್ಧಕ್ಷೇತ್ರವು ತರುಣರಿಂದಲೂ ತರುಣಿಯರಿಂದಲೂ ಮುದುಕರಿಂದಲೂ ಮಕ್ಕಳಿಂದಲೂ ತುಂಬಿಹೋಯಿತು. ಜಯನಿನಾದವು ಆಕಾಶವನ್ನು ಮುಚ್ಚಿಬಿಟ್ಟಿತು. ಸಾವಿರಾರು ಸಭೆಗಳಾದವು. ೧೨ನೇ ಸಪ್ಟಂಬರ ೧೯೧೩ನೇ ತಾರೀಖಿನ ದಿವಸ ಸತ್ಯಾಗ್ರಹ ಸಮರವು ಸಾರಲ್ಪಟ್ಟಿತು. ೨೮ನೇ ತಾರೀಖಿಗೆ ಸರಕಾರಕ್ಕೆ ಕೊನೆಯ ಮಾತು ಹೇಳಲ್ಪಟ್ಟಿತು.

ಸ್ತ್ರೀಯರು ಬಂದು ಕೂಡಿದ್ದರಿಂದ ಚಳವಳಿಗೆ ಹೊಸ ಹುರುಪೂ ಹೊಸ ಸ್ವರೂಪವೂ ಪ್ರಾಪ್ತವಾಯಿತು. ಸ್ತ್ರೀಯರ ಬಿನ್ನಹದಿಂದ ಸಾವಿರಾರು ಕೂಲಿಕಾರರು ಕೆಲಸಕ್ಕೆ ಶರಣು ಹೊಡೆದರು. ಸತ್ಯಾಗ್ರಹಕ್ಕೆ ಬಂದು ಕೂಡಿದರು. ಮಹಾತ್ಮರು ಈ ಶಾಂತಿ ಅಸ್ತ್ರವನ್ನು ತೆಗೆದುಕೊಂಡು ಯುದ್ಧಕ್ಕೆ ಅನುವಾದರು. **ಕಾಯದೇ ಭಂಗವನ್ನು ಮಾಡಿ ಟ್ರಾನ್ಸವಾಲವನ್ನು** ಪ್ರವೇಶಿಸಬೇಕೆಂದು **ಜಗದ್ವಿಖ್ಯಾತವಾದ** (March) **ಪ್ರಯಾಣವನ್ನು** ಮಹಾತ್ಮರು ಬೆಳೆಸಿದರು. ಮಹಾತ್ಮರ ದಿವ್ಯ ತೇಜವನ್ನೂ ಸತ್ಯಾಗ್ರಹಿಗಳ ಉತ್ಸಾಹವನ್ನೂ ಸರಕಾರವು ಸಹಿಸಲಶಕ್ಯವಾಯಿತು. ಸೈನ್ಯವು ಯಾವಯಾವ ಮಾರ್ಗದಿಂದ ಸಾಗಬೇಕೆಂಬುದನ್ನು ಮೊದಲೇ ಪ್ರಸಿದ್ಧಿಸಿದ್ದರು. ಗಾಂಧಿಯವರನ್ನು ಬಂಧಿಸಿದರು.

ಮೂರು ಪೌಂಡಿನ, ವಿವಾಹದ, ದೇಶತ್ಯಾಗದ ಕಾಯದೆಗಳು ನಾಶ ವಾಗುವವರೆಗೆ ಈ ಯುದ್ಧವು ಮುಂದೆ ಸಾಗತಕ್ಕದ್ದೇ ಎಂಬ ಸಂದೇಶ ವನ್ನಿತ್ತು ನಡೆದರು. ಆದರೆ ಸರಕಾರವು ಗಾಂಧಿಯವರನ್ನು ಬಿಟ್ಟು ಬಿಟ್ಟಿತು. ಮತ್ತೆ ಬಂದು ಸತ್ಯಾಗ್ರಹಿಗಳನ್ನು ಕೂಡಿದರು. ಮತ್ತೆ ಹಿಡಿದು ೧೫ ತಿಂಗಳ ಶಿಕ್ಷೆಯನ್ನು ವಿಧಿಸಿದರು. ಸತ್ಯಾಗ್ರಹ ಸೈನ್ಯವು ಬಾಲ್ಫರ ಎಂಬಲ್ಲಿಗೆ ಬಂದೊಡನೆಯೇ ಅದನ್ನೆಲ್ಲ ಹಿಡಿದು ಗಾಡಿಯಲ್ಲಿ ಕುಳ್ಳಿರಿಸಿ, ನೇಟಾಲಕ್ಕೆ ತಂದು ಮುಟ್ಟಿಸಿದರು. ಮತ್ತೆ ಹೊರಟಿತು. ಈ ಸಮಯ ದಲ್ಲಿ ನೇಟಾಲದ ತೋಟದಲ್ಲಿಯ ಕೂಲಿಕಾರರು ಸಂಪು ಹೂಡಿದರು. ಆದರೆ ತೋಟದ ಒಡೆಯರು ಮೊಲಗಳನ್ನು ಕೊಂದಂತೆ ಗುಂಡು ಹಾಕಿ ಅವರನ್ನು ಕೊಂದರು. ಈ ಅಮಾನುಷ ಕೃತಿಯು ಬ್ರಿಟಿಶರ ಮೋರೆಗೆ ಮಸಿ ಹಚ್ಚಿತು. ಈ ಸುದ್ದಿಯು ಜಗತ್ತಿನ ತುಂಬೆಲ್ಲ ಹಬ್ಬಿತು. ಈ ಅದ್ಭುತವಾದ ಸಮರವು ಜಗತ್ತನ್ನೇ ತನ್ನ ಕಡೆಗೆ ಎಳೆದು ಕೊಂಡಿತು. ಈ ಸಮರದಲ್ಲಿ ಎಷ್ಟೋ ಯುರೋಪಿಯನ್ನರು ಸಹ ಭಾಗ ವಹಿಸಿದ್ದರು. ಈ ಸತ್ಯಾಗ್ರಹದಲ್ಲಿ ಭಾರತೀಯರು ಕೊಡುಗೈಯಿಂದ ನೆರವಾದರು. ಆಫ್ರಿಕಾದಲ್ಲಿಯ ಈ ಕೊಲೆಯು ವ್ಹಾಯಿಸರಾಯರನ್ನೂ ಬಡಿದೆಬ್ಬಿಸಿತು. ಲಾರ್ಡ ಹಾರ್ಡಿಂಜರು ಬ್ರಿಟಿಶ ಪಾರ್ಲಿಮೆಂಟಿಗೆ ಬರೆ ದರು. ಹೀಗೆ ಆಂದೋಲನವು ವಿರಾಟಸ್ವರೂಪವನ್ನು ತಾಳಿತು. ಚಳ ವಳಿಯ ಝಳವನ್ನು ತಾಳಲಾರದೆ ಸರಕಾರವು ಒಪ್ಪಂದವನ್ನು ಮಾಡಿ ಕೊಂಡಿತು. ಮೂರು ಪೌಂಡಿನ, ಹಾಗು ವಿವಾಹದ ಕಾಯದೆಗಳು ತಿರುಗಿತಕ್ಕೊಳ್ಳಲ್ಪಟ್ಟವು. ಉಳಿದ ಎಲ್ಲ ಕಾಯದೆಗಳು ಸೌಮ್ಯರೂಪ ವನ್ನು ತಾಳಿದವು. ಗಾಂಧಿಯವರ ಸತ್ಯಾಗ್ರಹದ ವಿಜಯವು ಹಿಂದೀ ಜನಾಂಗದ ಇಷ್ಟೇ ಅಲ್ಲ, ಕಪ್ಪು ಜನರೆಂದು ಹೆಸರಾದ ಏಶಿಯಾಖಂಡದ ವಿಜಯವಾಗಿ ಪರಿಣಮಿಸಿತು. ಆರ್ಯರ, ಆರ್ಯಸ್ತ್ರೀಯರ ಶಕ್ತಿಯು ಜಗತ್ತಿನ ರಂಗದಲ್ಲಿ ಮತ್ತೆ ಬೆಳಗಹತ್ತಿತು. ೧೯೦೬ರಲ್ಲಿ ಪ್ರಾರಂಭವಾದ ಸತ್ಯಾಗ್ರಹ ಸಮರವು ೧೯೧೪ರಲ್ಲಿ ಇಷ್ಟಸಿದ್ಧಿಯನ್ನು ಮಾಡಿಕೊಂಡು ಕೊನೆಗಂಡಿತು. ಜಗತ್ತಿನಲ್ಲಿಯೇ ಈ ಸತ್ಯಾಗ್ರಹವು ನವಯುಗವನ್ನು ಪ್ರಾರಂಭಮಾಡಿತು.

ದೇ. ಭ. ಗೋಖಲೆಯವರು ಇಂಗ್ಲಂಡದಲ್ಲಿದ್ದದರಿಂದಲೂ ಅವರ ಪ್ರಕೃತಿಯು ಅಸ್ವಸ್ಥವಾದುದರಿಂದಲೂ ಗಾಂಧಿಯವರು ಅವರ ಸೇವೆಗೆಂದು ಇಂಗ್ಲಂಡಕ್ಕೆ ತೆರಳಿದರು. ಇದೇ ಸಮಯದಲ್ಲಿ ಮಹಾಯುದ್ಧವು ಪ್ರಾರಂಭವಾದ್ದರಿಂದ ಅಲ್ಲಿಯ ಹಿಂದೀ ಜನರಿಗೂ, ವಿದ್ಯಾರ್ಥಿಗಳಿಗೂ, ಸಹಾಯಮಾಡಲು ಉಪದೇಶವನ್ನು ಮಾಡಿದರು. ಶುಶ್ರೂಷಾಪಥಕವನ್ನು ಏರ್ಪಡಿಸಿದರು. ಈ ಹತ್ತುಹದಿಮೂರು ವರ್ಷ ಅಖಂಡಶ್ರಮವನ್ನು ವಹಿಸಿದ್ದರಿಂದ ಪ್ರಕೃತಿಯ ಆರೋಗ್ಯಕ್ಕಾಗಿ, ವಿಶ್ರಾಂತಿಯನ್ನು ಪಡೆಯಲೋಸುಗ ಇಂಗ್ಲಂಡದಿಂದ ಭಾರತಕ್ಕೆ ಬಂದರು.

ದೇ. ಭ. ಗೋಖಲೆಯವರು ಇವರ ರಾಜಕೀಯ ಗುರುಗಳಾದ್ದರಿಂದ ಅವರ ಹೇಳಿಕೆಯಂತೆ ಭಾರತದ ಪರಿಸ್ಥಿತಿಯನ್ನು ಅಭ್ಯಸಿಸಹತ್ತಿದರು. ಎಲ್ಲ ದೊಡ್ಡ ದೊಡ್ಡ ಪಟ್ಟಣಗಳಿಗೆ ಹೋಗಿ, ಅಲ್ಲಿಯ ಮುಖಂಡರೊಡನೆ ಚರ್ಚಿಸಿ, ಅದರಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುತ್ತಿದ್ದರಲ್ಲದೆ ತಮ್ಮ ಸತ್ಯಾಗ್ರಹಧರ್ಮದ ವಿಷಯವಾಗಿಯೂ ಚರ್ಚಿಸುತ್ತಿದ್ದರು. ಹೀಗೆ ಎರಡುಮೂರು ವರ್ಷಗಳ ಕಾಲವು ಸಂದಿತು. ಇದಲ್ಲದೆ ಪ್ರತಿಯೊಂದು ರಾಷ್ಟ್ರೀಯಸಭೆ, ಪ್ರಾಂತಿಕಸಭೆ ಮೊದಲಾದವುಗಳಿಗೆ ಹೋಗಿ ಅಲ್ಲಿಯ ಪರಿಸ್ಥಿತಿಯನ್ನು ನಿರೀಕ್ಷಿಸಹತ್ತಿದರು. ಇದಲ್ಲದೆ ತಮ್ಮ ಸತ್ಯಾಗ್ರಹಧರ್ಮದಲ್ಲಿ ಅಡಕವಾಗಿರುವ ಸತ್ಯ, ಅಹಿಂಸಾ, ಪ್ರೇಮಗಳ ಪ್ರಚಾರ ಮಾಡುವದಕ್ಕಾಗಿ ಸಾಬರಮತಿಯಲ್ಲಿ ಸತ್ಯಾಗ್ರಹಾಶ್ರಮವು ಸ್ಥಾಪಿಸಲ್ಪಟ್ಟಿತು.

ಗಾಂಧಿಯವರು ಇಂಗ್ಲಂಡದಿಂದ ಹಿಂದುಸ್ಥಾನಕ್ಕೆ ಬಂದಕೂಡಲೆ ಸಾಮ್ರಾಜ್ಯಸೇವೆಯಲ್ಲಿ ಇವರು ತೋರಿಸಿದ ಭಕ್ತಿ, ವಿಶ್ವಾಸಗಳಿಗಾಗಿ **ಕಾಯಸರ್ ಈ ಹಿಂದ** ಎಂಬ ಸುವರ್ಣಪದಕವನ್ನು ಚಕ್ರವರ್ತಿಗಳು ಅರ್ಪಿಸಿದರು. ಈ ಸಮಯದಲ್ಲಿ ಸರಕಾರಕ್ಕೂ ದೇಶಭಕ್ತರಿಗೂ ಪ್ರಿಯರಾದ ರಾಷ್ಟ್ರೀಯರೆಂದರೆ ಇವರೇ!

ಗಾಂಧಿಯವರು ವಿಶ್ರಾಂತಿಗೆಂದೇನೋ ಭಾರತಕ್ಕೆ ಬಂದರು. ಆದರೆ ಅವರಿಗೆ ಇನ್ನೂವರೆಗೂ ವಿಶ್ರಾಂತಿಯು ದೊರೆತಿಲ್ಲ. ೧೯೧೬ರಲ್ಲಿ

ಲಖನೌ ಕಾಂಗ್ರೆಸ್ಸಿನಲ್ಲಿ ಚಂಪಾರಣ್ಯದ ಕೂಲಿಕಾರರ ಗೋಳಿನ ವಿಷಯವು ಚರ್ಚೆಗೆ ಬಂದಿತು. ಜನತೆಯ ಆಗ್ರಹದಿಂದ ಅಲ್ಲಿಯ ಕೂಲಿಕಾರರ ಸ್ಥಿತಿ-ಗತಿಗಳನ್ನು ಚನ್ನಾಗಿ ಅರಿತುಕೊಳ್ಳಬೇಕೆಂದು ೧೯೧೭ರಲ್ಲಿ ಚಂಪಾರಣ್ಯಕ್ಕೆ ಹೋದರು. ಅವರು ಚಂಪಾರಣ್ಯದಲ್ಲಿ ಕಾಲಿಟ್ಟೊಡನೆಯೇ ಅಲ್ಲಿಯ ಜಿಲ್ಹಾಧಿಕಾರಿಯು ಆ ಜಿಲ್ಹೆಯನ್ನು ೨೪ ತಾಸಿನ ಒಳಗಾಗಿ ಬಿಟ್ಟು ಹೋಗಬೇಕೆಂದು ಆಜ್ಞೆಯನ್ನಿತ್ತನು. ಮಹಾತ್ಮರ ತೇಜಸ್ಸು ಅವನಿಗೇನು ಗೊತ್ತು? ಗಾಂಧಿಯವರು ತಾವು ಕೂಲಿಕಾರರನ್ನು ಹುರಿದುಂಬಿಸಲಿಕ್ಕೆ ಬಂದಿಲ್ಲವೆಂದೂ ಕೂಲಿಕಾರರ ಸ್ಥಿತಿಯನ್ನು ಅಭ್ಯಾಸ ಮಾಡಲಿಕ್ಕೆ ಬಂದಿರುವೆನೆಂದೂ ತಿಳಿಸಿದರು. ಈ ಉದ್ದೇಶವು ನ್ಯಾಯವಾದ್ದರಿಂದ ನಿಮ್ಮ ಆಜ್ಞೆಯನ್ನು ಮುರಿದು ಬಿಡುವೆನೆಂದೂ ಉತ್ತರವನ್ನಿತ್ತರು. ೧೮ನೇ ತಾರೀಖಿನ ದಿವಸ ಖಟ್ಲೆಯು ನಡೆಯಿತು. ಗಾಂಧಿಯವರು ಕಾಯದೆಭಂಗವನ್ನು ಮಾಡಿ ನಿಮ್ಮ ದೃಷ್ಟಿಯಿಂದ ಅಪರಾಧಿಯಾಗಿದ್ದೇನೆಂದು ಹೇಳಿದರು. ಜಿಲ್ಹಾಧಿಕಾರಿಗೆ ಒಮ್ಮೆಲೆ ಶಿಕ್ಷೆ ಕೊಡುವ ಧೈರ್ಯವಾಗಲಿಲ್ಲ. ಅವನು ಮೇಲಾಧಿಕಾರಿಗಳನ್ನು ಕೇಳಿದನು. ಗಾಂಧಿಯವರಿಗೆ ಶಿಕ್ಷೆ ಕೊಡಬಾರದಾಗಿ ಉತ್ತರ ಬಂದಿತು. ಮತ್ತು ತಮ್ಮ ಅಪಮಾನವನ್ನು ಮುಚ್ಚಿಕೊಳ್ಳುವದಕ್ಕಾಗಿ ಒಂದು ವಿಚಾರಣಾ ಕಮಿಟಿಯು ನಿಯಮಿಸಲ್ಪಟ್ಟಿತು. ಇದರಲ್ಲಿ ಗಾಂಧಿಯವರೂ ಒಬ್ಬ ಸಭಾಸದರಿದ್ದರು. ಕೂಲಿಕಾರರ ಅನಾನುಕೂಲತೆಗಳನ್ನೆಲ್ಲ ವಿಚಾರ ಮಾಡಿ ಗಾಂಧಿಯವರು ಅವರ ಗೋಳನ್ನು ದೂರು ಮಾಡಿದರು.

ಗಾಂಧಿಯವರು **ಖೇಡಾ ಜಿಲ್ಹೆಯ** ರೈತರ ಗೋಳನ್ನು ದೂರ ಮಾಡಿದರು. ಚಂಪಾರಣ್ಯಕ್ಕಿಂತಲೂ ಖೇಡಾದ ಪರಿಸ್ಥಿತಿಯು ಬಿಕ್ಕಟ್ಟಿನದಿತ್ತು. ಜಿಲ್ಹೆಯಲ್ಲಿ ಬರಗಾಲ ಬಿದ್ದಿದ್ದರೂ ಜಿಲ್ಹಾಧಿಕಾರಿಯು ಕರವನ್ನು ತುಂಬಲೇಕೆಂದು ಆಜ್ಞೆಯನ್ನಿತ್ತಿದ್ದನು. ಕೆಳಗಿನ ಅಧಿಕಾರಿಗಳು ಹೊಲ ಮನೆಗಳನ್ನು ಜಪ್ತೀ ಮಾಡಿಯಾದರೂ ವಸೂಲಿಯನ್ನು ಮಾಡಲು ಸಿದ್ಧರಾಗಿದ್ದರು. ಈ ಸಮಯದಲ್ಲಿ ಮಹಾತ್ಮರು ಬಡವರನ್ನು ಬೆನ್ನಿಗೆ ಹಾಕಿಕೊಂಡು ಹೋರಾಟಕ್ಕೆ ಸಿದ್ಧರಾದರು. ಜಿಲ್ಹಾಧಿಕಾರಿಗಳಿಗೆ

ಬರಗಾಲದ ವಿಷಯವಾಗಿ ಬರೆದರು. ಆದರೆ ಉಪಯೋಗವು ಹೇಗಾಗ ಬೇಕು? ಸತ್ಯಾಗ್ರಹವು ಪ್ರಾರಂಭವಾಯಿತು. ಎರಡೂವರೆ ಸಾವಿರ ಅಶಿಕ್ಷಿತರು ಇದರಲ್ಲಿ ಭಾಗ ವಹಿಸಿದರು. ಸತ್ಯಾಗ್ರಹ ಧರ್ಮವನ್ನು ಆಚರಿಸಿದರು ರೈತರ ಹೊಲ ಮನೆಗಳು ಮಾರಲ್ಪಟ್ಟವು. ಆದರೆ ಕೊಳ್ಳು ವವರು ಯಾರೂ ಇಲ್ಲದೆ ಹೋಯಿತು. ಕೊನೆಗೆ ಸರಕಾರವು ಶರಣು ಬರಬೇಕಾಯಿತು. ಇದು ಮಹಾತ್ಮರು ಹಿಂದುಸ್ತಾನದಲ್ಲಿ ಹೊಂದಿದ ಮೂರನೇ ವಿಜಯವು.

ಮಹಾತ್ಮರು ಒಂದು ಕಾರ್ಯವನ್ನು ಮುಗಿಸುವಷ್ಟರಲ್ಲಿಯೇ ಮತ್ತೊಂದು ಸಿದ್ಧವಾಗಿರುತ್ತಿತ್ತು. ಚಂಪಾರಣ್ಯದ ಕಾರ್ಯವು ಮುಗಿ ಯುವಷ್ಟರಲ್ಲಿಯೇ ಅಹಮ್ಮದಾಬಾದದ ಕೂಲಿಕಾರರ ಪ್ರಶ್ನೆಯು ಧುತ್ತೆಂದು ಎದುರಿಗೆ ನಿಂತಿತು. ಕೂಲಿಕಾರರು ಸಂಪು ಹೂಡಿದ್ದರು. ಕೂಲಿಯನ್ನು ಹೆಚ್ಚಿಸುವದೇ ಅವರ ಬೇಡಿಕೆಯಾಗಿದ್ದಿತು. ವಿಚಾರಾಂತ್ಯ ದಲ್ಲಿ ಕೂಲಿಕಾರರ ಪಕ್ಷವು ಸರಿಯಾಗಿ ಕಂಡದ್ದರಿಂದ ಅವರ ಪಕ್ಷವನ್ನು ವಹಿಸಿದರು. ಕೂಲಿಕಾರರೂ ಮಾಲಕರೂ **ಪಂಚಾಯತಿಯಿಂದ** ಬಗೆಹರಿಸಿಕೊಳ್ಳಬೇಕೆಂದು ಪ್ರಯತ್ನಿಸಿದರು. ಆದರೆ ಗಿರಣಿಯ ಒಡೆಯರು ಒಪ್ಪಲಿಲ್ಲ. ಕೂಲಿಕಾರರಿಗೆ ಶಾಂತಿಯಿಂದ ಹರತಾಳವನ್ನಾ ಚರಿಸಲು ಆಜ್ಞೆ ಮಾಡಿದರು. ಈ ಸಮಯದಲ್ಲಿಯೇ ಶಂಕರಲಾಲ ಬ್ಯಾಂಕರ ಮತ್ತು ವಲ್ಲಭಭಾಯಿಯವರ ಪರಿಚಯವಾಯಿತು. ಎರಡು ವಾರಗಳ ವರೆಗೆ ಸಂಪು ಬಾಳಿತು. ಕೆಲವರು ಹೊಟ್ಟೆಗಾಗಿ ಗಿರಣಿಗಳಿಗೆ ಹೋಗಹತ್ತಿದರು. ಹೋಗುವವರಿಗೆ ತೊಂದರೆಯನ್ನುಂಟು ಮಾಡುವ ಪ್ರಯತ್ನಗಳೂ ಆದವು. ಇದನ್ನು ಕಂಡು ಮಹಾತ್ಮರು ದುಃಖಿತರಾಗಿ ಉಪವಾಸವನ್ನು ಕೈಕೊಂಡರು. ಹರತಾಳವು ಪ್ರಾರಂಭವಾಗಿ ೧೮ ದಿವಸಗಳಾಗಿದ್ದವು. ೩ನೇ ದಿವಸ ಮಹಾತ್ಮರ ಬೇಡಿಕೆಯು ಮನ್ನಿಸ ಲ್ಪಟ್ಟು ಪಂಚರ ಮುಖಾಂತರ ಒಪ್ಪಂದದ ಕರಾರುಗಳು ಆದವು. ಅವೇ ಕರಾರುಗಳು ಇನ್ನೂವರೆಗೂ ಪಾಲಿಸಲ್ಪಡುತ್ತಲಿವೆ. ಹೀಗೆ ಮಹಾತ್ಮರ ವಿಜಯಗಳು ಭಾರತೀಯರ ಅಂತಃಕರಣವನ್ನು ಆಕರ್ಷಿಸಿದವು. ಭಾರ ತಕ್ಕೆ ಸತ್ಯಾಗ್ರಹ ವ್ರತವನ್ನು ಉಪದೇಶಿಸುವ ಕಾಲವು ಸಮೀಪಿಸಿತು.

ಈ ಕೆಲಸವು ಮುಗಿಯುವದರಲ್ಲಿಯೇ ಖೇಡಾ ಜಿಲ್ಹೆಯ ರೈತರ ಕೂಗು ಅವರನ್ನು ಖೇಡಾ ಜಿಲ್ಹೆಗೆ ಒಯ್ಯಿತು.

೧೯೧೭ ರಲ್ಲಿ ಬ್ರಿಟಿಶ ಪಾರ್ಲಮೆಂಟಿನಲ್ಲಿ ಹಿಂದುಸ್ಥಾನಕ್ಕೆ ಕ್ರಮೇಣ ಸ್ವರಾಜ್ಯದ ಹಕ್ಕುಗಳನ್ನು ಕೊಡಬೇಕೆಂದು ಗೊತ್ತಾಯಿತು. ಆದರೆ ಇದೇ ಸುಮಾರಿಗೆ **ರೌಲೆಟ್** ಕಾಯಿದೆಯೂ ಪಾಸಾದ್ದರಿಂದ ಮಹಾತ್ಮರು ಇಲ್ಲಿಯ ಸರಕಾರಕ್ಕೂ ಬ್ರಿಟಿಶ ಪಾರ್ಲಿಮೆಂಟಿನವರಿಗೂ ಈ ಕಾಯದೆಯನ್ನು ಹಿಂತೆಗೆದುಕೊಳ್ಳಲು ಕೇಳಿಕೊಂಡರು. ಇದರ ಉಪಯೋಗವು ಏನೂ ಆಗದಹಾಗಾಗಲು ೧೯೧೯ರಲ್ಲಿ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಅದರ ಕೊನೆಯು ಪಂಜಾಬದ ಅತ್ಯಾಚಾರದಲ್ಲಿ ಕೊನೆಗಂಡಿತು. ಪಂಜಾಬದ ಕೊನೆಯ ಪರಿಮಾರ್ಜನೆಗಾಗಿಯೂ, ಖಿಲಾಫತ್ತಿನ ಅನ್ಯಾಯಕ್ಕಾಗಿಯೂ **ಅಸಹಕಾರ ಯುದ್ಧವನ್ನು ಹೂಡಿದರು.** ೧೯೨೧ನೇ ಇಸ್ವಿಯೆಂದರೆ, ಮಹಾತ್ಮರು ಅಸಹಕಾರ ಯುದ್ಧವನ್ನು ಸಾಗಿಸಿದ ಸತ್ಯಯುಗದ ಪ್ರಾರಂಭವೆಂದೇ ಹೇಳಬಹುದು. ಭಾರತದಲ್ಲಿ ಈ ದಿವ್ಯಮಂತ್ರದಿಂದ ದಿವ್ಯ ಶಕ್ತಿಯ ಸಂಚಾರವಾಯಿತು. ಆತ್ಮಿಕ ತೇಜವು ಜಗತ್ತಿನ ಕಣ್ಣನ್ನೇ ಕುಕ್ಕಿಸಿತು. ಸಾವಿರಾರು ವಕೀಲರು ವಕೀಲಿಗೆ ಶರಣುಕೊಡೆದು ದೇಶಸೇವಾ ವ್ರತಬದ್ಧರಾದರು. ಸಾವಿರಾರು ವಿದ್ಯಾರ್ಥಿಗಳು ಶಾಲೆ ಕಾಲೇಜುಗಳಿಗೆ ಬಹಿಷ್ಕಾರವನ್ನು ಹಾಕಿದರು. ಮದಿರಾ ದೇವಿಯು ಬಂಧಿಸಲ್ಪಡಹತ್ತಿದಳು. ಶುಭ್ರವಾದ ಖಾದಿಯು ಅಂತಃಕರಣವನ್ನು ಪವಿತ್ರ ಮಾಡತೊಡಗಿತು. ಹಳ್ಳಿ ಹಳ್ಳಿಗಳಿಗೂ ಚರಖಾಗಳು ತಿರುಗಹತ್ತಿದವು. ರಾಷ್ಟ್ರದ ಕೂಗು ಭಾರತದ ದಿಗಂತವನ್ನೆಲ್ಲ ತುಂಬಿ, ಜಗತ್ತನ್ನೇ ವ್ಯಾಪಿಸಿತು. ಒಂದೇ ವರ್ಷದಲ್ಲಿ ಸ್ವರಾಜ್ಯವೆಂಬ ಮೋಹಿನಿಯಿಂದ ಭಾರತವೇ ಮರುಳಾಗಿ ಹೋಯಿತು. ಆ ಕಾಲದ ಉತ್ಸಾಹಕ್ಕೆ ಎಣೆಯೇ ಇಲ್ಲ. ಗಿಡಗಂಟಿಗಳೂ ಕೂಡ ಸ್ವರಾಜ್ಯ, ಸ್ವರಾಜ್ಯವೆನ್ನುತ್ತಿದ್ದವು. ಸ್ವರಾಜ್ಯಕ್ಕಾಗಿ ಚಿನ್ನದ ಮಳೆಗರೆದರು. ಒಂದು ಕೋಟಿ ರೂಪಾಯಿಗಳು ಹಾ ಹಾ ಅನ್ನುವದರಲ್ಲಿ ಕೂಡಿದವು. **ಬ್ರಿಟಿಶರ ರಾಜ್ಯದಲ್ಲಿ ನಾವಿರುವೆವೇ** ಎಂಬ ಸ್ವಾತಂತ್ರ್ಯದ ಭಾವನೆಯು

ತರುಣರಲ್ಲಿ ಕ್ಷಣಹೊತ್ತು ಹಾರಿತ್ತು. ಮೊದಲು ಮೊದಲು ಸರಕಾರವು ಇದರಿಂದ ಏನೂ ಆಗುವುದಿಲ್ಲೆಂದು ತಿಳಿದಿತ್ತು. ಆದರೆ ಮಹಾತ್ಮರ ಪ್ರಚಂಡವಾದ ಅಸಹಕಾರದ ಝುಂಝಾವಾತದಿಂದ ಬ್ರಿಟಿಶ ರಾಜ್ಯದ ಬೇರುಗಳು ಕತ್ತರಿಸಿ ರಾಜ್ಯವು ಅಲ್ಲಾಡಹತ್ತಿತು. ಸರಕಾರವು ಇಷ್ಟ ಬಲಿಯುಗೊಟ್ಟದ್ದು ಬುದ್ಧಿಗೇಡಿತನವಾಯಿತೆಂದು ದಬ್ಬಾಳಿಕೆಗೆ ಆರಂಭ ಮಾಡಿ ಮುಖಂಡರನ್ನೆಲ್ಲ ಸೆರೆಮನೆಗೆ ಅಟ್ಟಿತು. ಆದರೂ ಮಹಾತ್ಮರು ಮುಂದೆಯೇ ಸಾಗಿದರು. ಅಹಮ್ಮದಾಬಾದ ಕಾಂಗ್ರೆಸ್ಸಿನಲ್ಲಿ ಸರ್ವಾಧಿಕಾರಿಗಳಾಗಿ ನಿಯಮಿಸಲ್ಪಟ್ಟರು. ಬಾರ್ಡೋಲಿಯ ರಣಭೂಮಿಯು ಸಿದ್ಧವಾಯಿತು. ಆದರೆ ಭಾರತದ ದುರ್ಭಾಗ್ಯದಿಂದ **ಚೌರಾಚೌರಿಯಲ್ಲಿ** ದಂಗೆಯಾಗಿ ಕಾಯದೇ ಭಂಗವು ನಿಲ್ಲಿಸಲ್ಪಟ್ಟಿತು. ರಾಷ್ಟ್ರದಲ್ಲಿ ವಿಧಾಯಕ ಕಾರ್ಯಕ್ರಮವು ಪ್ರಾರಂಭಿಸಲ್ಪಟ್ಟಿತು. ೧೯೨೨ನೇ ಮಾರ್ಚ ೧೦ನೇ ತಾರೀಖಿಗೆ ಮಹಾತ್ಮರು ಹಿಡಿಯಲ್ಪಟ್ಟರು. ರಾಜದ್ರೋಹದ ಖಟ್ಲೆಯಾಗಿ, ೬ ವರ್ಷದ ಶಿಕ್ಷೆಯಾಯಿತು. ಆದರೆ ಅವರಿಗೆ **ಕರುಳಿನ ರೋಗ**ವಾದ್ದರಿಂದ ಅವರನ್ನು ಸರಕಾರವು ಹೊರಕ್ಕೆ ಹಾಕಿತು. ಆಪರೇಶನ್ ಆಯಿತು. ಮಹಾತ್ಮರು ಈ ಕುತ್ತಿನಿಂದ ಪಾರಾದರು. ದೇಶದ ಪರಿಸ್ಥಿತಿಯು ಪಲ್ಲಟವಾಗಿತ್ತು.

ಗಾಂಧಿಯವರು ಮತ್ತೆ ರಾಷ್ಟ್ರದಲ್ಲಿ ಶಕ್ತಿಯನ್ನುಂಟುಮಾಡಲು ವಿಧಾಯಕ ಕಾರ್ಯಕ್ರಮಕ್ಕೆ ಕೈಹಾಕಿದರು. ೧೯೨೪ರ ಕರ್ನಾಟಕದ ಕಾಂಗ್ರೆಸ್ಸಿಗೆ ಅವರೇ ಅಧ್ಯಕ್ಷರಾದರು. ತಮ್ಮ ಭಾಷಣದಲ್ಲಿ ಅಸಹಕಾರದ ಮೇಲೆಯೇ ತಮ್ಮ ಶ್ರದ್ಧೆಯು ಅಚಲವಾಗಿರುವದೆಂದು ಸಾರಿದರು. ರಾಷ್ಟ್ರದ ಪರಿಸ್ಥಿತಿಯು ಹಿಡಿತದಲ್ಲಿ ಬರುವವರೆಗೆ ವಿಧಾಯಕ ಕಾರ್ಯಕ್ರಮದಲ್ಲಿಯೇ ಮಗ್ನರಾಗಬೇಕೆಂದು ತಮ್ಮ ಅನುಯಾಯಿಗಳಿಗೆ ಉಪದೇಶವನ್ನಿತ್ತು ಕಾಂಗ್ರೆಸ್ಸಿನಿಂದ ಸರಿದು ನಿಂತರು. ಆದರೆ ಕಾಂಗ್ರೆಸ್ಸು ಅವರ ದಾರಿಯನ್ನು ಹಿಡಿಯದಂತೆ, ಸೂಕ್ತ ಸಲಹೆಗಳನ್ನು ಕೊಡುತ್ತ ಮುಂದೆ ಸಾಗಿದರು. ಮತ್ತೆ ಸಮಯವು ಬಂದೊದಗಿತು. ೧೯೨೯ನೇ ಇಸ್ವಿಯಲ್ಲಿ ಸಂಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಯು

ಸ್ವೀಕೃತವಾಯಿತು. ಕಾಯದೆಭಂಗವು ಸಾರಲ್ಪಟ್ಟಿತು. ಗಾಂಧಿಯವರೇ ಸರ್ವಾಧಿಕಾರಿಗಳಾದರು. ರಾಷ್ಟ್ರದಲ್ಲಿ ಸ್ವಾಭಿಮಾನದ ಸ್ವಾರ್ಥತ್ಯಾಗದ ಕೋಲುಮಿಂಚು ಹೊಡೆದಂತಾಯಿತು. **ಜಗಪ್ರಸಿದ್ಧವಾದ ದಾಂಡಿ ಮಾರ್ಚಿನಿಂದ ಕಾಯದೇಭಂಗದ ಚಳವಳಿಯು ಪ್ರಾರಂಭ ವಾಯಿತು**. ಆ ಸೇತು ಹಿಮಾಚಲದವರೆಗೆ, ಉಪ್ಪಿನ ಕಾಯದೆಭಂಗವು ಮಾಡಲ್ಪಟ್ಟಿತು. ಸಾವಿರಾರು ತರುಣರು ಸತ್ಯಾಗ್ರಹಕ್ಕೆ ಬಂದು ಕೂಡಿದರು. ಯುವತಿಯರೂ ಮುದಕಿಯರೂ ನಾಮುಂದೆ ನೀಮುಂದೆ ಎಂದು ಸತ್ಯಾಗ್ರಹಕ್ಕೆ ಮುಂದೆ ಬಂದರು. ಬ್ರಿಟಿಶರಾಜ್ಯವು ನಷ್ಟವಾಗಿದೆ ಎಂಬ ಭಾವನೆಯು ನಭೋಮಂಡಲದಲ್ಲಿ ಸುಳಿದಾಡಹತ್ತಿತು. ಸರಕಾರವು ದಬ್ಬಾಳಿಕೆಯನ್ನು ನಡೆಯಿಸಿದಂತೆ, ವ್ಯಸ್ತಪ್ರಮಾಣದಿಂದ ಚಳವಳಿಯು ಬೆಳೆಯತೊಡಗಿತು. ಮಹಾತ್ಮರು ಸೆರೆಹಿಡಿಯಲ್ಪಟ್ಟರು. ಮುಖಂಡರು ಹಿಡಿಯಲ್ಪಟ್ಟರು. ಕಾಂಗ್ರೆಸ ಕಮೀಟಿಗಳು ಅಕ್ರಮಕೂಟಗಳೆಂದು, ನಿರ್ಣಯಿಸಲ್ಪಟ್ಟವು. ಸೆರೆಮನೆಗಳು ತುಂಬಿದವು. ಆದರೂ ಚಳವಳಿಯೇ ನಿಲ್ಲಲಿಲ್ಲ. ಕೊನೆಗೆ ಸರಕಾರವು ಶರಣುಹೊಡೆದು ಒಪ್ಪಂದಮಾಡಿಕೊಳ್ಳ ಬೇಕಾಯಿತು. ಮಹಾತ್ಮರನ್ನು ಜೇಲಿನಿಂದ ಬಿಟ್ಟು ಒಪ್ಪಂದವನ್ನು ಮಾಡಿಕೊಂಡಿತು. '**ಗಾಂಧಿಅಯರ್ವಿನ ಪ್ಯಾಕ್ಟ**' ಎಂಬ ಹೆಸರಿನಿಂದ ಈ ಒಪ್ಪಂದವು ಪ್ರಸಿದ್ಧವಿದೆ. ಒಪ್ಪಂದದಂತೆ ಕಾಯದೇಭಂಗವು ನಿಲ್ಲಿಸಲ್ಪಟ್ಟಿತು. ಇದರಿಂದ ಕಾಂಗ್ರೆಸ್ಸಿನ ಯೋಗ್ಯತೆಯು ಬೆಳೆಯಿತು. ಭಾರತೀಯರಲ್ಲಿ ಆತ್ಮವಿಶ್ವಾಸ ಉಂಟಾಯಿತು. ಬ್ರಿಟಿಶ ಜನಾಂಗಕ್ಕೆ ಮಾತ್ರ ಅತ್ಯಂತ ಅಪಮಾನವಾಯಿತು.

ಭಾರತದ ಏಕಮೇವಾದ್ವಿತೀಯ ಪ್ರತಿನಿಧಿಗಳೆಂದು ಮಹಾತ್ಮರು ದುಂಡುಮೇಜಿನ ಪರಿಷತ್ತಿಗೆ ಹೋದರು. ಕಾಂಗ್ರೆಸ್ಸಿನ ಬೇಡಿಕೆಯನ್ನು ಸ್ಪಷ್ಟವಾಗಿ ಮಂಡಿಸಿದರು. ಪರಿಷತ್ತಿನ ಪ್ರಯೋಜನವು ಏನೂ ಆಗುವದಿಲ್ಲೆಂದು ಸಾರಿ ಮರಳಿಬರುವಷ್ಟರಲ್ಲಿ ಸರಕಾರವು ಒಪ್ಪಂದವನ್ನು ಮರೆತು ದಬ್ಬಾಳಿಕೆಯನ್ನು ಪ್ರಾರಂಭಿಸಿತ್ತು. ಮಹಾತ್ಮರು ಇದೆಲ್ಲವನ್ನು ಸರಿಪಡಿಸಲು ಕೇಳಿಕೊಂಡರು. ಆದರೆ ಅದರ ಉಪಯೋಗವೇನೂ ಆಗದೆ

ರಾಷ್ಟ್ರವು ಮತ್ತೆ ೧೯೩೨ರಲ್ಲಿ ಸತ್ಯಾಗ್ರಹವನ್ನು ಸಾರಿತು. ಈ ಸಮರವು ೩೪ರವರೆಗೆ ನಡೆದು ಸದ್ಯಕ್ಕೆ ನಿಲ್ಲಿಸಲ್ಪಟ್ಟಿದೆ. ಇನ್ನೂ ಸ್ವಾತಂತ್ರ್ಯದ ಹೋರಾಟವು ನಡೆದೇ ಇದೆ.

ಗಾಂಧಿಯವರು ಜೇಲಿನಲ್ಲಿರುವಾಗ ಹರಿಜನರ ಹಕ್ಕುಗಳಿಗಾಗಿ, ತಮ್ಮ ಜೀವವನ್ನೆ ಪಣಕ್ಕೆಹಚ್ಚಿ ತಮ್ಮ ಬೇಡಿಕೆಯನ್ನು ಪೂರ್ಣ ಮಾಡಿ ಕೊಂಡರು. ಇಂದು ಹರಿಜನ ಚಳವಳಿಯು ಮಹಾತ್ಮರ ಪುಣ್ಯದಿಂದ ವಿಶ್ವರೂಪವನ್ನು ಧಾರಣಮಾಡಿದೆ. ಮಹಾತ್ಮರು ರಾಷ್ಟ್ರದಲ್ಲಿ ಶಕ್ತಿ ಸಾಮರ್ಥ್ಯಗಳು ಉಂಟಾಗುವ ಉದ್ದೇಶದಿಂದ ಗ್ರಾಮೋದ್ಯೋಗ ಮೊದ ಲಾದ ರಾಷ್ಟ್ರ ನಿರ್ಮಾಣದ ರಚನಾತ್ಮಕ ಕಾರ್ಯಕ್ಕೆ ಕೈಹಾಕಿ ಯತ್ನಿ ಸುತ್ತಲಿದ್ದಾರೆ. ಸ್ವಾತಂತ್ರ್ಯ ಸಮರವನ್ನು ನಿರೀಕ್ಷಿಸುತ್ತಲಿದ್ದಾರೆ. ಜಗತ್ತಿನಲ್ಲಿ ಶಾಂತತೆಯಾಗಿ, ಪ್ರೇಮಸಾಮ್ರಾಜ್ಯವೇ ಎಲ್ಲೆಲ್ಲಿಯೂ ನೆಲೆಗೊಳ್ಳಲೆಂದು ತಮ್ಮ ಪ್ರಾಣವನ್ನೂ ಅದರಲ್ಲಿರುವ ಎಲ್ಲ ಶಕ್ತಿಯನ್ನೂ ವೆಚ್ಚಮಾಡುವ ಮಹಾತ್ಮರಿಗೆ, ಆಯುರಾರೋಗ್ಯವನ್ನು ಬಯಸುವ ದೆಂದರೂ ಒಂದೇ, ದ್ವೇಷದಿಂದ ತುಂಬಿದ ಈ ಜಗತ್ತಿನಲ್ಲಿ ಪ್ರೇಮವೇ ಸದೈವ ತುಂಬಿತುಳುಕಲೆಂದರೂ ಒಂದೇ. ಸತ್ಯ, ಅಹಿಂಸಾ, ಜ್ಞಾನ, ಪ್ರೇಮ, ವಿಶ್ವಸಂಗ್ರಹ, ಬ್ರಹ್ಮಚರ್ಯ, ದಯೆ, ಧೈರ್ಯ ಮುಂತಾದ ದೈವೀಗುಣಗಳ ಪುಣ್ಯಮೂರ್ತಿಯೇ ಮಹಾತ್ಮಾ ಗಾಂಧಿಯವರು.

———

# ಗಾಂಧಿಯವರ ಧಾರ್ಮಿಕ ಜೀವನದ ಮೂಲ ಬೇರುಗಳು

ಮಹಾತ್ಮರು ವಿಶ್ವವಿಭೂತಿಯೆಂದು ಮೊದಲೇ ಹೇಳಿದ್ದೇವೆ. ಸದ್ಯಕ್ಕೆ ಜಗತ್ತಿನಲ್ಲಿರುವ ಎಲ್ಲ ಪಂಡಿತರು ಮಹಾತ್ಮರನ್ನು ಕ್ರೈಸ್ತನಿಗಾಗಲೀ ಬುದ್ಧದೇವನಿಗಾಗಲೀ ಹೋಲಿಸುವರು. ನಮ್ಮ ಪುರಾಣಗಳಲ್ಲಿ ಮಹಾತ್ಮರನ್ನು ಅಜಾತಶತ್ರುವಾದ ಧರ್ಮರಾಜನಿಗೆ ಹೋಲಿಸಬಹುದು. ಮಹಾಭಾರತದ ಯುದ್ಧದಲ್ಲಿ ಧರ್ಮರಾಜನಾದರೂ ಎಷ್ಟೋ ಜನರನ್ನು ಕೊಂದಿರಬಹುದು. ಆದರೆ ಮಹಾತ್ಮರು ಎಂಥ ಯುದ್ಧವನ್ನಾಡಿದರೂ ತಮ್ಮ ದೇಹತ್ಯಾಗ ಮಾಡುವರೇ ಹೊರತು ಅವರು ಯಾರ ಮೇಲಾದರೂ ಕೈ ಎತ್ತಬಹುದೆಂಬ ಸಂದೇಹವೇ ಬರುವಹಾಗಿಲ್ಲ. ಕ್ರೈಸ್ತ ಮತ್ತು ಬುದ್ಧ ಎಂಥ ವಿಭೂತಿಗಳು! ಈ ಐವತ್ತು ವರುಷಗಳ ಹಿಂದೆ ವಿಶ್ವವಿಭೂತಿಗಳೆಂದರೆ ಇವರಿಬ್ಬರೇ ಆಗಿದ್ದರು. ಸದ್ಯಕ್ಕೆ ಈ ಗಂಗೆ ಯಮುನೆಯ ಸಂಗಮಕ್ಕೆ ಸರಸ್ವತಿಯೂ ಕೂಡುವಂತೆ ಜಗತ್ತಿನ ಕಲ್ಯಾಣಕ್ಕಾಗಿ ಈ ಎರಡೂ ಹೆಸರಿನಲ್ಲಿ ಗಾಂಧಿ ಎಂಬ ಇನ್ನೊಂದು ಹೆಸರು ಕೂಡಿ ಹೋಗಿದೆ. ಸದ್ಯಕ್ಕಿರುವ, ಹಿಂದಾಗಿ ಹೋಗಿರುವ, ಮುಂದೆ.... (ಯಾರಿಗೆ ಗೊತ್ತು?) ವಿಶ್ವವಿಭೂತಿಗಳಲ್ಲಿ ಗಾಂಧಿಯವರೇ ಶ್ರೇಷ್ಠರು. ಕ್ರಿಸ್ತನ ವೇಳೆಗೆ ಹಿಂದುಸ್ಥಾನದ ಜ್ಞಾನವಿರಲಿಲ್ಲ. ಬುದ್ಧನ ವೇಳೆಗೆ ಯುರೋಪದ ಜ್ಞಾನವಿರಲಿಲ್ಲ. ಅವರು ತಮ್ಮ ತಮ್ಮ ದೇಶಗಳಲ್ಲಿಯಷ್ಟೇ ಅಹಿಂಸಾತ್ಮಕ ಪ್ರೇಮ ಧರ್ಮವನ್ನು ನೆಲೆಗೊಳಿಸಿ ಐಕ್ಯವನ್ನುಂಟುಮಾಡಿದರು. ಆದರೆ ಗಾಂಧಿಯವರು ಇಡೀ ವಿಶ್ವವನ್ನೇ ಜ್ಞಾನಪೂರ್ವಕವಾಗಿ ಸಂಗ್ರಹವನ್ನು ಮಾಡಲೆತ್ನಿಸುತ್ತಿರುವರೆಂಬುದನ್ನು ನೋಡಿದರೆ ಗಾಂಧಿಯವರ ಶ್ರೇಷ್ಠತೆಯು ತಾನೇ ಕಂಡುಬರುವದು.

ಮಹಾತ್ಮಾ ಗಾಂಧಿಯವರು ಸತ್ಯಾಗ್ರಹ ಧರ್ಮದ ಆಚಾರ್ಯರೆಂದು ಹೇಳಬಹುದು. ಇವರ ಚರಿತ್ರದಲ್ಲಿ ಮೂರು ಭಾಗಗಳನ್ನು ಮಾಡಬಹುದು. ಮೊದಲನೆಯದು ೧೮೬೯ರಿಂದ ೧೮೯೩ರ ವರೆಗೆ. ಎರಡನೆಯದು

೧೯೧೪ರಿಂದ ೧೯೧೪ರ ವರೆಗೆ. ಮೂರನೆಯದು ೧೯೧೯ರಿಂದ ಇಲ್ಲಿಯ ವರೆಗೆ. ಮೊದಲನೆಯದರಲ್ಲಿ ಸತ್ಯಾಗ್ರಹ ಧರ್ಮದ ಅಧ್ಯಯನ ಮತ್ತು ಪ್ರತಿಷ್ಠಾಪನವಾಯಿತು. ಎರಡನೆಯ ಭಾಗದಲ್ಲಿ ಸ್ವಲ್ಪೇ ಪ್ರದೇಶದಲ್ಲಿ ಅದರ ಪ್ರಯೋಗವಾಯಿತು. ಮೂರನೆಯದರಲ್ಲಿ ಇಡೀ ವಿಶ್ವಕ್ಕೇನೇ ಇದರ ಪ್ರಯೋಗವಾಗುತ್ತಿರುವದು ಕಂಡು ಬರುತ್ತಿದೆ.

೧೮೬೯ರಿಂದ ೧೮೯೩ರಲ್ಲಿಯ ಮಹಾತ್ಮರ ಚರಿತ್ರದ ಮೊದಲನೆಯ ಭಾಗದಲ್ಲಿ ಸತ್ಯಾಗ್ರಹಧರ್ಮದ ಬೀಜವು ಅವರ ಹುಲಸಾದ ಹೃದಯ ದಲ್ಲಿ ಬಿತ್ತಲ್ಪಟ್ಟಿತೆಂದು ಹೇಳಬಹುದು. ಮಹಾತ್ಮರ ತಾಯಿಯವರು ದೇವರಲ್ಲಿ ಭಕ್ತಿಯುಳ್ಳವರಾದ್ದರಿಂದ ಸ್ವಾಭಾವಿಕವಾಗಿ ಅವರ ಮಕ್ಕಳೂ ಭಗವದ್ಭಕ್ತರೇ ಆಗಿರುವದು ಸಾಹಜಿಕವಾಗಿದೆ. ಗಾಂಧಿಯವರು ಉಪ ವಾಸ ವ್ರತದ ಪ್ರಾಯಶ್ಚಿತ್ತವನ್ನು ತಮ್ಮ ತಾಯಿಯಿಂದಲೇ ಕಲಿತು ಕೊಂಡರೆಂಬೆನ್ನಲಿಕ್ಕೆ ಏನೂ ಸಂಶಯವಿಲ್ಲ. ನೈತಿಕ ಬೆಳವಣಿಗೆಗೆ ಕಾರಣ ರಾದವರು ಇವರ ತಾಯಿಯವರೇ. ಇಂಗ್ಲಂಡಕ್ಕೆ ಮೋಹನದಾಸರು ಹೊರಡುವಾಗ ಮದ್ಯ, ಮಾಂಸ ಮತ್ತು ಮಹಿಳೆಯರು ಬರ್ಜಣವೆಂಬ ಪಥ್ಯವನ್ನು ಜೈನಸನ್ಯಾಸಿಯಿಂದ ಹೇಳಿಸಿ ಆಣೆಯನ್ನು ತೆಗೆದುಕೊಳ್ಳಲು ಹಚ್ಚಿದವಳು ತಾಯಿಯೇ. ಆದ್ದರಿಂದ ಆಕೆಯೇ ಬಾಲ ಮೋಹನನ ಮನಸ್ಸಿನಲ್ಲಿ ನೀತಿಧರ್ಮದ ಬೀಜವನ್ನೂ ಬಿತ್ತಿದಂತಾಯಿತು. ಈ ಪ್ರಕಾರ ವಾಗಿ ಎಷ್ಟು ಮಂದಿ ತಾಯಂದಿರು ತಮ್ಮ ಮಕ್ಕಳಿಗೆ ಹೇಳುವದಿಲ್ಲ? ಎಷ್ಟು ಮಂದಿ ಹೇಳಿದಂತೆ ಕೇಳುವರು? ಮೋಹನದಾಸರಲ್ಲಿ ಮಾತ್ರ ಸತ್ಯದ ಅಂಕುರವನ್ನು ನಿಸರ್ಗದೇವತೆಯೇ ಹಚ್ಚಿದಳು. ಒಂದು ಸಾರೆ ತಂದೆಯ ಅಪ್ಪಣೆಯ ಮೇರೆಗೆ ಹರಿಶ್ಚಂದ್ರ ನಾಟಕವನ್ನು ನೋಡಲು ಹೋಗಿದ್ದರು. ಅವರ ಮನಸ್ಸಿನ ಮೇಲೆ ಸತ್ಯದ ಪ್ರಭಾವವು ಒಡಮೂಡಿ ಪುನಃ ಪುನಃ ನಾಟಕ ನೋಡುವ ಮನಸ್ಸುಂಟಾಗಿ, ಹಣದ ಅಭಾವದ ಮೂಲಕ ಅವರು ಅದೇ ನಾಟಕವನ್ನು ತಮ್ಮ ಮನಸ್ಸಿನಲ್ಲಿಯೇ ಎಷ್ಟೋ ಸಾರೆ ನೋಡಿದರು. ಹರಿಶ್ಚಂದ್ರನ ಕನಸನ್ನೂ ಕಂಡರು. ಹರಿಶ್ಚಂದ್ರನಂತೆ ಎಲ್ಲರೂ ಸತ್ಯವಾದಿಗಳೇಕೆ ಆಗಬಾರದೆಂಬುದೇ ಅವರ ಮನಸ್ಸಿನಲ್ಲಿ ಸಟ್ಟ

ಬೀಜವು. ಹರಿಶ್ಚಂದ್ರನಂತೆ ಕಷ್ಟಗಳನ್ನು ಅನುಭವಿಸುವದೂ ಮತ್ತು ಸತ್ಯದಪ್ರತಿಪಾಲನೆಯೇ ನಿಜವಾದ ಸತ್ಯವಿರುತ್ತದೆಂದು ಅವರ ಅಂತಃಕರಣ ದಲ್ಲಿ ಬೇರೂರಿತು. ಹರಿಶ್ಚಂದ್ರನಂತೇಕಾಗಬಾರದೆಂಬ ಪ್ರೇರಣೆಯೇ ಇಂದು ಜಗತ್ತಿನೆದುರಿಗೆ ಅವರನ್ನು ದಿವ್ಯರೂಪದಲ್ಲಿ ಕಾಣಿಸತೊಡಗಲು ಹಚ್ಚಿದೆ.

ಮೋಹನದಾಸರು ಚಿಕ್ಕಂದಿನಲ್ಲಿ ಮಾಂಸಾಹಾರವೇ ಪೌರುಷ್ಯದ ಕಾರಣವೆಂದೆಣಿಸಿ ಒಬ್ಬ ಮುಸಲ್ಮಾನ ಸಹಾಧ್ಯಾಯಿಯ ಸಹಾಯದಿಂದ ಕುರಿಯ ಮಾಂಸದ ಅಡಿಗೆಯನ್ನು ಮಾಡಿಸಿ ಹೊಟ್ಟೆತುಂಬ ಊಟಮಾಡು ತ್ತಿದ್ದರು. ಇದು ಮಧ್ಯಾಹ್ನ ೪–೫ ಗಂಟೆಗೆ ಆಗುತ್ತಿದ್ದುದರಿಂದ ಮೋಹನ ದಾಸರಿಗೆ ಸಂಜೆಗೆ ಹಸಿವೆಯಾಗುತ್ತಿರಲಿಲ್ಲ. ಆದ್ದರಿಂದ ಮನೆಯಲ್ಲಿ ನನಗೆ ಇವತ್ತು ಹಸಿವೆಯಿಲ್ಲೆಂದು ಸುಳ್ಳುಹೇಳಬೇಕಾಗುತ್ತಿತ್ತು. ಮಾಂಸಾ ಹಾರದಲ್ಲಿ ದೋಷವನ್ನು ಕಾಣದ ಮೋಹನದಾಸನು ಸುಳ್ಳಿಗೆ ಹೆದರಿದನು. ಮನೆಯಲ್ಲಿ ತಾಯಿಯ ಮುಂದೆ ಸುಳ್ಳುಹೇಳಲಾರದೆ ಮಾಂಸಾಹಾರ ವನ್ನು ಬಿಟ್ಟುಕೊಟ್ಟನು. ಸ್ವಾಭಾವಿಕವಾಗಿ ದೇವರು ಮೋಹನದಾಸ ರಲ್ಲಿ ಸತ್ಯದ ಸಸಿಯನ್ನು ನೆಲಿಸದಿದ್ದರೆ ಮೋಹನದಾಸರು ಮಹಾತ್ಮ ರಾಗುತ್ತಲೇ ಇರಲಿಲ್ಲ.

ಚಿಕ್ಕಂದಿನಿಂದಲೇ ಮಹಾತ್ಮರು ಸತ್ಯಮಾರ್ಗಾವಲಂಬಿಗಳಾದ್ದ ರಿಂದ ಇವರ ಹೃದಯದಲ್ಲಿ ಉದಾರತೆಯು ಹೆಚ್ಚಿತ್ತು. ಇವರ ಸಾಕು ತಾಯಿಯು ಇವರಿಗೆ ರಾಮನಾಮದಿಂದ ಅಮೋಘವಾದ ಶಕ್ತಿಯು ಬರುತ್ತದೆಂದು ಚಿಕ್ಕ ವಯಸ್ಸಿನಲ್ಲಿಯೇ ತಿಳಿಸಿ ಕೊಟ್ಟಿದ್ದಳು. ಇದಲ್ಲದೆ ಇವರ ಅಣ್ಣಂದಿರ ಹೇಳಿಕೆಯಂತೆ ರಾಮರಕ್ಷೆ ಮಂತ್ರವನ್ನು ಪಾಠಮಾಡಿ ದ್ದರು. ಇವರಿಗೆ ಧರ್ಮದ ಮೇಲೆ ವಿಶ್ವಾಸವಿಲ್ಲದಿದ್ದರೂ ಈ ಮಾತಿನ ಸಂಸ್ಕಾರಗಳು ಮಾತ್ರ ಹೃದಯದ ಮೇಲೆ ಮೂಡಿದ್ದವು. ಇವರು ವೈಷ್ಣವರಾದ್ದರಿಂದ ಇವರ ಮನೆಯವರು ರಾಮದೇವರ ಗುಡಿ ಮೊದ ಲಾದವುಗಳಿಗೆ ಹೋಗುತ್ತಿದ್ದರು. ಸಂಪ್ರದಾಯದ ಸಂಕುಚಿತಭಾವವು ಇವರಲ್ಲಿದ್ದಿಲ್ಲ. ಇವರ ತಂದೆಯವರ ಹತ್ತಿರ ಜೈನಧರ್ಮದ ಆಚಾರ್ಯರೂ

ಮುಸಲ್ಮಾನ ಮಿತ್ರರೂ ಬಂದು ತಮ್ಮ ಧರ್ಮದ ಬಗ್ಗೆ ಚರ್ಚೆಮಾಡು ತ್ತಿದ್ದುದರಿಂದ ಬಾಲ ಮೋಹನದಾಸರ ಹೃದಯದ ಮೇಲೆ ಸಮಭಾವವು ಮೂಡಿತ್ತು. ಜಗತ್ತು ನೀತಿಯನ್ನೇ ಅವಲಂಬಿಸಿದೆ. ಎಲ್ಲ ಪ್ರಕಾರದ ನೀತಿಯಸಾರವು ಸತ್ಯವೆ ಇದೆಯೆಂಬ ಮಾತನ್ನು ಸ್ಪಷ್ಟವಾಗಿ ತಮ್ಮ ಮನಸ್ಸಿನಲ್ಲಿ ಇಟ್ಟುಕೊಂಡರು. ಇದರಿಂದ ಅವರಲ್ಲಿ ಅಹಿಂಸಾಭಾವದ ಜನ್ಮವೂ ಮತ್ತು ವಿಕಾಸವೂ ಆಯಿತು. ಅಪಕಾರಕ್ಕೆ ಬದಲಾಗಿ ಉಪ ಕಾರವೇ ಹೆಚ್ಚಿನದೆಂಬುದು ಧೃಡವಾಗಿ ಅವರ ಮನಸ್ಸಿನಲ್ಲಿ ಕೂತಿತು.

ಇಂಗ್ಲಂಡಕ್ಕೆ ಹೋದಕೂಡಲೇ ಇಂಗ್ಲೀಷ ಪದ್ಧತಿಯಂತೆ ಉಡುವು ತೊಡುವುಗಳನ್ನು ಧರಿಸಿ ಇಂಗ್ಲೀಷ ಸದ್ಗೃಹಸ್ಥನಂತೆ ( Gentleman ) ಆಗುವದು ಎಲ್ಲ ಹಿಂದೀ ವಿದ್ಯಾರ್ಥಿಗಳ ಗುರಿಯಾಗಿರುತ್ತಿತ್ತು. ಮೋಹನ ದಾಸನಿಗೂ ಒಬ್ಬ ಗೆಳೆಯನು ಭೆಟ್ಟಿಯಾದನು. ಇಂಗ್ಲೀಷ ಸಮಾಜದಲ್ಲಿ ಹೇಗೆ ನಡೆಯಬೇಕು ಹೇಗೆ ಮಾತಾಡಬೇಕು ಹೇಗೆ ಊಟಮಾಡಬೇಕು ಮುಂತಾದ ವಿಷಯಗಳನ್ನು ಆತನು ಕಲಿಸಹತ್ತಿದನು. ಒಂದು ದಿನ ಇಂಗ್ಲೀಷ ಗೆಳೆಯರ ಸಂಗಡ ಇವರಿಬ್ಬರೂ ಊಟಕ್ಕೆ ಕುಳಿತಾಗ ಮಾಂಸದ ಸಾರು ಬಡಿಸಿದ್ದರು. ಮೋಹನದಾಸನು ದೇವರನ್ನು ಸ್ಮರಿಸಿ ದೇವತಾಸ್ವರೂಪಿಯಾದ ತಾಯಿಯ ಮುಂದೆ ಮಾಂಸವನ್ನು ಮುಟ್ಟುವ ದಿಲ್ಲೆಂದು ಆಣೆಯನ್ನು ಮಾಡಿದ್ದನು. ಗೆಳೆಯರು ಊಟಕ್ಕೆ ಕುಳಿತಾಗ ನನಗೆ ಅದು ಬೇಡ, ಇದು ಬೇಡವೆಂದು ಅಂದರೆ ಇಂಗ್ಲೀಷ ಜನರ— ಸಮಾಜದ ಆಚಾರದ ಭಂಗವಾಗುವದು. ಮಾಂಸದ ಆಹಾರವನ್ನು ತೆಗೆದುಕೊಂಡರೆ ತಾಯಿಯ ಕೊಲೆಯನ್ನೂ ಸತ್ಯದ ಕೊಲೆಯನ್ನೂ ಮಾಡಿದಂತಾಗುವದು. ಸತ್ಯಭಂಗವೊ ? ಆಚಾರಭಂಗವೊ ? ಆಚಾರ ಭಂಗವಾದರೂ ಸತ್ಯದಭಂಗವಾಗಗೊಡಬಾರದೆಂದು ಮೋಹನದಾಸನ ಮನೋದೇವತೆಯು ಹೇಳಿದ ಕೂಡಲೇ ಅವನು ಕುಳಿತ ಸ್ಥಳದಿಂದ ಚಟ್ಟನೇ ಎದ್ದು ಹೋದನು. ಆತನ ಗೆಳೆಯನಿಗೂ ಅಲ್ಲಿಯ ಇಂಗ್ಲೀಷ ತರುಣರಿಗೂ ಬಹಳ ಕೋಪ ಬಂದಿತು. ಸತ್ಯದ ಮುಂದೆ ಗೆಳೆತನವೂ ಬಗ್ಗ ಬೇಕಾಗುವದೆಂದು ಮೋಹನದಾಸರ ಮತವಾಯಿತು.

ಆ ದಿವಸದಿಂದ ಮೋಹನದಾಸರು ಸ್ವತಃ ಬೇರೆ ಕೋಣೆಯನ್ನು ಹಿಡಿದು ಅಡಿಗೆಯನ್ನು ಮಾಡಿ ಬಹಳ ಸಾದಾರೀತಿಯಿಂದ ಇರಹತ್ತಿದರು. ತಾರುಣ್ಯದೊಳಗೂ ಇಂಥ ತಪಸ್ವಿಯ ವೃತದಿಂದ ಇರುವದು ಇವರ ಬೇರೆ ಗೆಳೆಯರಿಗಾಗದ್ದರಿಂದ ಇವರ ವಿಷಯಕ್ಕೆ ಆದರಭಾವವು ಉತ್ಪನ್ನ ವಾಯಿತು. ಇವರ ಶಾಖಾಹಾರಿವೃತ್ತಿಯನ್ನು ಕಂಡು ಅಲ್ಲಿಯ ಡಾ. ಜೋಶಿಯೂ ಓಲ್ಡಫೀಲ್ಡ ಎಂಬ ಸದ್ಗೃಹಸ್ಥರು ಮೋಹನದಾಸರ ಗೆಳೆತನವನ್ನು ಬೆಳೆಸಿದರು. ಡಾಕ್ಟರರು ಶಾಖಾಹಾರಿ ಸಂಘವನ್ನು ತೆರೆದಿದ್ದರು. ಆ ಸಂಘದ ಜನರು ಮಾಂಸಾಹಾರವು ಸರ್ವಥೈವ ವರ್ಜ ವಾಗಿದೆಯೆಂಬ ಮತದವರಿದ್ದು ಅದನ್ನು ತೊರೆದು ಶಾಖಾಹಾರಿಗಳಾಗ ಬೇಕೆಂದು ಪ್ರಯತ್ನಿಸುತ್ತಿದ್ದರು. ಇಂಥವರಿಗೆ ಮೋಹನದಾಸರು ಮುಂದಾಳುಗಳಾದರೆಂಬುದರಲ್ಲೇನಾಶ್ಚರ್ಯ? ಡಾಕ್ಟರರು ಕ್ರಿಶ್ಚನ್ ಧರ್ಮದ ತತ್ವಗಳನ್ನು ಮೋಹನದಾಸರಿಗೆ ಉಪದೇಶಿಸಹತ್ತಿದರು. ಮತ್ತು ಕ್ರಿಶ್ಚನ್ ಧರ್ಮವೇ ಶ್ರೇಷ್ಠವಾಗಿದೆಯೆಂದು ಸಾರಹತ್ತಿದರು. ಎಲ್ಲ ಧರ್ಮಗಳಲ್ಲಿ ಕ್ರಿಶ್ಚನ್‌ಧರ್ಮವೇ ಶ್ರೇಷ್ಠವಾಗಿದೆ ಎಂದು ಒಪ್ಪು ವದು ಮೋಹನದಾಸರಿಂದಾಗಲಿಲ್ಲ. ಡಾಕ್ಟರರು ಕ್ರಿಶ್ಚನ್‌ಧರ್ಮದ ಮಹಾತ್ಮ್ಯವನ್ನು ವರ್ಣಿಸಹತ್ತಿದ ಕೂಡಲೇ ಮೋಹನದಾಸರು ಹಿಂದೂ ಧರ್ಮದ ಮಹತಿಯನ್ನು ವರ್ಣಿಸಹತ್ತಿದರು. ಡಾಕ್ಟರರಿಗೆ ಹಿಂದೂ ಧರ್ಮದ ಮೂಲತತ್ವಗಳನ್ನು ತಿಳಿಸುವದು ಅವಶ್ಯವಾಗಿತ್ತು. ಹಿಂದೂ ಧರ್ಮದ ಬಾಯಿಬಲ್ಲೆಂದರೆ ಗೀತೆಯೇ. ಆ ಗೀತೆಯನ್ನೂ ಸಹ ಮೋಹನ ದಾಸರು ಚನ್ನಾಗಿ ಓದಿರಲಿಲ್ಲ. ವಿಲಾಯತಿಯಲ್ಲಿ ಮಿತ್ರರ ಆಗ್ರಹದಿಂದ ಗೀತೆಯನ್ನು ಓದುತ್ತಿರುವಾಗ 'ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪ ಜಾಯತೆ' ಮೊದಲಾದ ಶ್ಲೋಕಗಳ ಪ್ರಭಾವವು ಇವರ ಹೃದಯದ ಮೇಲಾಯಿತು. ಆಗಿನಿಂದಲೇ ಅವರಿಗೆ ಗೀತೆಯ ಮೇಲೆ ಶ್ರದ್ಧೆಯು ಉಂಟಾಯಿತು. ಮನುಷ್ಯರಿಗೆ ಸತ್ಪಥಮಾರ್ಗವನ್ನು ತೋರಿಸುವದಕ್ಕೆ ಗೀತೆಗಿಂತ ಹೆಚ್ಚಿನ ಪುಸ್ತಕ ಎರಡನೆಯದಾವದೂ ಇಲ್ಲ ವೆಂದು ಹೇಳುತ್ತಾರೆ. ಮುಂದೆ ಹಾಗೆಯೇ ಅರ್ನಾಲ್ಡರವರ ಬುದ್ಧ

ಚರಿತೆಯನ್ನೂ ಬಾಯಿಬಲ್ಲನ್ನೂ ಓದಿದರು. ಇವೆಲ್ಲ ಗ್ರಂಥಗಳ ಅಧ್ಯಯನ ದಿಂದಲೇ ದೇವರ ಬಗ್ಗೆ ಶ್ರದ್ಧೆಯುಂಟಾಗಿ ತ್ಯಾಗದಲ್ಲಿಯೇ ಧರ್ಮ ಇದೆ ಎಂಬ ಮಾತುಗಳು ಅವರ ಹೃದಯದ ಮೇಲೆ ಸ್ಪಷ್ಟವಾಗಿ ಮೂಡಿದವು. ಅವರು ಎಷ್ಟೋ ಸಲ ವಿಕಾರವಶರಾಗಿದ್ದರೂ ಇದರಿಂದಲೇ ಉಳಿದು ಕೊಂಡರು. ಬಾಯಿಬಲ್ ಮತ್ತು ಗೀತೆಯ ತುಲನಾತ್ಮಕ ಅಧ್ಯಯನ ವನ್ನು ಮಾಡಿ ಮೋಹನದಾಸರು ಎರಡರಲ್ಲಿಯೂ ಅವೇ ತತ್ವಗಳ ಪ್ರತಿ ಪಾದನೆಯನ್ನು ಕಂಡುಹಿಡಿದರು. ತರತರದ ಹೂವಿನೊಳಗಿನ ಮಕರಂದ ವನ್ನು ಕುಡಿದು ಜೇನ್ನೊಣವು ಹೂವಲ್ಲದ ಬೇರೆ ಪದಾರ್ಥವಾದ ಜೇನನ್ನು ಹುಟ್ಟಿಸುವಂತೆ ಮಹಾತ್ಮರು ಇಂಗ್ಲಂಡದಲ್ಲಿರುವಾಗ ಶ್ರೀಮದ್ ಭಗ ವದ್ಗೀತೆಯನ್ನೂ ಬಾಯಿಬಲ್ಲನ್ನೂ ಅಧ್ಯಯನ ಮಾಡಿ ತಮ್ಮ ಸತ್ಯಾ ಗ್ರಹ ಧರ್ಮವೆಂಬ ತತ್ವಜ್ಞಾನದ ಜೇನನ್ನು ಹುಟ್ಟಿಸಿರುವರು. ಗಾಂಧಿ ಯವರ ತತ್ವಜ್ಞಾನವು ಹಿಂದೂ ಜನರಿಗೆ ಉಪನಿಷತ್ತತ್ವಜ್ಞಾನದಂತೆಯೂ ಕ್ರಿಶ್ಚನ್ನರಿಗೆ ಕ್ರೈಸ್ತಪ್ರಭುವಿನ ತತ್ವಜ್ಞಾನದಂತೆಯೂ ಕಂಡುಬರುವದರ ಗುಟ್ಟು ವಾಚಕರಿಗೆ ಈಗ ತಿಳಿದಿರಬಹುದು.

ಮೋಹನದಾಸರು ಇಂಗ್ಲಂಡದಿಂದ ಬ್ಯಾರಿಸ್ಟರ ಪರೀಕ್ಷೆಯನ್ನು ಕೊಟ್ಟು ರಾಜಕೋಟದಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ಹಿಂದೂ ಕಾಯದೆಯ ಜ್ಞಾನವು ಸಾಕಷ್ಟು ಇಲ್ಲದ್ದರಿಂದ ಮುಂಬಯಿಗೆ ಹೋಗಿ ಅಲ್ಲಿ ಅದನ್ನು ಪೂರ್ಣವಾಗಿ ಪಡೆಯಬೇಕೆಂದು ಮನಸ್ಸು ಮಾಡಿದರು. ಹಿಂದೂ ಕಾಯದೆಯ ಅಭ್ಯಾಸವು ನಡೆಯಿತು. ಆದರೆ ಮೋಹನದಾಸರ ಮನಸ್ಸಿನಲ್ಲಿ ಅಹಿಂಸೆಯ ರತ್ನವನ್ನು ಬಿತ್ತಿದ ಮಹಾತ್ಮನು ಇಲ್ಲಿ ಅವರಿಗೆ ಸಿಕ್ಕನು. ಈ ಮಹಾತ್ಮನ ಹೆಸರು **ರಾಜಾಚಂದ್ರ ರಾವಜೀಭಾಯಿ ಯವರು** ಎಂದಿತ್ತು. ಇವರು ಜೈನರಾಗಿದ್ದರು. ಪ್ರತಿಭೆಯಿಂದೊಡ ಗೂಡಿದ ಕಾವ್ಯಶಕ್ತಿಯೂ ಇವರಲ್ಲಿ ಕಂಗೊಳಿಸುತ್ತಿತ್ತು. ಗಾಂಧಿಯವ ರಲ್ಲಿ ಈಗ ಫಲರೂಪವಾಗಿರುವ ಸತ್ಯ, ಅಹಿಂಸೆ, ನೀತಿಧರ್ಮ, ಬ್ರಹ್ಮ ಚರ್ಯ ಮುಂತಾದ ಆಧ್ಯಾತ್ಮಿಕ ಗುಣಗಳ ಬೀಜವನ್ನು ಬಿತ್ತಿದವರೆಂದರೆ ರಾಜಾಚಂದ್ರ ಕವಿಯೇ ಎಂದು ಹೇಳಬಹುದು. ಈ ಮಹಾತ್ಮನ ವಿಷಯ ವಾಗಿ ಗಾಂಧಿಯವರು :–

'The more I consider his life and writings, the more I consider him to have been the best Indian of his times. Indeed I put him much higher than Tolstoy in religious perception. Both Kavi and Tolstoy have lived as they have praeched.'

'ಅವರ ಚರಿತ್ರಗಳನ್ನೂ ಬರಹಗಳನ್ನೂ ನಾನು ಮನನ ಮಾಡಿದ ಹಾಗೆ ಅವರ ಕಾಲದ ಮಹಾತ್ಮರಲ್ಲಿ ಅವರ ಗಣನೆಯಾಗುವದೆಂದು ನನಗೆ ಅನಿಸುತ್ತದೆ. ಟಾಲಸ್ಟಾಯರ ಕಿಂತಲೂ ಧರ್ಮದ ದೃಷ್ಟಿಯಲ್ಲಿ ಅವರೇ ಮೇಲಾಗಿದ್ದರೆಂದು ನನಗೆ ಅನಿಸುತ್ತದೆ. ಕವಿ ಗಳೂ ಮತ್ತು ಟಾಲಸ್ಟಾಯರು ತಾವು ನುಡಿದಂತೆಯೇ ನಡೆದರು.'

ರಾಜಾಚಂದ್ರರು ಕವಿಗಳಾದ್ದರಿಂದ ಅವರು ತಮ್ಮ ರಸಪರಿಪೂರ್ಣ ವಾದ ದಿವ್ಯ ವಾಣಿಯಿಂದ ಮೋಹನದಾಸರ ಹೃದಯವನ್ನು ವಶಮಾಡಿ ಕೊಂಡು ಅದರಲ್ಲಿ ದೈವೀಗುಣಗಳನ್ನು ಬಿತ್ತಿದರು. ದಕ್ಷಿಣ ಆಫ್ರಿಕೆಯಲ್ಲಿ ಗಾಂಧಿಯವರು ಕ್ರಿಶ್ಚನ್ನ ಧರ್ಮವನ್ನು ಸ್ವೀಕಾರ ಮಾಡಬೇಕೆಂಬ ಆಲೋಚನೆಯನ್ನು ಮಾಡುತ್ತಲಿದ್ದಾಗ ಅವರನ್ನು ಉಳಿಸಿದವರೆಂದರೆ ರಾಜಾಚಂದ್ರರೇ ಎಂದು ಹೇಳಬಹುದು. ಇವರು ಹಿಂದೂಧರ್ಮದಲ್ಲಿಯ ಸೂಕ್ಷ್ಮ ಮತ್ತು ಗೂಢ ವಿಚಾರಗಳ, ಆತ್ಮನಿರೀಕ್ಷಣೆಯ ಮತ್ತು ದಯೆಯ ಬಗ್ಗೆ ಬರೆದು ಹಿಂದೂ ಧರ್ಮದ ಅಧ್ಯಯನವನ್ನು ಮಾಡಲಿಕ್ಕೆ ಹೇಳಿದರು. ಇದಕ್ಕೆ ಮೆಟಲಂಡ, ಕಿಂಗ್ಸಫರ್ಡ ಹಾಗೂ ಟಾಲಸ್ಟಾಯರ ಸಾಹಿತ್ಯಗಳಿಂದ ವಿಚಾರಗಳಿಗೆ ಪುಷ್ಟಿಯು ದೊರೆಯಿತು. ಇದರಿಂದ ಹಿಂದೂ ಧರ್ಮದ ಮೇಲೆ ಇವರ ಶ್ರದ್ಧೆಯು ಹೆಚ್ಚಿತು. ಮುಂದೆ ಅವುಗಳ ಸೂಕ್ಷ್ಮ ವಿಚಾರಗಳ ಜ್ಞಾನವನ್ನೂ ಪಡೆದರು. ಆದಕಾರಣ ಇವರಿಗೆ ಪರಧರ್ಮದ ಮೇಲೆ ಆದರಭಾವವು ಇದ್ದುದರಿಂದಲೇ ಜಗತ್ತಿನಲ್ಲಿ ಮಹಾತ್ಮರೆಂದು ಹೆಸರುವಾಸಿಯಾಗಿದ್ದಾರೆ.

---

# ಸತ್ಯಾಗ್ರಹ ತರುಣ ತಪಸ್ವಿ

ಗಾಂಧಿಯವರು ಈ ರೀತಿಯಾಗಿ ಮನಃಸಿದ್ಧತೆಯನ್ನು ಮಾಡಿಕೊಂಡು ವಕೀಲಿಯ ವ್ಯವಸಾಯಕ್ಕಾಗಿ ಆಫ್ರಿಕಕ್ಕೆ ತೆರಳಿದರು. ಅಲ್ಲಿಯ ಹಿಂದೀ ಬಾಂಧವರ ಸಮಸ್ಯೆಯಬಗ್ಗೆ ಹೋರಾಟವನ್ನು ಹೂಡಲೇ ಬೇಕಾಯಿತು. ಅಲ್ಲಿಯ ಸರಕಾರದ ಸಂಗಡ ಸತ್ಯಾಗ್ರಹವನ್ನು ಹೂಡಿ ೧೯೧೪ರಲ್ಲಿ ವಿಜಯಿಗಳಾದರು.

ದಕ್ಷಿಣ ಆಫ್ರಿಕೆಯಲ್ಲಿಯ ಈ ಪ್ರಶ್ನೆಯು ಸಾಮಾನ್ಯವಾಗಿರಲಿಲ್ಲ. ಆ ಪ್ರಶ್ನೆಯೆಂದರೆ ವಿಶ್ವಸಂಗ್ರಹದ ದಾರಿಯಲ್ಲಿ ಬಿದ್ದ ದೊಡ್ಡ ಬಂಡೆಗಲ್ಲಿನಂತಿತ್ತು. ಮಾನವ ಜನಾಂಗವನ್ನು ಪ್ರೇಮದೃಷ್ಟಿಯಿಂದ ನೋಡುವ, ಮಾನವರ ಸೇವೆಯನ್ನೇ ತಮ್ಮ ಧ್ಯೇಯವನ್ನಾಗಿಟ್ಟುಕೊಂಡ ಮಹಾತ್ಮರಿಗೆ ಈ ಪ್ರಶ್ನೆಯು ಸತ್ವದ ಕೊಲೆ ಎನಿಸಹತ್ತಿತು. ಯುರೋಪ ಮತ್ತು ಏಶಿಯಾ ಖಂಡಗಳಲ್ಲಿ ಪ್ರೇಮಭಾವನೆಯು, ಬಾಂಧವ್ಯವು ನೆಲೆಗೊಳ್ಳದಿರಲು ಯುರೋಪದ ಜನರ ವರ್ಣದ್ವೇಷವೇ ಮುಖ್ಯ ಕಾರಣವಾಗಿತ್ತು. ವಿಶ್ವಬಾಂಧವ್ಯವು ಆತ್ಮಕ್ಕೆ ಸಂಬಂಧಿಸಿರುವದೇ ಹೊರ್ತು ದೇಹಕ್ಕಲ್ಲ. ಜೀವಜಂತುಗಳಲ್ಲಿರುವ ಎಲ್ಲರ ಆತ್ಮನು ಒಂದೇ ಇರುವನೆಂಬ ಭಾವನೆಯೇ ಇದರ ಮೂಲಾಧಾರವು ಎಂಬ ಮಾತನ್ನು ನಾವೆಲ್ಲರೂ ತಿಳಿಯಬೇಕಾಗಿದೆ. ಇಲ್ಲದಿದ್ದರೆ ವಿಶ್ವಬಾಂಧವ್ಯದ ಮಾತನಾಡಲು ಕೂಡ ನಮಗೆ ಅಧಿಕಾರವಿಲ್ಲ.

ಬ್ರಿಟಿಶರು ದಕ್ಷಿಣ ಆಫ್ರಿಕೆಯಲ್ಲಿ ವಸಾಹತುಗಳನ್ನು ಮಾಡಿಕೊಂಡು ಇರಹತ್ತಿದನಂತರ ಹೊಲಗಳಲ್ಲಿ ಕೆಲಸ ಮಾಡಲು ಸಾಕಷ್ಟು ಕೂಲಿಕಾರರು ಸಿಗದಾದರು. ಆಗ ಹಿಂದುಸ್ತಾನದಿಂದ ಕೂಲಿಗಳನ್ನು ತಂದು ಅವರ ಕಡೆಯಿಂದ ತಮ್ಮ ಹೊಲದ ಹೋರೆಗಳನ್ನು ಮಾಡಿಸಿಕೊಳ್ಳುತ್ತಿದ್ದರು. ದಕ್ಷಿಣ ಆಫ್ರಿಕೆಯ ಈ ಬಿಳೀ ಜನರ ದಲಾಲರು ಹಿಂದುಸ್ತಾನದ ಹಳ್ಳಿಗಳಲ್ಲಿರುವ ಬಡಜನರಿಗೆ ಇಲ್ಲದ ಆಶೆ ಹಚ್ಚಿ ನಿಮಗೆ

ಬಹಳ ಸಂಬಳ ಸಿಗುವದೆಂತಲೂ ಕೂಲಿಯ ಕರಾರಿನ ಅವಧಿಯು ಮುಗಿದ ನಂತರ ಅಲ್ಲಿಯೇ ಸುಖವಾಗಿ ಜೀವಿಸಬಹುದೆಂತಲೂ ಮೋಸಮಾಡಿ ಅವರನ್ನು ಆಫ್ರಿಕಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಒಮ್ಮೆ ಜಮೀನುದಾರರ ಕೆಲಸವನ್ನು ಸ್ವೀಕರಿಸಿದರೆ ಐದು ವರ್ಷಗಳವರೆಗೆ ಬಿಡಕೂಡದೆಂಬ ಕಟ್ಟಳೆಯಿತ್ತು. ಈ ಪದ್ಧತಿಗೆ (Indentured Labour system) **ನಿಯತ ಕಾಲಿಕ ಕೂಲಿ ಪದ್ಧತಿ ಎಂಬ ಹೆಸರು.** ಈ ಪ್ರಕಾರವಾಗಿ ದುಡ್ಡಿನ ಆಶೆಯಿಂದ ಎಷ್ಟೋ ಜನರು ಕೂಲಿಗಳಾಗಿ ಬಿಳೀಜನರ ವಸಾಹತುಗಳ ಹೊಲಗಳಲ್ಲಿ ಕೆಲಸ ಮಾಡುತ್ತಿದ್ದರು. ಬಿಳೀ ಜನರು ಅವರನ್ನು (Asiatics) ಏಶಿಯಾದ ಕಪ್ಪು ಜನರೆಂದು ಸಂಬೋಧಿಸುತ್ತಿದ್ದರಲ್ಲದೆ ಅವರನ್ನು ಪಶುಗಳಂತೆ ನಡೆಸಿಕೊಳ್ಳುತ್ತಿದ್ದರು. ಕೂಲಿಕಾರರ ಈ ಐದು ವರ್ಷದ ಗೋಳನ್ನು ವರ್ಣಿಸಲಸಾಧ್ಯ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಲ್ಲಿಯ ನಿಯತಕಾಲಿನ ಕೂಲಿಕಾರನಿಗೆ ಒಡೆಯನ ಅವಧಿಯನ್ನು ಮುಗಿಸಿದ ಕೂಡಲೇ ಯಮಸದನವನ್ನು ಬಿಟ್ಟು ಬಂದ ಹೆಣಕ್ಕೆ ಆಗುವಷ್ಟು ಸಂತೋಷವಾಗುತ್ತಿತ್ತು. ಐದು ವರ್ಷಗಳೆಂದರೆ ನರಕಯಾತನೆಯೇ ಸರಿ.

ಕೂಲಿಯ ಅವಧಿಯು ಮುಗಿದ ಬಳಿಕ ಅವರು ತಿರುಗಿ ಭಾರತಕ್ಕೆ ಬರುವದೆಂತು ? ಅಲ್ಲಿಯೇ ಏನಾದರೂ ಮಾಡಿಕೊಂಡು ಜೀವಿಸುತ್ತಿದ್ದರು. ಆದರೆ ಜಮೀನುದಾರರ ಗುಲಾಮರೆಂದಲ್ಲ, ಸ್ವತಂತ್ರ ಕೂಲಿಕಾರರಂತೆ ಕೆಲಸವನ್ನು ಮಾಡುತ್ತಿದ್ದರು. ಕೆಲವರು ವ್ಯಾಪಾರವನ್ನು ಮಾಡುತ್ತಿದ್ದರು. ಹೀಗೆ ನೆಲಿಸಹತ್ತಿದ್ದನ್ನು ಕಂಡು ಬಿಳಿಯರು ಇದನ್ನು ಸಹಿಸದಾದರು. ಹಾದಿಯಿಂದ ಹೋಗುವ ಭೂತವು ಮನೆಹೊಕ್ಕಂತಾಯಿತೆಂದು ಅವರಿಗೆ ಅನಿಸಹತ್ತಿತು. ಹೇಗಾದರೂ ಮಾಡಿ ಭಾರತೀಯರು ಅಲ್ಲಿ ನೆಲಿಸದಂತೆ ಮಾಡಬೇಕೆಂದು ಹವಣಿಸಹತ್ತಿದರು. ಆದರೆ ನಿಯತ ಕಾಲಿಕ ಕೂಲಿಯ ಅವಧಿಯು ಮುಗಿದ ಬಳಿಕ ಅಲ್ಲಿಯೇ ಕೂಲಿಯವರು ಇರಬಹುದೆಂಬ ಕಟ್ಟಳೆಯು ಅವರಿಗೆ ತೊಂದರೆಯನ್ನು ಉಂಟುಮಾಡಿತು. ಆದ್ದರಿಂದ ಹಿಂದೀ ಜನರು ದಕ್ಷಿಣ ಆಫ್ರಿಕೆಯನ್ನು ಬಿಟ್ಟು ಹೋಗುವಂತೆ

ಮಾಡಬೇಕೆಂದು ಅನೇಕ ಅನ್ಯಾಯಗಳನ್ನು ಮಾಡಹತ್ತಿದರು. ಸಮಾಜದಲ್ಲಂತೂ ಇರಲಿ, ಸಾರ್ವಜನಿಕ ಸ್ಥಳಗಳಲ್ಲಿಯೂ ಕೂಡ ಹಿಂದೀ ಜನರ ಅಪಮಾನವಾಗುತ್ತಿತ್ತು. ರೇಲ್ವೆಯಲ್ಲಿ ಬಿಳೀಜನರಿಗಷ್ಟೇ ಮೊದಲನೇ ಎರಡನೇ ತರಗತಿಯ ಸ್ಥಳಗಳು ಕೊಡಲ್ಪಡುತ್ತಿದ್ದವು. ಕಪ್ಪುಜನರಿಗೆ ಕೇವಲ ಮೂರನೇ ತರಗತಿಯ ಸ್ಥಳ. ಬಿಳೀಜನರು ಕಪ್ಪುಜನರನ್ನು ಬೀದಿಯಲ್ಲಿ ಪಶುಗಳಂತೆ ನಡೆಯಿಸಿಕೊಂಡರೂ ಅವರನ್ನು ಹೇಳುವವರೂ ಕೇಳುವವರೂ ಇಲ್ಲ. ದಕ್ಷಿಣ ಆಫ್ರಿಕೆಯ ಕಾಯಿದೆಗಳೇ ಹೀಗೆ ಇದ್ದವು. ಗಾಂಧಿಯವರು ನೇತಾಳದಲ್ಲಿ ಕಾಲಿಟ್ಟೊಡನೆಯೇ ಅನುಭವದಿಂದ ಬಿಳೀಜನರು ಕಪ್ಪುಜನರನ್ನು ಯಾವ ರೀತಿಯಿಂದ ನಡೆಯಿಸಿಕೊಳ್ಳುತ್ತಿದ್ದರೆಂಬುವದು ಸ್ಪಷ್ಟವಾಗಿ ತಿಳಿದುಕೊಂಡರು.

ಗಾಂಧಿಯವರು ಕೋರ್ಟಿಗೆ ಹೋದ ಕೂಡಲೆ ರುಮಾಲವನ್ನು ತೆಗೆದಿಟ್ಟು ಒಳಗೆ ಕಾಲಿಡಬೇಕೆಂದು ಹೇಳಲಾಯಿತು. ಸ್ವಾಭಿಮಾನಿಗಳಾದ ಗಾಂಧಿಯವರು ಈ ಅಪಮಾನವನ್ನು ಸಹಿಸುವದೆಂತು? ಕೋರ್ಟುಬಿಟ್ಟು ಕಾಲು ಅಪ್ಪಳಿಸುತ್ತ ಮನೆಗೆ ಹೊರಟುಹೋದರು. ಇಲ್ಲಿಂದಲೇ ಗಾಂಧಿಯವರ ಜೀವನದ ಹೋರಾಟವು ಪ್ರಾರಂಭವಾಯಿತು. ಮಾನವಜನಾಂಗಕ್ಕೆ ಇರುವ ಎಲ್ಲ ಹಕ್ಕುಗಳು ತಮಗೂ ಇದ್ದು ಇಂಥ ಅಪಮಾನಗಳನ್ನು ಸಹಿಸುವ ಬಗೆ ಹೇಗೆ? ಇದು ಭಾರತೀಯರ ಶುದ್ಧಹೇಡಿತನವು. ಬ್ರಿಟಿಶರ ಪಾಶವೀವೃತ್ತಿಯು. ಇದನ್ನು ಎದುರಿಸಲೇಬೇಕು ಎಂಬ ನಿಶ್ಚಯವನ್ನು ಮಾಡಿಕೊಂಡರು. ಈ ಬೆಳಕಿನಿಂದ ಅಲ್ಲಿಯ ಭಾರತೀಯ ಜೀವನವನ್ನು ನಿರೀಕ್ಷಿಸಹತ್ತಿದರು. ಕ್ಷಣಕ್ಷಣಕ್ಕೆ ಅವರಿಗೆ ಅಸಹ್ಯವೆನಿಸಹತ್ತಿತು. ಇಷ್ಟರಲ್ಲಿ ಅವರು ಟ್ರಾನ್ಸವಾಲಕ್ಕೆ ಹೋಗುವ ಪ್ರಸಂಗವು ಬಂದಿತು. ಮೊದಲನೇ ತರಗತಿಯ ಟಿಕೀಟು ತೆಗೆದುಕೊಂಡು ಗಾಡಿಯಲ್ಲಿ ಕುಳಿತಿದ್ದರು. ಗಾರ್ಡನು ಬಂದು ಮೂರನೇ ತರಗತಿಗೆ ಹೋಗಬೇಕೆಂದು ಹೇಳಿದನು. ತಾವು ಮೊದಲನೇ ತರಗತಿಯ ಟಿಕೀಟು ತೆಗೆದುಕೊಂಡಿರುವೆವೆಂದೂ ಎದ್ದು ಹೋಗುವದಿಲ್ಲೆಂದೂ ಹೇಳಿದರು. ಗಾರ್ಡನ ತಲೆ ತಿರುಗಿತು. ಹಿಂದೀ ಮನುಷ್ಯನು

ಹೀಗನ್ನುವದೆಂದರೇನು? ಬ್ರಿಟಿಶರ ಅಪಮಾನವಲ್ಲವೆ! ಕೂಡಲೆ ಅವರ ಸಾಮಾನುಗಳನ್ನೆಲ್ಲ ಕಿತ್ತುಕೊಂಡು ಹೊರಗೆ ಹಾಕಿಸಿದನು. ಗಾಂಧಿಯವರನ್ನೂ ಕೂಲಿಗಳಿಂದ ಹೊರಕ್ಕೆ ದಬ್ಬಿಸಿದನು. ಗಾಡಿಯು ಹೊರಟು ಹೋಯಿತು. ಗಾಂಧಿಯವರು ಈ ಎಲ್ಲ ಸಂಗತಿಗಳನ್ನು ಮೇಲಧಿಕಾರಿಗಳಿಗೆ ತಿಳಿಸಿದರು. ಅವರು ಟ್ರಾನ್ಸವಾಲದಲ್ಲಿ ಒಮ್ಮೆ ಒಂದು ವಾಹನದಲ್ಲಿ ಕೂತಿದ್ದರು. ಗಾಡಿಯವನು ಒಂದು ನನಗೆ ಬತ್ತಿ ಸೇದುವದದೆ ಕೆಳಗೆ ಇಳಿಯಬೇಕೆಂದನು. ಗಾಂಧಿಯವರು ನಿರಾಕರಿಸಲು ಅವರನ್ನು ಚನ್ನಾಗಿ ಥಳಿಸಿದನು. ಯಾರ ಮುಂದೆ ಹೇಳಬೇಕು! ಇಂಥ ಅನಾಗರಿಕ ಬ್ರಿಟಿಶ ಜನಾಂಗಕ್ಕೆ ಸುಧಾರಿಸಿದವರೆಂದು ಹೇಗನ್ನಬೇಕೊ ತಿಳಿಯದು. ಬ್ರಿಟಿಶ ಜನಾಂಗದ ವಿಷಯಕ್ಕಿದ್ದ ಆದರಭಾವನೆಗಳು ಗಾಂಧಿಯವರಿಂದ ಮೆಲ್ಲನೆ ಮಾಯವಾಗಹತ್ತಿದವು. ಟ್ರಾನ್ಸವಾಲಿಗೆ ಮುಟ್ಟಿದೊಡನೆಯೇ ಅಲ್ಲಿಯ ಹಿಂದೀ ಜನರನ್ನೆಲ್ಲ ಒಂದುಗೂಡಿಸಿ ನೀವೆಲ್ಲರೂ ನಿಮ್ಮನಿಮ್ಮಲ್ಲಿಯ ಹಿಂದು–ಮುಸಲ್ಮಾನ ಕ್ರಿಸ್ತೀ ಎಂಬ ಭೇದಭಾವ ಮರೆತು ಭಾರತೀಯರೆಂಬ ಭಾವನೆಯಿಂದ ಒಂದಾಗಿ ಭಾರತೀಯರ ಕಷ್ಟಗಳನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಬೇಕೆಂದೂ ಈ ಕಾರ್ಯದಲ್ಲಿ ತಾವು ನೆರವಾಗುವೆವೆಂದೂ ಹೇಳಿ ಒಂದು ಸಂಘವನ್ನು ಸ್ಥಾಪಿಸಿದರು. ಈ ಸಂಘವು ಭಾರತೀಯರ ಕಷ್ಟಗಳನ್ನು ಸಭೆಯ ಮುಖಾಂತರ ಜನರೆದುರಿಗೆ ಇಡಹತ್ತಿತು. ಹೀಗೆ ಕಾರ್ಯಮಾಡುತ್ತ ಭಾರತೀಯರಲ್ಲಿ ಸ್ವಾಭಿಮಾನ ಸ್ವದೇಶಾಭಿಮಾನಗಳನ್ನು ಜಾಗೃತಗೊಳಿಸಿದರು. ತಾವು ಹೋದ ಕಾರ್ಯವು ಮುಗಿದದ್ದರಿಂದ ಮರಳಿ ಭಾರತಕ್ಕೆ ಬರಬೇಕೆಂದು ಸಿದ್ಧತೆ ನಡೆಸಿದ್ದರು. ಇವರ ಸಲುವಾಗಿ ಸಂತೋಷಕೂಟವು ಏರ್ಪಡಿಸಲಾಗಿತ್ತು. ಆದರೆ ಸರಕಾರವು ಈ ಸಮಯದಲ್ಲಿ ( Indian Franchice ) 'ಹಿಂದುಗಳ ಮತಾಧಿಕಾರ' ಎಂಬ ಕಾಯಿದೆಯನ್ನು ಅಲ್ಲಿಯ ಕಾಯಿದೆಮಂಡಲದಲ್ಲಿ ಪಾಸುಮಾಡಿತು. ಇದು ಎಲ್ಲ ಭಾರತೀಯರ ಲಕ್ಷವನ್ನೆಳೆದುಕೊಂಡಿತು. ಬೀಳ್ಕೊಡುವ ಸಮಾರಂಭಕ್ಕೆಂದು ಕೂಡಿದ ಸಭೆಯಲ್ಲಿ ಮಹಾತ್ಮರು ಇಲ್ಲಿಯೇ ನಿಲ್ಲಬೇಕೆಂದೂ ಈ ಬಿಲ್ಲಿನ ವಿರುದ್ಧ ಹೋರಾಡಬೇಕೆಂದು ಎಲ್ಲರೂ ಬೇಡಿ

ಕೊಂಡರು. ಭಾರತೀಯರ ಅಸ್ತಿತ್ವವನ್ನೇ ಅಲ್ಲಗಳೆಯುವ ಈ ಕಾಯಿದೆಯನ್ನು ವಿರೋಧಿಸುವದು ಕರ್ತವ್ಯವೆಂದು ಬಗೆದು ನಿಲ್ಲಲು ಒಪ್ಪಿಕೊಂಡರು. ಕೂಡಲೇ ಚಳವಳಿಗೆ ಪ್ರಾರಂಭವಾಯಿತು. ದೊಡ್ಡ ದೊಡ್ಡ ಸಭೆಗಳಾದವು. ಸಭೆಗಳಲ್ಲಿ ಈ ಕಾಯಿದೆಯು ನಿಷೇಧಿಸಲ್ಪಟ್ಟಿತು. ಕೌನ್ಸಿಲ್ಲಿನ ಅಧ್ಯಕ್ಷರಿಗೆ ಸಭೆಯನ್ನು ಮುಂದರಿಸಬೇಕೆಂದು ತಂತಿಯು ಕಳಿಸಲ್ಪಟ್ಟಿತು. ಸಭೆಯು ಮುಂದರಿಸಿದೆ ಎಂದು ಉತ್ತರ ಬಂದಿತು. ಜನರು ಉತ್ಸಾಹಗೊಂಡರು. ಲಕ್ಷಾವಧಿ ಜನರ ಸಹಿಗಳಾಗಿ ಕಾಯದೆಯಾಗ ಬಾರದೆಂದು ಅರ್ಜಿಯು ಹೋಯಿತು. ವೃತ್ತಪತ್ರಗಳಲ್ಲೆಲ್ಲ ಚರ್ಚೆಗೆ ಪ್ರಾರಂಭವಾಯಿತು. ಕೌನ್ಸಿಲನಲ್ಲಿಯೂ ದೀರ್ಘಚರ್ಚೆಯಾಗಿ ಕಾಯಿದೆಯು ಪಾಸಾಯಿತು. ಈ ಆಂದೋಲನದಲ್ಲಿ ಭಾರತೀಯರ ಇಚ್ಛೆಯು ಪೂರ್ಣವಾಗದಿದ್ದರೂ ಭಾರತೀಯರಲ್ಲಿ ನವಜಾಗೃತಿಯುಂಟಾಯಿತು. ಭೇದಭಾವಗಳು ಮಾಯವಾದವು. ತಾವೆಲ್ಲರೂ ಭಾರತೀಯರು ಎಂಬ ಭಾವನೆಯು ಜಾಗೃತವಾಯಿತು. ರಾಜಕೀಯ ಅಧಿಕಾರಗಳಿಗಾಗಿ ಹೋರಾಡುವದು ಪವಿತ್ರಕರ್ತವ್ಯವೆಂಬುದು ಸ್ಫುಟವಾಗಿ ಮೂಡಿತು.

ಕಾಯದೆಯು ಪಾಸಾದರೂ ಗಾಂಧಿಯವರು ಬಿಡಲಿಲ್ಲ. ಪಾರ್ಲಿಮೆಂಟಿಗೆ ಅರ್ಜಿಯು ಕಳಿಸಲ್ಪಟ್ಟಿತು. ಎಲ್ಲ ವೃತ್ತಪತ್ರಗಳಿಗೂ ಈ ಅನ್ಯಾಯವನ್ನು ತಿಳಿಸಲಾಯಿತು. ಭಾರತೀಯರ ಸಂಘಟನೆಗೆ ಕೈಹಾಕಿದರು. ಭಾರತೀಯರಲ್ಲಿ ಸತ್ಯಕ್ಕಾಗಿ ಹೋರಾಡುವ ಧೈರ್ಯವನ್ನು ತಂದು ಕೊಡುವದಕ್ಕಾಗಿ ಪ್ರಯತ್ನಿಸಹತ್ತಿದರು. ಈ ದೃಷ್ಟಿಯಿಂದಲೇ ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಲು '**ನೇಟಾಲ ಇಂಡಿಯನ್ ಕಾಂಗ್ರೆಸ**' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಸಂಘಟನೆ ಪ್ರಾರಂಭವಾಯಿತು. ಬ್ರಿಟಿಶರ ನ್ಯಾಯದೇವತೆಯಲ್ಲಿಯೂ, ಬ್ರಿಟಿಶ ಸಾಮ್ರಾಜ್ಯದಲ್ಲಿಯೂ ಗಾಂಧಿಯವರಿಗೆ ಅತ್ಯಂತ ವಿಶ್ವಾಸ. ಇಷ್ಟರಲ್ಲಿಯೇ ಸರಕಾರವು ನಿಯತಕಾಲಿಕ ಕೂಲಿಕಾರರಿಗೆ ೨೫ ಪೌಂಡಿನ ತಲೆಪಟ್ಟಿಯನ್ನು ಕಟ್ಟಬೇಕೆಂಬ ಕಟ್ಟಳೆಯು ಬಂದಿತು. ಗಾಂಧಿಯವರು ಇವರ ವಿರುದ್ಧ ಹೋರಾಟವನ್ನು ಹೂಡಿದರು. ಭಾರತದಲ್ಲಿ ಪ್ರಚಾರಮಾಡಿ, ಸಹಾನು

ಭೂತಿಯನ್ನು ದೊರಕಿಸುವದಕ್ಕಾಗಿ, ಭಾರತಕ್ಕೆ ಬಂದು ಭಾರತದಲ್ಲೆಲ್ಲ ಸಂಚರಿಸಿ, ಪ್ರಚಾರಮಾಡಿದರು. ಅಲ್ಲಿಯ ಕಷ್ಟಗಳನ್ನು ವರ್ಣಿಸುವ ಪುಸ್ತಕವನ್ನು ತೆರೆದು ಪ್ರಸಿದ್ಧಿಸಿದರು. ಕರೆಬಂದೊಡನೆಯೇ ಮರಳಿ ಆಫ್ರಿಕಾಕ್ಕೆ ಹೋದರು. ಬಿಳಿಯ ಜನರು ಯಾವ ರೀತಿಯ ಸ್ವಾಗತವನ್ನು ಮಾಡಿದರೆಂಬುದು ಹಿಂದೆಯೇ ಬಂದಿದೆ.

೧೮೯೯ರಲ್ಲಿ ಘೋರ ಯುದ್ಧವು ಪ್ರಾರಂಭವಾಯಿತು. ಇದರಲ್ಲಿ ಮಹಾತ್ಮರು ಬ್ರಿಟಿಶರಿಗೆ ಪೂರ್ಣ ಸಹಾಯಮಾಡಿದರು. ಯಾರು ಹಿಂದೀ ಜನರನ್ನು ಪಶುಗಳಂತೆ ನಡೆಯಿಸಿಕೊಳ್ಳುತ್ತಿದ್ದರೋ ಯಾರಿಗೆ ಕಪ್ಪು ಜನರ ಮೋರೆಯನ್ನು ನೋಡಿದರೆ ಮೈಲಿಗೆ ಎನಿಸುತ್ತಿದೆಯೋ ಮನುಷ್ಯ ಪ್ರಾಣಿಗೆ ತೋರಿದಷ್ಟು ದಯಾಬುದ್ಧಿಯು ಕೂಡ ಯಾರಲ್ಲಿ ಇಲ್ಲವೋ ಅಂಥವರಿಗೆ ಅವರ ಗಂಡಾಂತರದಲ್ಲಿ ನಮ್ಮ ಪ್ರಾಣಗಳನ್ನು ಗಂಡಾಂತರ ದಲ್ಲಿ ಹಾಕಿ ಸಹಾಯ ಮಾಡುವದೆಂದರೆ ಹುಚ್ಚುತನವೇ ಸರಿ ಎನಬಹುದು. ಆದರೆ ಇದರಲ್ಲಿರುವದೇ ಗಾಂಧಿಯವರ ತತ್ವಜ್ಞಾನದ ಗುಟ್ಟು.

ಮಾನವ ಜನಾಂಗದ ಸೇವಕರಾದ ಮಹಾತ್ಮರ ಅಂತಃಕರಣವು ದ್ರವಿಸಿತು. '**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ**' ಎಂಬುದೇ ಮಹಾತ್ಮರ ಚಳವಳಿಯ ಧ್ಯೇಯವಾಗಿತ್ತು. ಅದರ ಪರೀಕ್ಷೆಯ ಸಮಯವು. ಮಹಾತ್ಮರು ಶುದ್ಧಬುದ್ಧಿಯಿಂದ ವಿಚಾರ ಮಾಡಿ, ತಮ್ಮ ತತ್ವದಂತೆಯೇ ಸಹಾಯ ಮಾಡುವದನ್ನು ನಿಶ್ಚಯಿಸಿ ದ್ದರು. '**ಅಪಕಾರಿಷು ಯಃ ಸಾಧುಃ ಸಸಾಧುಃ ಸದ್ಭಿರುಚ್ಯತೇ**' ಎಂಬ ತತ್ವದ ಪರೀಕ್ಷೆಯನ್ನು ಮಾಡುವ ಸಮಯವು ಬಂದೊದಗಿದೆ ಎಂದು ಬಗೆದು, ಹಿಂದೀಯರನ್ನು ಬಗೆಬಗೆಯಿಂದ ಪೀಡಿಸುವ ಆಫ್ರಿಕಾ ಸರಕಾರಕ್ಕೆ ಸಹಾಯವನ್ನು ಮಾಡಿದರು. 'ದುಷ್ಟರ ದಮನವನ್ನು ಮಾಡಿದಲ್ಲಿ **ಆಗುವ ಪರಿಣಾಮಕ್ಕಿಂತಲೂ, ಅವರ ಹಿತಕ್ಕಾಗಿಯೇ ಹೆಣಗಿ ಅವರನ್ನು ಪ್ರೇಮದಿಂದ ಜಯಿಸಲು ಶಕ್ಯವಿದೆ,** ಎಂಬ ಸತ್ಯಾಗ್ರಹತತ್ವದ ಪ್ರಥಮಪ್ರಯೋಗವನ್ನು ಮಾಡಿದರು. ಅಲ್ಪ ಸಂಖ್ಯಾಕರಾದ ಹಿಂದೀ ಜನರ ಹಿತಸಾಧಿಸಲು ಇದೊಂದು ಸಾಧನವೆಂದೂ

ಆಲೋಚಿಸಿದ್ದರು. ಇಂಗ್ಲೀಷರು ಜಯಹೊಂದಿದರು. ಟ್ರಾನ್ಸವಾಲವು ಇವರ ಕೈವಶವಾಯಿತು. ಇಂಗ್ಲೀಷರ ರಾಜ್ಯವನ್ನು ಉಳಿಸಿದವರಲ್ಲಿ ಗಾಂಧಿಯವರೂ ಅವರ ಅನುಯಾಯಿಗಳೂ ಆಗಿರುವರೆಂದು ಆಫ್ರಿಕೆಯ ಪ್ರಮುಖ ಅಧಿಕಾರಿಗಳೂ, ಪಾರ್ಲಿಮೆಂಟಿನ ಮುಂದಾಳುಗಳೂ ಹೊಗಳಿದರು. ಆಗ ತಮ್ಮ ತತ್ವಕ್ಕೆ ವಿಜಯವಾಯಿತೆಂದು ತಮ್ಮ ಸತ್ವದಲ್ಲಿ ಅವರಿಗೆ ಶ್ರದ್ಧೆಯು ಹೆಚ್ಚಿತು. ಪ್ರಕೃತಿಯು ಕೆಟ್ಟದ್ದರಿಂದ ಭಾರತಕ್ಕೆ ಮರಳಿ ಬಂದರು. ಆದರೆ ಹೋಗುವ ಮುಂದೆ ಪ್ರಸಂಗಬಿದ್ದರೆ ಮರಳಿಬರುವೆನೆಂದು ವಚನಕೊಟ್ಟರು.

ಭಾರತೀಯರ ಈ ಕೀರ್ತಿಯೂ ಅವರ ಶಕ್ತಿಯೂ ಬಿಳಿಯರನ್ನು ಕಂಗೆಡಿಸಿತು. ಅವರು ಮತ್ತಿಷ್ಟು ಅನ್ಯಾಯಕ್ಕೆ ಪ್ರವೃತ್ತರಾದರು. ಯಾವ ಟ್ರಾನ್ಸವಾಲವನ್ನು ಗೆಲೆಯಲು ಭಾರತೀಯರು ನೆರವಾದರೋ ಆ ಟ್ರಾನ್ಸವಾಲದಲ್ಲಿಯೇ ಭಾರತೀಯರು ಬರಕೂಡದೆಂಬ ಕಾಯಿದೆಯು ಮಾಡಲ್ಪಟ್ಟಿತು. ಮಹಾತ್ಮರು ಮತ್ತೆ ಮರಳಿದರು. ಅಧಿಕಾರಿಗಳಿಗೆ ಭೆಟ್ಟಿಯಾದರು. ಗಾಂಧಿಯವರು ತಮ್ಮ ಸೇವೆಯಿಂದ ಅಂತಃಕರಣವು ಬದಲಾಗಿರಬಹುದೆಂದು ಬಗೆದಿದ್ದರು. ಆದರೆ ಅದು ಸುಳ್ಳಾಯಿತು. ಪ್ರಯತ್ನಗಳೆಲ್ಲ ವ್ಯರ್ಥವಾದವು. ನಿರುಪಾಯರಾಗಿ ಹೋರಾಟವನ್ನು ಹೂಡಬೇಕಾಯಿತು. ಅರ್ಜಿಗಳಾದವು. ಶಿಷ್ಟಮಂಡಳಗಳಾದವು, ಹೇಳಿಕೊಳ್ಳುವದಾಯಿತು, ಕೇಳಿಕೊಳ್ಳುವದಾಯಿತು, ಎಲ್ಲವೂ ಹೊಳೆಯಲ್ಲಿ ಹೋಮ ಮಾಡಿದಂತಾಯಿತು. ಇದೇ ಸಮಯದಲ್ಲಿಯೇ ಝುಲು ಜನರ ಬಂಡಾಯವಾಯಿತು. ಸಾಮ್ರಾಜ್ಯಪ್ರೇಮದಿಂದ ಮಹಾತ್ಮರು ಮತ್ತೆ ನೆರವಾದರು. ಸಹಾಯಕ್ಕೆಂದು ನೀಡಿದ ಕೈಗೆ ಬಾರಕೋಲಿನ ಪೆಟ್ಟು ಬಿದ್ದಿತು. ಮತ್ತೊಂದು ರಾಕ್ಷಸವು ಮುಂದೆ ಬಂದಿತು. **ಭಾರತೀಯ ವಿವಾಹಗಳೆಲ್ಲ ಕಾಯದೆಬದ್ಧವಲ್ಲ**ವೆಂದು ಕಟ್ಟಳೆಯು ಮಾಡಲ್ಪಟ್ಟಿತು. ಇದರಿಂದ ಪತಿವ್ರತೆಯರಾದವರೆಲ್ಲರೂ ಇಟ್ಟುಕೊಂಡ ಹೆಂಗಸರಂತಾದರು. ಈ ಅಪಮಾನವು ಭಾರತೀಯರನ್ನು ಕೆರಳಿಸಿತು. ಮಹಾತ್ಮರಿಗಂತೂ ಅಸಹನೀಯವಾಯಿತು. ದೀರ್ಘವಾಗಿ ವಿಚಾರಮಾಡಿ, ನಿಶ್ಯಸ್ತ್ರರಾದ ಭಾರತೀಯರಿಗೆ ಸತ್ಯಾಗ್ರಹವೇ ಬಲಶಾಲಿಯಾದ ಶಸ್ತ್ರವೆಂದು

ತಿಳಿದು ಅದನ್ನು ರಾಜಕಾರಣದಲ್ಲಿ ಉಪಯೋಗಿಸುವದನ್ನು ನಿಶ್ಚಯಿಸಿದರು. ಆಶ್ರಮಗಳಲ್ಲಂತೂ ಸತ್ಯ, ಅಹಿಂಸೆಗಳ ಶಿಕ್ಷಣವು ನಡೆದೇಯಿತ್ತು. ಈ ರಾಕ್ಷಸೀ ಕಾಯದೆಯ ವಿರುದ್ಧ ಸತ್ಯಾಗ್ರಹ ಹೂಡುವೆವೆಂದು ಸರಕಾರಕ್ಕೆ ಆವ್ಹಾಹನವು ಕಳಿಸಲ್ಪಟ್ಟಿತು. ರಣಕಹಳೆಯು ಊದಲ್ಪಟ್ಟಿತು. ಮಹಾತ್ಮರ ಧ್ವಜದ ಕೆಳಗೆ ೨೦೦೦ ಗಂಡಸರೂ ೧೨೭ ಜನ ಹೆಂಗಸರೂ ೫೭ ಹುಡುಗರೂ ಸತ್ಯಾಗ್ರಹಕ್ಕಾಗಿ ಬಂದು ಸೇರಿದರು. ಮಹಾತ್ಮರ ಸುಪ್ರಸಿದ್ಧವಾದ ಈ ಪ್ರಯಾಣವು ( March ) ಜಗದ್ವಿಖ್ಯಾತವಾಯಿತು. ಟ್ರಾನ್ಸವಾಲವನ್ನು ಪ್ರವೇಶಿಸಬಾರದೆಂಬ ಕಾಯದೆಯಭಂಗ ಮಾಡಲ್ಪಟ್ಟಿತು. ಶಾಂತಿಸೈನ್ಯವು ಹೊರಟೊಡನೆ ಮದ್ದುಗುಂಡು ತೋಫುಗಳು ತರಲ್ಪಟ್ಟವು. ಮುಂದೆ ಬಂದರೆ ತೋಫು ಹಾರಿಸುವೆವೆಂಬ ಬೆದರಿಕೆಯೂ ಹಾಕಲ್ಪಟ್ಟಿತು. ಮಹಾತ್ಮರು ಸತ್ಯವನ್ನು ಸ್ಮರಿಸಿ ಮುಂದಡಿಯಿಟ್ಟರು. ಬೆಂಕಿಯನ್ನು ಹಚ್ಚಬೇಕೆಂದಿದ್ದ ಕೈಗಳು ನಡುಗಹತ್ತಿದವು. ಮಹಾತ್ಮರ ಆತ್ಮಿಕಬಲದ ಮುಂದೆ, ಪಶುಬಲವು ಮಣ್ಣುಗೂಡಿತು. ಸೇನಾಪತಿಗೆ ಮಹಾತ್ಮರ ತೇಜಸ್ಸನ್ನು ಸಹಿಸುವದಾಗಲಿಲ್ಲ. ಸೈನ್ಯವು ಜಯಘೋಷ ಮಾಡುತ್ತ ಮುಂದಕ್ಕೆ ಹೊರಟೇಬಿಟ್ಟಿತು. ಗಾಂಧಿಯವರ ಅಚಲವಾದ ಧೈರ್ಯವೂ ಸಾಹಸವೂ ಜಗತ್ತನ್ನೇ ತಮ್ಮ ಕಡೆಗೆ ಎಳೆದುಕೊಂಡವು. ಜಗತ್ತಿನ ವಿಚಾರದಲ್ಲಿಯೇ ಕ್ರಾಂತಿಯಾಯಿತು. ಮಹಾತ್ಮರು ಹಿಡಿಯಲ್ಪಟ್ಟರು. ಅನ್ಯಾಯದ ಕಾಯದೆಗಳೆಲ್ಲ ಮಣ್ಣುಗೂಡುವವರೆಗೆ ಈ ಕಾಯದೆಭಂಗವು ನಡೆದೇ ತೀರಬೇಕೆಂದು ಸಂದೇಶವನ್ನು ಕೊಟ್ಟರು. ಅಲ್ಲಲ್ಲಿ ಹರತಾಳಗಳಾದವು. ಕೂಲಿಯವರನ್ನು ಯುರೋಪಿಯನ್ನರು ಮೊಲಗಳಂತೆ ಗುಂಡುಹಾಕಿ ಕೊಂದರು. ಇದರಿಂದ ಆಫ್ರಿಕಾದಲ್ಲಿಯೂ ಭಾರತದಲ್ಲಿಯೂ ಹಾಹಾಕಾರವೆದ್ದಿತು. ಚಳವಳಿಯ ಬೇಗೆಯು ಬ್ರಿಟಿಶ ರಾಜ್ಯವನ್ನು ಸುಟ್ಟುಬಿಡುವದೆಂಬ ಭಾವನೆಯು ಜಾಗೃತವಾಯಿತು. ಮಹಾತ್ಮರು ಹಿಡಿಯಲ್ಪಟ್ಟರು. ಬಿಡಲ್ಪಟ್ಟರು. ಮತ್ತೆ ಹಿಡಿಯಲ್ಪಟ್ಟರು. ಜೇಲಿನಲ್ಲಿ ಮಹಾತ್ಮರಂಥ ಜಗದ್ವಂದ್ಯವ್ಯಕ್ತಿಗಳು ಚಕ್ಕಿಬೀಸಿದರು, ಒಣ ರೊಟ್ಟಿ ತಿಂದರು, ಪೆಟ್ಟುಗಳನ್ನು ತಿಂದರು, ಭಂಗಿಯ ಕೆಲಸವನ್ನು ಕೂಡ ಮಾಡಿದರು. ಇದರಿಂದ ಮಹಾತ್ಮರ ಆತ್ಮಶಕ್ತಿಯು ಹೆಚ್ಚಾಯಿತೇ ವಿನಃ

ಕಡಿಮೆಯಾಗಲಿಲ್ಲ. ಇವರ ಸಾವಿರಾರು ಅನುಯಾಯಿಗಳು ಸಹಿಸಿದ ಕಷ್ಟವನ್ನೂ ಭೋಗಿಸಿದ ಯಮಯಾತನೆಯನ್ನೂ ವರ್ಣಿಸುವದೇ ಅಸಾಧ್ಯ. ಈ ಸತ್ಯಾಗ್ರಹದಲ್ಲಿ ಯುರೋಪಿಯನ್ನರು ಸಹ ಭಾಗ ವಹಿಸಿದ್ದರು. ಈ ಅಸನ್ವಿತ ಕೃತ್ಯಗಳನ್ನೆಲ್ಲ ಕಂಡು ಭಾರತದ ವ್ಹಾಯಿಸರಾಯರಾದ ಲಾರ್ಡ ಹಾರ್ಡಿಂಜರು ಇದರಲ್ಲಿ ಕೈಹಾಕಿದರು. ಬ್ರಿಟಿಶ ಪಾರ್ಲಿಮೆಂಟಿಗೆ ತಿಳಿಸಿದರು. ಕೊನೆಗೆ ಸರಕಾರವು ಶರಣು ಬರಬೇಕಾಯಿತು. ಮಾನ ಉಳಿಸಿಕೊಳ್ಳುವದಕ್ಕಾಗಿ ಒಂದು ಕಮೀಶನ್ ನಿಯಮಿಸಲ್ಪಟ್ಟಿತು. ಗಾಂಧಿಯವರೂ ಮುಖಂಡರೂ ಬಿಡಲ್ಪಟ್ಟರು. ಜನರಲ್ **ಸ್ಮಟ್ಸರಿಗೂ** ಗಾಂಧಿಯವರಿಗೂ ಪತ್ರವ್ಯವಹಾರವು ಪ್ರಾರಂಭವಾಯಿತು. ಗಾಂಧಿಯವರು ಕೆಳಗಿನ ಬೇಡಿಕೆಗಳನ್ನು ಮುಂದಿಟ್ಟರು.

(೧) ಮೂರು ಪೌಂಡಿನ ಕಾಯಿದೆಯು ಹಿಂತೆಗೆದುಕೊಳ್ಳಲ್ಪಡಬೇಕು.

(೨) ಹಿಂದೂ ಮುಸಲ್ಮಾನ ಪಾರ್ಸಿ ಮೊದಲಾದವರ ಧರ್ಮದಂತೆ ಆದ, ಆಗುವ, ವಿವಾಹಗಳೆಲ್ಲವೂ ಕಾಯದೆಬದ್ಧವೆಂದು ತಿಳಿಯಲ್ಪಡಬೇಕು.

(೩) ಸುಶಿಕ್ಷಿತ ಭಾರತೀಯರು ಅಪ್ಪಣೆ ಇಲ್ಲದೆ ಇಲ್ಲಿ ಬರಬಹುದು.

(೪) ಆರಂಜದ ವಿಷಯದಲ್ಲಿ ಆದ ಕರಾರುಗಳಲ್ಲಿ ಸುಧಾರಣೆಯಾಗಬೇಕು.

(೫) ಸದ್ಯಕ್ಕಿರುವ ಕಾಯಿದೆಗಳನ್ನು ಬಳಿಕೆಯಲ್ಲಿ ತರುವಾಗ ಸದ್ಯಕ್ಕೆ ಇರುವ ಅಧಿಕಾರಿಗಳಿಗೆ ಹಾನಿತಟ್ಟದಂತೆ ಎಚ್ಚರತೆಗೆದುಕೊಳ್ಳಬೇಕು.

ಈ ಎಲ್ಲ ಕರಾರುಗಳನ್ನು ಕಮೀಶನ್ನಿನವರೂ ಒಪ್ಪಿಕೊಂಡರು. ಎಲ್ಲ ಕೈದಿಗಳು ಬಿಡಲ್ಪಟ್ಟರು. ಸಣ್ಣ ಪುಟ್ಟ ಮಾತುಗಳೆಲ್ಲವೂ ಸರಿಪಡಿಸಲ್ಪಟ್ಟವು. ಹೀಗೆ ೧೯೦೬ರಲ್ಲಿ ಪ್ರಾರಂಭವಾದ ಸತ್ಯಾಗ್ರಹ ಸಮರವು ೧೯೧೪ರ ೩೦ನೇ ಜೂನದವರೆಗೆ ಅಖಂಡವಾಗಿ ನಡೆದು ಯಶಸ್ವಿಯಾಯಿತು. ಮಹಾತ್ಮರ ಸತ್ಯಾಗ್ರಹದ ತತ್ವಗಳು ರಾಜಕೀಯ ಕ್ಷೇತ್ರದಲ್ಲಿ ನವಮನ್ವಂತರವನ್ನುಂಟು ಮಾಡಿದವು.

---

# ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಸೇನಾಪತಿಗಳು

ಮಹಾತ್ಮಾ ಗಾಂಧಿಯವರು ಭಾರತಕ್ಕೆ ಮರಳಿ ಬರುವಾಗ, ಭಾರತವನ್ನು ಬಿಡುವಾಗಿನ ಗಾಂಧಿಗಳಿರಲಿಲ್ಲ. ವಿದ್ಯಾರ್ಥಿಯು ಗುರುಕುಲವನ್ನು ಸೇರಿ ಪಾಂಡಿತ್ಯವನ್ನು ಸಂಪಾದಿಸಿ, ಅನುಭವವನ್ನು ಪಡೆದು ಅನುಗ್ರಹವನ್ನು ಸಂಪಾದಿಸಿಕೊಂಡು ಬರುವಂತೆ ಮಹಾತ್ಮರು ಇಂದು ಪ್ರಬಲವಾದ ಶಕ್ತಿವಂತರಾಗಿ ಬಂದಿದ್ದರು. ೧೮೯೩ರಿಂದ ೧೯೧೪ರ ವರೆಗಿನ ಇಪ್ಪತ್ತು ವರ್ಷಗಳಲ್ಲಿ ಅಭ್ಯಾಸದಿಂದಲೂ ಪ್ರಯೋಗಗಳಿಂದಲೂ ಸತ್ಯಾಗ್ರಹ ಧರ್ಮವನ್ನು ಹುಡುಕಿ ತೆಗೆದಿದ್ದರು. ಇವರ ತತ್ವಗಳು ಸಪ್ರಯೋಗವಾಗಿ ಮನಗಂಡವಾಗಿದ್ದವು. ಇಂದಿನ ಅವರ ವಾಣಿಯಲ್ಲಿ ದಿವ್ಯ ತೇಜಸ್ಸು ತುಂಬಿತ್ತು. ತಮ್ಮ ತತ್ವಗಳ ಸ್ಫುಟವಾದ ಬೆಳಕಿನಲ್ಲಿ ಅವರು ಸಾಗಿದ್ದರು. ಪೂರ್ವ ಪಶ್ಚಿಮಗಳ ಐಕ್ಯವು ಅಶಕ್ಯವಿಲ್ಲ. ನಾವೆಲ್ಲರೂ ಮಾನವರು. ಜಗತ್ತಿನಲ್ಲಿ ಎರಡೇ ಸಂಸ್ಕೃತಿಗಳಿವೆ. **ಒಂದು ಆಧ್ಯಾತ್ಮಿಕ, ಎರಡನೆಯದು ಆಧಿಭೌತಿಕ. ಈ ಎರಡೂ ಸಂಸ್ಕೃತಿಗಳ ಸಮ್ಮೇಳನದ ಸುಮಧುರವಾದ ಫಲವೇ ಪೂರ್ವ ಪಶ್ಚಿಮಗಳ ಐಕ್ಯವು. ಜಗತ್ತಿನ ಸುಖಶಾಂತಿಗಳಿಗೆ ಸದ್ಗುಣಾಚರಣೆಯೇ ಕಾರಣವು. ವಿಶ್ವಬಂಧುತ್ವವು ನೆಲೆಗೊಳ್ಳಬೇಕಾದರೆ, ಜಗತ್ತಿನಲ್ಲಿಯ ಆಧಿಭೌತಿಕದ ಆಸುರೀವೃತ್ತಿಯು ನಷ್ಟವಾಗಲೇಬೇಕು. ಯುದ್ಧವು ಮಾಯವಾಗಿ ಅದರ ಸ್ಥಳವನ್ನು ಅಹಿಂಸೆಯು ವ್ಯಾಪಿಸಬೇಕು. ಜಗತ್ತಿನ ವಿಶ್ವಶಾಂತಿಗೆ, ಅಹಿಂಸೆಯೊಂದೇ ಉಪಾಯವು. ವೇದಾಂತದ ಶುಷ್ಕವಾದ ವಾದವೆಂದರೆ ಧರ್ಮ ಖಲ. ದೈವೀಗುಣಗಳನ್ನು ರಕ್ತದ ಕಣಕಣಗಳಲ್ಲಿ ಅಳವಡಿಸಿಕೊಳ್ಳುವದೇ ನಿಜವಾದ ಧರ್ಮವು.** ಇವೇ ಮೊದಲಾದ ನಿಚ್ಚಳವಾದ ಸಿದ್ಧಾಂತಗಳ ಮೇಲೆ ತಮ್ಮ ಜೀವನವನ್ನು ಕಟ್ಟಿದ್ದರು. ಆಫ್ರಿಕೆಯಲ್ಲಿಯ ಭಾರತೀಯರ ಅಪಮಾನಕ್ಕೆ ಭಾರತದ ಪಾರತಂತ್ರ್ಯವೇ ಕಾರಣವೆಂದು

ಅವರಿಗೆ ಮನವರಿಕೆಯಾಗಿ ಹೋಗಿತ್ತು. ೧೯೧೫ರಲ್ಲಿ ವಿಶ್ರಾಂತಿಗೆಂದು ಭಾರತಕ್ಕೆ ಬಂದರು. ಏನಿದೆ ಇಲ್ಲಿ?

ಎಲ್ಲಿನೋಡಿದಲ್ಲಿ ಹೇಡಿತನ, ಕೃತ್ರಿಮಜೀವನ, ಮಿಥ್ಯಾಪೌರುಷ, ಅರ್ಥವಿಲ್ಲದ ಜೊಳ್ಳುಗೊತ್ತುವಳಿಗಳು. ಇವೆಲ್ಲವನ್ನು ಕಂಡು ಮಹಾತ್ಮರಿಗೆ ಅತ್ಯಂತ ವೇದನೆಯಾಯಿತು. ರಾಷ್ಟ್ರದಲ್ಲಿಯ ಅಸತ್ಯಜೀವನವು ಮಾಯವಾಗಿ, ನಿರ್ಭಯರಾದ ಸತ್ಯಜೀವಿಗಳು ಬರದೆ ನಮಗೆ ಗೆಲವು ಇಲ್ಲೆಂದು ಬಗೆದು, ಸತ್ಯ, ಅಹಿಂಸಾ, ಬ್ರಹ್ಮಚರ್ಯ, ನಿರ್ಭಯತ್ವ ಮೊದಲಾದ ತತ್ವಗಳ ಪ್ರಚಾರವಾಗುವದು ಅವಶ್ಯವೆನಿಸಿತು. ಅದಕ್ಕಾಗಿ ಆಶ್ರಮವು ತೆರೆಯಲ್ಪಟ್ಟಿತು. ಪ್ರಚಾರಕ್ಕೆ ಪ್ರಾರಂಭವಾಯಿತು. ತಮ್ಮ ತತ್ವಗಳ ಪ್ರಚಾರಕ್ಕಾಗಿಯೂ, ಭಾರತದ ಪರಿಸ್ಥಿತಿಯನ್ನು ನಿರೀಕ್ಷಿಸುವದಕ್ಕಾಗಿಯೂ, ಎಲ್ಲ ಮುಖಂಡರೊಡನೆ ಸತ್ಯಾಗ್ರಹದ ತತ್ವಗಳನ್ನು ಚರ್ಚಿಸುವದಕ್ಕಾಗಿಯೂ ಭಾರತದ ಸಂಚಾರವು ಕೈಕೊಳ್ಳಲ್ಪಟ್ಟಿತು. ಪರಿಸ್ಥಿತಿಯು ತಮ್ಮ ಅಳವಿನೊಳಗೆ ಬರುವ ಕಾಲನಿರೀಕ್ಷಣೆಯನ್ನು ಮಹಾತ್ಮರು ಮಾಡಹತ್ತಿದರು.

ಭಾರತಕ್ಕೆ ಮರಳಿ ಬರುವಾಗ ಸಾಮ್ರಾಜ್ಯಸೇವೆಯನ್ನು ಬೆನ್ನಿಗೆ ಹಚ್ಚಿಕೊಂಡೇ ಬಂದಿದ್ದರು. ಮೊದಲಿನಿಂದಲೂ ಸಾಮ್ರಾಜ್ಯದ ಭಕ್ತರು. ಸಾಮ್ರಾಜ್ಯವು ಮಾನವಜನಾಂಗದ ಒಂದು ಘಟಕವು. ಇದರಿಂದ ವಿಶ್ವಬಂಧುತ್ವಕ್ಕೆ ಒಳ್ಳೇ ಅನುಕೂಲವೆಂದು ಅವರಿಗೆ ಅನಿಸಿತ್ತು. ಆದ್ದರಿಂದಲೇ ಹಿಂದುಸ್ಥಾನವು ಬ್ರಿಟಿಶರ ಸಾಮ್ರಾಜ್ಯದಲ್ಲಿಯೇ ಇರಬೇಕೆಂದೂ ಗಂಡಾಂತರದ ಸಮಯದಲ್ಲಿ ಅವರಿಗೆ ನೆರವಾಗುವದು ಕರ್ತವ್ಯವೆಂದೂ ಉಪದೇಶಿಸಹತ್ತಿದರು. ೧೯೧೫ರಲ್ಲಿ ಸಾಮ್ರಾಜ್ಯದ ವಿಷಯವಾಗಿದ್ದ ಅವರ ವಿಚಾರಗಳೆಂದರೆ—

'I discovered that the British Empire had certain ideals with which I have fallen in love and one of those ideals is that every subject of the British Empire has the freest scope possible for his energies and honour and whatever he thinks

is due to his conscience. I think that this is true of the British Empire as it not true of any other Government. . . . . Hence my loyalty to the British Empire'

'ಬ್ರಿಟಿಶ ಸಾಮ್ರಾಜ್ಯದ ಕೆಲವು ಉಚ್ಚಧ್ಯೇಯಗಳಲ್ಲಿ ನನಗೆ ಉತ್ಕಟವಾದ ಪ್ರೇಮವಿದೆ. ಬ್ರಿಟಿಶ ಸಾಮ್ರಾಜ್ಯದ ಪ್ರತಿಯೊಂದು ಹಿತಕ್ಕೂ ಅದರ ಶಕ್ತಿಗೂ, ಮಾನಕ್ಕೂ ಸಾಲುವಷ್ಟು ಅವಕಾಶವಿರುವದು (ಅವನ ಬೆಳವಣಿಗೆಗೆ ಯಾವ ಪ್ರತಿಬಂಧಕವೂ ಇಲ್ಲ) ಇದು ಬ್ರಿಟಿಶ ಸಾಮ್ರಾಜ್ಯಕ್ಕಷ್ಟೇ ಅನ್ವಯಿಸುವಂತೆ ಇನ್ನಾವ ಸರಕಾರಕ್ಕೂ ಸರಿಯಾಗಲಾರದು. ಆದ್ದರಿಂದ ಬ್ರಿಟಿಶ ಸಾಮ್ರಾಜ್ಯವನ್ನು ನಾನು ಪ್ರೀತಿಸುತ್ತಿರುವೆನು.'

೧೯೧೫ರಲ್ಲಿಯೂ ಮಹಾತ್ಮರಂಥ ವಿಭೂತಿಗಳಿಗೆ ಬ್ರಿಟಿಶರ ಕುಟಿಲ ನೀತಿಯು ತಿಳಿದಿರಲಿಲ್ಲವೆಂಬುದು ಆಶ್ಚರ್ಯಕರವಾಗಿದೆ. ಇರಲಿ. ಅವರ ವಿಚಾರಗಳಂತೂ ಹೀಗೆ ಇದ್ದವು. ಆದ್ದರಿಂದಲೇ ನಿರ್ಮಲಾಂತಃಕರಣಿಗಳಾದ ಮಹಾತ್ಮರು ಹಿಂದುಸ್ಥಾನವು ತನ್ನ ಉನ್ನತಿಯನ್ನು ಮಾಡಿಕೊಳ್ಳಬೇಕಾದರೆ, ಸಾಮ್ರಾಜ್ಯದ ಸಂಗಡ ಏಕಜೀವವಾಗುವದೇ ಇರುತ್ತದೆಂದೂ, ಅವರಿಗೆ ಸಹಾಯ ಮಾಡುವದು ಕರ್ತವ್ಯವೆಂದೂ ಹೇಳಿದ್ದರಲ್ಲಿ ಆಶ್ಚರ್ಯವಿಲ್ಲ. ಇಷ್ಟೇ ಅಲ್ಲ. ಇದಕ್ಕಿಂತಲೂ, ಮುಂದೆ ಹೋಗಿ, 'ನನ್ನ ಬಾಂಧವರ ಹೆಜ್ಜೆಗಳನ್ನು ತಡೆಯುವ ಸಾಮರ್ಥ್ಯವು ನನ್ನಲ್ಲಿದ್ದರೆ, ರಾಷ್ಟ್ರೀಯ ಸಭೆಯು ಎಲ್ಲ ಗೊತ್ತುವಳಿಗಳನ್ನು ಹಿಂದಕ್ಕೆ ತೆಗೆದುಕೊಳ್ಳಿರಿ ಎಂದು ನಾನು ಹೇಳಬಹುದು. ಯುದ್ಧದ ಪರಿಸಮಾಪ್ತಿಯಾಗುವವರೆಗೆ, ಸ್ವರಾಜ್ಯ ಅಥವಾ ಹೊಣೆಗಾರಿಕೆಯ ಸ್ವರಾಜ್ಯದ ಮಾತನ್ನೂ ಸಹ ಎತ್ತಬಾರದೆಂದು ನನ್ನ ಅಭಿಪ್ರಾಯ. ಸಾಮ್ರಾಜ್ಯದ ಸಂಕಟಕಾಲದಲ್ಲಿ, ಹಿಂದುಸ್ಥಾನವು ತನ್ನಲ್ಲಿರುವ ಎಲ್ಲ ಸಶಕ್ತ ಜನರ ಹೋಮವನ್ನೂ ರಣಾಂಗಣದಲ್ಲಿ ಮಾಡಬೇಕು, ಕೇವಲ ಈ ಕೃತ್ಯದಿಂದಲೇ ಹಿಂದುಸ್ಥಾನವು ಸಾಮ್ರಾಜ್ಯದ ಅತ್ಯಂತ ಪ್ರೀತ್ಯಾಸ್ಪದವಾದ ಗೆಳೆಯನಾಗುವದೆಂದು ನನ್ನ ಅಂತಃಕರಣವು ಹೇಳುತ್ತದೆ. ಇದಲ್ಲದೆ ಜಾತಿ ವರ್ಣದ್ವೇಷ ಮೊದಲಾದವುಗಳೆಲ್ಲವೂ ಮಣ್ಣುಗೂಡುತ್ತವೆ. ಇದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. 'The Gateway of our freedom is on the French soil.' ನಮ್ಮ ಸ್ವಾತಂತ್ರ್ಯದ ಮಹಾದ್ವಾರವು

ಫ್ರಾನ್ಸದ ರಣಭೂಮಿಯು ಎಂಬುದೇ ಇವರ ಮತ. ಹೀಗೆಯೇ ಉಪದೇಶ ಮಾಡುತ್ತ ಭಾರತೀಯ ರಾಜಕಾರಣದಲ್ಲಿಯೂ ಮನಸ್ಸು ಹಾಕಹತ್ತಿದರು.

ಮಹಾತ್ಮರ ಈ ವೃತ್ತಿಯು ಕುಟಿಲರಾದ ಬ್ರಿಟಿಶರಿಗೆ, ಆನಂದವನ್ನುಂಟುಮಾಡಿರಬಹುದು. ಆದರೆ, ಮಹಾತ್ಮರ ದಿವ್ಯಶಕ್ತಿಯ ಬಗ್ಗೆ ಮಾತ್ರ ಅವರಿಗೆ ಯಾವಾಗಲು ಭಯವು ಇದ್ದೇಇದ್ದಿರಬಹುದಲ್ಲವೆ! ಭಾರತದ ಆಯುಷ್ಯಕ್ರಮಣವು ಆರಂಭವಾದಂತೆ, ಭಾರತೀಯ ರಾಜನೀತಿಯ ಕುಟಿಲತನವೂ ಮೆಲ್ಲನೆ ಅವರ ಅಂತಃಕರಣಕ್ಕೆ ಅಂಟಹತ್ತಿತು. ಪ್ರಕಾಶವೂ ಬೀಳಹತ್ತಿತು. ಸಣ್ಣಪುಟ್ಟ ಚಕಮಕಿಗಳೂ ಆದವು.

ಮಹಾತ್ಮರು ಬಂದು ಇನ್ನೂ ಬಹಳ ದಿವಸಗಳಾಗಿದ್ದಿಲ್ಲ. **ವಿರಮಗಾವದ ಜಕಾತಿಯ** ಪ್ರಕರಣವು ಅವರ ಕಿವಿಯ ಮೇಲೆ ಬಿದ್ದಿತು. ಜನರಿಗಾಗುವ ತೊಂದರೆಗಳಿಗಾಗಿ ಗವ್ಹರ್ನರರನ್ನು ಕಂಡರು. ವ್ಹಾಯಿಸರಾಯರ ಸಂಗಡ ಪತ್ರವ್ಯವಹಾರವನ್ನು ಮಾಡಿದರು. ಚೇಮ್ಸಫರ್ಡರು ಗಾಂಧಿಯವರ ಸ್ವಭಾವವನ್ನು ಅರಿತವರಿದ್ದುದರಿಂದ ಜಕಾತಿಯನ್ನು ತೆಗೆದುಹಾಕಬೇಕೆಂದು ಮುಂಬಯಿ ಸರಕಾರಕ್ಕೆ ತಿಳಿಸಿದರು. ಈ ಕಾರ್ಯವು ಚಿಕ್ಕದಾದರೂ, ಜನರ ಲಕ್ಷ್ಯವು ಮಾತ್ರ ಇದರಿಂದ ಮಹಾತ್ಮರ ಕಡೆಗೆ ಹೊರಳಿತು. ಇಷ್ಟರಲ್ಲಿಯೇ ಚಂಪಾರಣ್ಯದ ಪ್ರಕರ್ಣವು ಉಪಸ್ಥಿತವಾಯಿತು. ಗಾಂಧಿಯವರು ಸ್ವತಃ ಮೈಮೇಲೆ ಈ ಪ್ರಕರ್ಣವನ್ನು ತೆಗೆದುಕೊಂಡರು. ಅಲ್ಲಿಗೆ ಹೋದರು. ಅಲ್ಲಿಯ ಅಧಿಕಾರಿಯು ಒಮ್ಮೆಲೆ ಬೆದರಿ, ೨೪ ತಾಸಿನಲ್ಲಿ ಚಂಪಾರಣ್ಯವನ್ನು ಬಿಟ್ಟು ಹೋಗಬೇಕೆಂದನು. ಗಾಂಧಿಯವರ ಶಕ್ತಿಯು ಹೊರಬಿದ್ದಿತು. ತಾವು ಜನರನ್ನು ಹುರಿದುಂಬಿಸಲಿಕ್ಕೆ ಬಂದಿಲ್ಲವೆಂದೂ, ಅವರ ಸ್ಥಿತಿಗತಿಗಳನ್ನು ತಿಳಿದುಕೊಂಡು ಹೋಗಲು ಬಂದಿರುವೆನೆಂದೂ, ಆದ್ದರಿಂದ ತಾವು ಹೋಗುವದಿಲ್ಲೆಂದೂ ಕಾಯದೆಭಂಗವನ್ನು ಮಾಡುವೆನೆಂದೂ ಗರ್ಜಿಸಿದರು. ಮಾಡಿಯೇಬಿಟ್ಟರು. ಈ ಗರ್ಜನೆಯು ಆಸೇತುಹಿಮಾಚಲ ಕೇಳಿಸಿತು. ಗಾಂಧಿಯವರ ತೇಜಸ್ಸಿನ ಶಿಳೆಮಿಂಚು ಹೊಡೆದಂತಾಯಿತು. ಸರಕಾರವು

ಸಕಾಲಕ್ಕೆ ಎಚ್ಚತ್ತು ಅವರ ಶಕ್ತಿಗೆ ಆಸ್ಪದವನ್ನೀಯಬಾರದೆಂದು ಬಗೆದು ಅವರ ಹೇಳಿಕೆಯಂತೆಯೇ ನಡೆದುಕೊಂಡಿತು. ಮಹಾತ್ಮರ ಈ ವಿಜಯವು ಭಾರತೀಯರಲ್ಲಿ ಸತ್ಯಾಗ್ರಹದ ಅಂಕುರವನ್ನು ಬಿತ್ತಿತು. ಮಹಾತ್ಮರ ನೇತೃತ್ವದ ಕಡೆಗೆ ಭಾರತೀಯರ ಅಂತಃಕರಣವು ಎಳೆಯಹತ್ತಿತು.

ಮಹಾತ್ಮರು ಭಾರತೀಯರ ಅಂತಃಕರಣವನ್ನು ಮೆಲ್ಲಮೆಲ್ಲನೆ ತಮ್ಮ ಕಡೆಗೆ ಸೆಳೆಯಹತ್ತಿದರು. ಚಂಪಾರಣ್ಯದ ಪ್ರಕರ್ಣವನ್ನು ಮುಗಿಸು ವಷ್ಟರಲ್ಲಿಯೇ ಅಹಮ್ಮದಾಬಾದದ ಗಿರಣಿಯ ಕೂಲಿಕಾರರ ಸಂಪಿಗೆ ಕೈಹಾಕಿದರು. ತಮ್ಮ ತಪಃಪ್ರಭಾವದಿಂದ ಕೂಲಿಕಾರರಿಗೆ ಹಕ್ಕು ಗಳನ್ನು ದೊರಕಿಸಿಕೊಟ್ಟರು. ಇದರಿಂದ ಭಾರತೀಯ ಕೂಲಿಕಾರರ ಅಂತಃಕರಣಗಳೆಲ್ಲವೂ ಮಹಾತ್ಮರ ಕಡೆಗೆ ತಿರುಗಿದವು. ಇಷ್ಟಾದರೂ ಪ್ರತ್ಯಕ್ಷವಾಗಿ, ಸರಕಾರದ ಸಂಗಡ ಇನ್ನೂ ಕೈಗೆ ಕೈ ಹತ್ತಿದ್ದಿಲ್ಲ. ಪ್ರಸಂಗವು ಬಂದೊದಗಿತು. ಖೇಡಾಜಿಲ್ಹೆಯಲ್ಲಿ ಅತ್ಯಂತ ಬರಗಾಲ ಬಿದ್ದಿತು. ಅರ್ಜಿಗಳು ಹೋದವು. ಶಿಷ್ಟಮಂಡಲವು ಹೋಯಿತು. ಕಾಯದೆ ಮಂಡಲದಲ್ಲಿ ಪ್ರಯತ್ನಗಳಾದವು. ಎಲ್ಲವೂ ವ್ಯರ್ಥವಾದವು. ಕೊನೆಗೆ ಗಾಂಧಿಯವರು, ಸತ್ಯಾಗ್ರಹವನ್ನು ಮಾಡಲು ಉಪದೇಶಿಸಿದರು. ಜನರು ಸತ್ಯಾಗ್ರಹದ ಪ್ರತಿಜ್ಞೆಯನ್ನು ತೆಗೆದುಕೊಂಡರು. ಸತ್ಯಾಗ್ರಹದ ಶಿಕ್ಷಣವು ಕೊಡಲ್ಪಟ್ಟಿತು. ಸರಕಾರವೂ ದಬ್ಬಾಳಿಕೆಯನ್ನು ಪ್ರಾರಂಭ ಮಾಡಿತು. ಎತ್ತುಗಳೂ ಆಹಾರದ ಸಾಮಾನಗಳೂ ಜಪ್ತುಮಾಡಲ್ಪಟ್ಟವು. ಲಿಲಾವಿಗೆ ತೆಗೆಯಲ್ಪಟ್ಟವು. ಯಾರೂ ಕೇಳುವವರು ಇಲ್ಲದೆ ಹೋಯಿತು. ಹಾಹಾಃಅನ್ನುವದರಲ್ಲಿಯೇ ಚಳವಳಿಯು ಉಗ್ರರೂಪವನ್ನು ತಾಳಿತು. ಸರಕಾರವು ಚಳವಳಿಯ ಉಗ್ರರೂಪವನ್ನು ಕಂಡು ದಬ್ಬಾಳಿಕೆಯಿಂದ ನಿಲ್ಲುವದು ಶಕ್ಯವಿಲ್ಲೆಂದು ಮನಗಂಡು ಒಪ್ಪಂದವನ್ನು ಮಾಡಿಕೊಂಡಿತು. ರೈತರ ತೆರಿಗೆಯು ಬಿಟ್ಟುಬಿಡಲಾಯಿತು. ಇದರಿಂದ ರೈತರಲ್ಲಿಯೂ ಆತ್ಮವಿಶ್ವಾಸ ಉಂಟಾಯಿತು. ಭಾರತೀಯರ ಅಂತಃಕರಣದಲ್ಲಿ ತಮ್ಮಲ್ಲಿದ್ದ ಶಕ್ತಿಯ ಅರಿವು ಉಂಟಾಯಿತು. ಚಂಪಾರಣ್ಯದಲ್ಲಿ ಬಿತ್ತಲ್ಪಟ್ಟ ಸತ್ಯಾಗ್ರಹದ ಬೀಜಕ್ಕೆ ಅಂಕುರವು ಒಡೆಯಿತು. ಹಿಂದೀಯರೆಲ್ಲರೂ

ಮಹಾತ್ಮರ ಬಗ್ಗೆ ಪೂಜ್ಯಬುದ್ಧಿಯನ್ನು ತಾಳಿದರು. ಹೀಗೆ ಮಹಾತ್ಮರು ಭಾರತದಲ್ಲಿ ಬೆಳೆಯುತ್ತ ನಡೆದರು.

ಮಹಾಯುದ್ಧವು ನಿಕರಕ್ಕೆ ಬಂದಿತ್ತು. ಭಾರತೀಯರ ಸಹಾಯವು ಅತ್ಯವಶ್ಯ ಬೇಕಾಗಿತ್ತು. ವ್ಹಾಯಿಸರಾಯರಾದ ಚೇಮ್ಸ್‌ಫರ್ಡರು ಹೆಚ್ಚಿನ ಸಹಾಯಕ್ಕಾಗಿ ಸಭೆಕರೆದರು. ಗಾಂಧಿಯವರಿಗೂ ಆಮಂತ್ರಣ ವಿತ್ತು. ಸಹಾಯ ಮಾಡಲು ಒಪ್ಪಿಕೊಂಡರು. ಆದರೆ ರಾಷ್ಟ್ರದ ಮುಖಂಡರಾದ ಲೋಕಮಾನ್ಯರನ್ನೂ ಮತ್ತು ಅಲ್ಲೀ ಬಂಧುಗಳನ್ನೂ ಆಮಂತ್ರಿಸದಿದ್ದ ಬಗ್ಗೆ ನಿಷೇಧ ವ್ಯಕ್ತ ಮಾಡಿದರು; ಮತ್ತು ಸ್ವರಾಜ್ಯ ಹಾಗು ಖಿಲಾಫತ್ತಿನ ವಿಷಯವಾಗಿ ಎಚ್ಚರವನ್ನು ಕೊಟ್ಟರು. ಇದರಿಂದ ಬ್ರಿಟಿಶರ ಅಂತಃಕರಣಕ್ಕೆ ಗುಂಡು ಒಡೆದಂತಾಯಿತು.

ಇತ್ತ ಭಾರತೀಯ ರಾಜಕೀಯ ವಾತಾವರಣವು ಕಾಯುತ್ತಲೇ ನಡೆದಿತ್ತು. ಹೋಮರೂಲ ಚಳವಳಿಯು ಭರದಿಂದ ಹಬ್ಬುತ್ತ ನಡೆದಿತ್ತು. ೧೯೧೭ರಲ್ಲಿ ಸಾಮ್ರಾಜ್ಯದ ಮುಖ್ಯಮಂತ್ರಿಗಳು ಹಿಂದುಸ್ಥಾನವು ಯುದ್ಧ ಭೂಮಿಯಲ್ಲಿ ತೋರಿದ ಸಾಹಸವನ್ನು ಬಾಯಿತುಂಬ ಹೊಗಳಿ ಭಾರ ತಕ್ಕೆ ಸ್ವರಾಜ್ಯವನ್ನು ಕ್ರಮೇಣ ಕೊಡಲಾಗುವದೆಂತಲೂ ಅದರ ಮೊದ ಲನೇ ಭಾಗನೆಂದು ಯುದ್ಧವು ನಿಂತನಂತರ ಕೊಡಲಾಗುವದೆಂದೂ ಸಾರಿ ಹಿಂದೀ ಜನರ ಮೂಗಿಗೆ ತುಪ್ಪವನ್ನು ಹಚ್ಚಿ ಕೂಡ್ರಿಸಿದ್ದರು.

ಮೊಂಟೆಗ್ಯೂ ಸಾಹೇಬರ ದೀರ್ಘವಾದ ಸಂಚಾರದ ಫಾಸರ್ೂ ಆಗಿತ್ತು. ಸುಧಾರಣೆಗಳ ವರದಿಯ ಸಿದ್ಧತೆಯೂ ನಡೆದಿತ್ತು. ಇತ್ತ ಸರ ಕಾರವು ಗಂಡಾಂತರದೊಳಗಿಂದ ಪಾರಾಗಲೂ ಬೇಕು, ಹಿಂದೀಯರನ್ನು ಸಂತುಷ್ಟಗೊಳಿಸಿರುವೆವೆಂದು ತೋರಿಸಲೂ ಬೇಕು ಎಂಬ ಆಲೋಚನೆ ಯಲ್ಲಿತ್ತು. ಒಂದು ಕೈಯಿಂದ ಅಧಿಕಾರಗಳನ್ನು ಕೊಟ್ಟಂತೆ ತೋರಿಸಿ, ಮತ್ತೊಂದು ಕೈಯಿಂದ ಇದ್ದ ಸ್ವಾತಂತ್ರ್ಯವನ್ನೂ ಹರಣ ಮಾಡುವ ಯುಕ್ತಿಗೆ ಕೈಹಾಕಿತು. ಕ್ರಾಂತಿಕಾರರು ಬಂಡನ್ನು ಎಬ್ಬಿಸುವರು ಆದ್ದ ರಿಂದ ಕ್ರಾಂತಿಯನ್ನು ನದೆಬಡೆಯಲು ಹೊಸ ಅಧಿಕಾರವು ಬೇಕೆಂದು ಒಂದು ಕಮೀಶನ್ ನಿಯಮಿಸಲ್ಪಟ್ಟಿತು. ಹೋಮರೂಲ ಚಳವಳಿಯ

ದೆಸೆಯಿಂದ ಆನಿಬಿಸ್ಟುಂಟ, ಅರುಂಡೇಲ ಮೊದಲಾದವರು ಸ್ಥಾನಬದ್ಧ ರಾದರು. ಲೋಕಮಾನ್ಯರ ವಿಲಾಯತಿಯ ಪ್ರವಾಸವು ತಡೆಯಲ್ಪಟ್ಟಿತು. ಈ ಎಲ್ಲ ವಾತಾವರಣವನ್ನು ನೋಡಿದರೆ, ಸುಧಾರಣೆಗಳು ಎಂಥವು ಹೊರಬೀಳುವವೆಂಬ ಕಲ್ಪನೆಯು ಮೆಲ್ಲನೆ ಕಾಣಹತ್ತಿತು. ಸುಧಾರಣೆಯ ವರದಿಯೂ ಹೊರಬಿದ್ದಿತು. ಹುರುಳಿಲ್ಲದ ಹೊತ್ತಿಗೆಯನ್ನು ಕಂಡು ಎಲ್ಲರ ಭ್ರಮನಿರಸನವಾಯಿತು. ಆಶೆಗಳೆಲ್ಲವೂ ಹಾರಿಹೋದವು. ಮುಖ್ಯ ಮಂತ್ರಿಗಳಾದ ಲಾಯಿಡ ಜಾರ್ಜರ ಸವಿಮಾತುಗಳ ವಚನವನ್ನೂ ಸುಧಾರಣೆಗಳ ಸ್ವರೂಪವನ್ನೂ ನೋಡಿದ ಕೂಡಲೆ, ಬ್ರಿಟಿಶ ಸರಕಾರವು **'ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡನೆಂಬ'** ಧೋರಣ ವನ್ನೇ ಸ್ವೀಕರಿಸಿದೆ ಎಂಬುದು ಕಂಡು ಹೋಯಿತು. ಇದೇ ಸುಮಾ ರಿಗೆ ೧೯ನೇ ಜುಲೈ ೧೯೧೮ರಲ್ಲಿ ರೌಲೆಟ್ ಸಾಹೇಬರ ವರದಿಯೂ ಪ್ರಸಿದ್ಧವಾಯಿತು. ಅದರ ವಿಕೃತರೂಪವನ್ನೂ ರಾಕ್ಷಸೀ ಆಕಾಂಕ್ಷೆ ಯನ್ನೂ ಕಂಡು ಭಾರತೀಯರ ಮೈ ಜುಮ್ಮೆಂದಿತು.

ರೌಲೆಟ್ ಕಾಯದೆಯ ವಿಷಯವಾಗಿ ಎಲ್ಲ ಪಕ್ಷದ ಜನರಿಗೂ ಕೆಡ ಕೆನಿಸಿತು. ಫೆಬ್ರುವರಿ ೬ನೇ (೧೯೧೯) ತಾರೀಖಿಗೆ ಕಾಯದೆಮಂಡಲದಲ್ಲಿ ಬಿಲ್ಲು ಮಂಡಿಸಲ್ಪಟ್ಟಿತು. ಜನರಲ್ಲಿ ಅಸಂತೋಷ ಭರದಿಂದ ಹಬ್ಬಿತು. ಆದರೆ ಹೊಟ್ಟೆಯೊಳಗಿನ ಸಿಟ್ಟು ರೊಟ್ಟಿಯೊಳಗಿದ್ದಿಲ್ಲ ಅಥವಾ ಇದ್ದುದರ ಅರಿವೂ ಆಗಿದ್ದಿಲ್ಲ; ಎಲ್ಲರೂ ಆಲೋಚನೆಗೊಳಗಾದರು. ಸಭೆಗಳಾದವು. ಗೊತ್ತುವಳಿಗಳಾದವು. ಇಂಗ್ಲಂಡಕ್ಕೆ ತಂತಿಗಳು ಹೋದವು. ಎಲ್ಲವೂ ಬೋರ್ಗಲ್ಲ ಮೇಲೆ ಮಳೆಗರೆದಂತಾಯಿತು. ಕಾಯದೇಮಂಡಲದಲ್ಲಿ ಎಲ್ಲ ಪ್ರಜಾಪ್ರತಿನಿಧಿಗಳು ವಿರೋಧಿಸಿದರು. ಖೇದಗೊಂಡರು. ಶಪಿಸಿ ದರು. ವಿರೋಧಪಕ್ಷದ ನಾಯಕರಾದ ವ್ಹಿ. ಜೆ. ಪಟೇಲರು

'So far as we non-official members are concerned we have made our position perfectly clear. We have with one voice made it clear to you that we are opposed to this measure. We have made at clear that the passage of this

measure will put an end to all constitutional agitation in the country.'

'ಪ್ರಜಾಪ್ರತಿನಿಧಿಗಳಾದ, ಸ್ವತಂತ್ರರಾದ ನಾವು ನಮ್ಮ ಅಭಿಪ್ರಾಯವನ್ನು ಹೇಳಿದ್ದೇವೆ. ಈ ಕಾಯಿದೆಗಳಿಗೆ ವಿರುದ್ಧವಾಗಿರುವೆವೆಂಬುದನ್ನು ನಾವು ಏಕಕಂಠದಿಂದ ಸಾರಿದ್ದೇವೆ. ಈ ಕಾಯಿದೆಯು ನಮ್ಮ ದೇಶದಲ್ಲಿಯ ಕಾಯಿದೆಬದ್ಧ ಚಳವಳಿಯನ್ನು ಕೊಂದುಹಾಕುವದರಲ್ಲಿ ಎಳ್ಳಷ್ಟು ಸಂದೇಹವಿಲ್ಲೆಂದು ಸಾರಿಹೇಳಿದ್ದೇವೆ.'

ಎಂದು ಹೇಳಿದರು. ಎಲ್ಲವೂ ಅರಣ್ಯರೋದನ. ಯಾರು ಕೇಳಬೇಕು? ಭಾರತದ ಮೊರೆ ಕೇಳುವ ಗಂಡಸು ಯಾರೂ ಭಾರತದಲ್ಲಿ ಇದ್ದಿಲ್ಲವೆ? ಇದ್ದರು. ಅವರು ಮುಂದೆ ಬರುವದಕ್ಕಾಗಿಯೇ ಈ ಸಮಯವನ್ನು ಪರಮಾತ್ಮನು ತಂದನು.

ಈ ಸಮಯಕ್ಕೆ ಭಾರತದಲ್ಲಿ ಮೂರು ಪಕ್ಷಗಳಿದ್ದವು. ಕ್ರಾಂತಿಕಾರಕ ಪಕ್ಷ, ವೀರ ಪಕ್ಷ, ಮಂದ ಪಕ್ಷ. ಕ್ರಾಂತಿಕಾರಕ ಪಕ್ಷವು ಗುರುವಿಲ್ಲದ ಮಠವಾಗಿ ನಿರ್ವೀರ್ಯವಾಗಿತ್ತು. ಮಂದಪಕ್ಷವಂತೂ ಹೇಳಿ ಕೇಳಿ ಭಿಕ್ಷಾಂದೇಹಿಯು. ಹೊಸ ಸುಧಾರಣೆಗಳು ಬರುತ್ತವೆ; ಇಂಥ ಸಮಯದಲ್ಲಿ ವಿರೋಧವೇಕೆ? ಅಪಮಾನವಾದರೂ ಸಹನ ಮಾಡಬೇಕು ಎಂಬುದೇ ಇವರ ಫಲಶ್ರುತಿ. ಇನ್ನು ಉಳಿಯಿತು ವೀರ ಪಕ್ಷ. ವೀರಪಕ್ಷದ ಮುಂದಾಳುಗಳಾದ ಲೋಕಮಾನ್ಯರು ಈ ಸಮಯದಲ್ಲಿ ಇಂಗ್ಲಂಡದಲ್ಲಿದ್ದರು. ಈ ಪಕ್ಷದ ಜನರ ಅಂತಃಕರಣದಲ್ಲಿ ಸಂಕಟವಾದರೂ ಏನು ಮಾಡಬೇಕೆಂಬುದನ್ನು ತಿಳಿಯದಾಗಿದ್ದರು. ನಾಯಕನಿಲ್ಲದ ನಾವೆಯಂತೆ ವೀರ ಪಕ್ಷದ ಗತಿಯಾಯಿತು. ಲೋಕಮಾನ್ಯರ ಪಶ್ಚಿಮ ಯಾತ್ರೆಯು ನಿಜವಾಗಿಯೂ ಪಶ್ಚಿಮವೇ ಆಯಿತು. ಭಾರತದ ಪ್ರಖರ ಪ್ರತಾಪ ರವಿಯು ಅಸ್ತಂಗತವಾದಂತಾಯಿತು. ಈ ಸಂಧಿ ಕಾಲದಲ್ಲಿ—ರಾಷ್ಟ್ರದ ಸಂಕಟ ಕಾಲದಲ್ಲಿ ರಾಷ್ಟ್ರವು ಯಾರನ್ನು ಮೊರೆ ಹೊಗಬೇಕು? ಬ್ರಿಟಿಶ ಸಾಮ್ರಾಜ್ಯದೊಡನೆ ನಿಂತು ಹೋರಾಡುವ ಶಕ್ತಿಗಳೆಂದರೆ ಎರಡೇ ಎರಡೆಂದು ಭಾರತಕ್ಕೆ ಅನಿಸಿತ್ತು. ಒಂದು ಪಶ್ಚಿಮದಲ್ಲಿದ್ದದರಿಂದ ಸ್ವಾಭಾವಿಕವಾಗಿಯೇ ಪೂರ್ವದಲ್ಲಿ ಉದಯವಾಗುತ್ತಿದ್ದ ಮಹಾತ್ಮರ ಕಡೆಗೆ

ಭಾರತವು ಆಶಾದೃಷ್ಟಿಯಿಂದ ನೋಡುವದು ಸಹಜವಿದೆ. ಮಹಾತ್ಮರು ಅಖಿಲ ಭಾರತೀಯ ಕ್ಷಿತಿಜದ ಮೇಲೆ ಬಂದರು.

ರೌಲೆಟ್ ಕಾಯಿದೆಯ ವಿಷಯವಾಗಿ ವ್ಹಾಯಿಸರಾಯರಿಗೆ ಓಲೆಗಳನ್ನು ಬರೆದರು. ತಂತಿಗಳನ್ನು ಕೊಟ್ಟರು. ಅರ್ಜಿಗಳನ್ನು ಕಳಿಸಿದರು. ಎಲ್ಲವೂ ಕಸದಬುಟ್ಟಿಗೆ ಎಸೆಯಲ್ಪಟ್ಟವು. ಯುದ್ಧದಲ್ಲಿ ಸಹಾಯ ಮಾಡಿದ ಬಗ್ಗೆ ಭಾರತಕ್ಕೆ ಅತ್ಯಂತ ಪಶ್ಚಾತ್ತಾಪವಾಯಿತು. ಹಿಂದುಸ್ಥಾನದ ಸಹಾಯವೇನೂ ಸಣ್ಣದಿರಲಿಲ್ಲ. ೧೪ ಲಕ್ಷ ಜನರು ರಣಭೂಮಿಗೆ ಕಳಿಸಲ್ಪಟ್ಟಿದ್ದರು. ೧ ಲಕ್ಷಕ್ಕಿಂತಲೂ ಹೆಚ್ಚು ಜನರು ಬ್ರಿಟಿಶರಿಗಾಗಿ ರಕ್ತಸುರವಿ ಪ್ರಾಣವನ್ನು ಕಳೆದುಕೊಂಡರು. ೨ ಲಕ್ಷ ದನಗಳು ಕಳಿಸಲ್ಪಟ್ಟವು. ೨೦೦ ಕೋಟಿ ರೂಪಾಯಿಗಳನ್ನು ಕೊಟ್ಟಿತು. ಇಷ್ಟೆಲ್ಲ ಸಹಾಯ ಮಾಡಿದ ಭಾರತಕ್ಕೆ ರೌಲೆಟ್ ಕಾಯಿದೆಯ ಉಡುಗೊರೆಯೇ! ಇದರಿಂದ ಮಹಾತ್ಮರ ಸಾತ್ವಿಕರೋಷವು ಹೊರಹೊಮ್ಮಿತು. **ಮಹಾತ್ಮರು ಸತ್ಯಾಗ್ರಹದ ಗುಡುಗು ಹಾಕಿದರು. ರಾಷ್ಟ್ರದಲ್ಲೆಲ್ಲ ಕೋಲ್ಮಿಂಚು** ಹೊಡೆದಂತಾಯಿತು. ಒಂದು ಮಂಡಳವನ್ನು ಏರ್ಪಡಿಸಿ, ೨೪ನೇ ಫೆಬ್ರುವರಿಯ ದಿವಸ ಸತ್ಯಾಗ್ರಹದ ಘೋಷಣೆಯು ಮಾಡಲ್ಪಟ್ಟಿತು.

## ಪ್ರತಿಜ್ಞಾಪತ್ರಿಕೆ

Being consciously of opinion that the Bills known as the Indian Criminal law (Amendment) Bill No. 1 of 1919 and the Criminal law (Emergency powers) Bill No. II of 1919 are unjust, subversive of the principles of liberty and justice and destructive of the elementary rights of individuals, on which the safety of the Community as a whole and the state itself is based, we solemnly affirm that in the event of those Bills becoming Law and until they are withdrawn, we shall refuse civilly to obey these laws and such other laws as a Committee, to be here-after appointed may

think fit and further affirm that in this struggle we will faithfully follow truth and refrain from violence to life person or property.'

'ಇಂಡಿಯನ್ ಕ್ರಿಮಿನಲ್ ಲಾ ಅಮೆಂಡಮೆಂಟ ೧೯೧೯ ರ ಮೊದಲನೇ ಬಿಲ್ಲು ಮತ್ತು ಕ್ರಿಮಿನಲ್ ಲಾ (ಇಮರ್ಜೆನ್ಸಿ ಪಾವರ್ಸ) ೨ನೇ ಬಿಲ್ಲು ಇವೆರಡೂ ಅನ್ಯಾಯವಾದಂತಹವೂ ನ್ಯಾಯ ಮತ್ತು ಸ್ವಾತಂತ್ರ್ಯಕ್ಕೆ ವಿಘಾತಕವಾದಂತಹವೂ ವ್ಯಕ್ತಿಯಲ್ಲಿರುವ ಸ್ವಾಭಾವಿಕ ಸಾಧಾರಣ ಹಕ್ಕುಗಳನ್ನು ಕೂಡ ನಾಶಪಡಿಸುವಂತಹವೂ ಆಗಿರುತ್ತವೆ ಯಾವ ತತ್ವಗಳಿಂದ ರಾಷ್ಟ್ರದ ಕಲ್ಯಾಣವಾಗುತ್ತಿದೆಯೋ ಆ ತತ್ವಗಳನ್ನೇ ಈ ಕಾಯದೆಗಳು ಬುಡಮೇಲು ಮಾಡುತ್ತವೆ. ಆದುದರಿಂದ ಈ ಕಾಯದೆಗಳನ್ನೂ ಕಾಯದೇಭಂಗದ ಸಲುವಾಗಿ ನಿಯಮಿಸಿದ ಕಮೀಟಿಯವರು ಗೊತ್ತುಪಡಿಸುವ ಕಾಯದೆಗಳನ್ನು ಮುರಿಯುತ್ತೇವೆಂದು ನಾವು ಪ್ರತಿಜ್ಞೆಯನ್ನು ಮಾಡುತ್ತೇವೆ; ಮತ್ತು ಈ ಕಾಯದೆಭಂಗದಲ್ಲಿ ಯಾರ ಜೀವಿತಕ್ಕೂ, ಆಸ್ತಿಗೂ ನಾವು ಯಾವ ತರದ ತೊಂದರೆಯನ್ನೂ ಕೊಡಲಿಕ್ಕಿಲ್ಲ. ಮತ್ತು ಎಂಥ ಪ್ರಸಂಗ ಬಂದರೂ ಸತ್ಯದ ಮಾರ್ಗವನ್ನು ನಾವು ಬಿಡಲಿಕ್ಕಿಲ್ಲ.'

ಈ ಪ್ರತಿಜ್ಞೆಯನ್ನು ತೆಗೆದುಕೊಂಡು ಸತ್ಯಾಗ್ರಹಕ್ಕೆ ಸಿದ್ಧರಾಗುವ ಮೊದಲು ೬ನೇ ಎಪ್ರೀಲ (೧೯೧೯) ದಿವಸ ಭಾರತದಲ್ಲೆಲ್ಲ ಹರತಾಳವನ್ನು ಆಚರಿಸಬೇಕು, ಉಪವಾಸ ಮಾಡಬೇಕು, ಎಲ್ಲರೂ ತಮ್ಮ ತಮ್ಮ ಉದ್ಯೋಗ ವ್ಯವಸಾಯಗಳನ್ನು ನಿಲ್ಲಿಸಬೇಕು, ಎಂದು ಮಹಾತ್ಮರು ಸಾರಿದರು. ರಾಷ್ಟ್ರದ ನಾಡಿಯನ್ನು ಪರೀಕ್ಷಿಸುವದೇ ಈ ಕಾರ್ಯಕ್ರಮದ ಉದ್ದೇಶವಿದ್ದಿತು.

ಮಹಾತ್ಮರು ಇಲ್ಲಿಂದಲೇ ಭಾರತದ ನವ ಇತಿಹಾಸಕ್ಕೆ ಪ್ರಾರಂಭ ಮಾಡಿದರೆಂದು ಹೇಳಬಹುದು. ರಾಷ್ಟ್ರದಲ್ಲಿ ಅಪೂರ್ವ ಉತ್ಸಾಹವು ಕಂಡಿತು. ಮುಂಬಯಿ ಮತ್ತು ದಿಲ್ಲಿಯಲ್ಲಿಯ ಉತ್ಸಾಹವು ಅವರ್ಣನೀಯವು. ಕೇಂದ್ರಸಮಿತಿಯವರು ರಾಜದ್ರೋಹವೆಂದು ಜಪ್ತಾದ ವಾಙ್ಮಯವನ್ನು ಮಾರಿ ಆ ಕಾಯಿದೆಯನ್ನು ಮುರಿಯಬೇಕೆಂದು ಅಪ್ಪಣೆಯನ್ನಿತ್ತರು. ಗಾಂಧಿಯವರು ಸತ್ಯಾಗ್ರಹವೆಂಬ ಮಾಸಪತ್ರಿಕೆಯನ್ನು ಅಪ್ಪಣೆ ಇಲ್ಲದೆ ಪ್ರಸಿದ್ಧಿಸಿದರು. ಜಪ್ತಾದ ಎಷ್ಟೋ ಪುಸ್ತಕಗಳು ಮಾರಲ್ಪಟ್ಟವು. ರಾಷ್ಟ್ರದಲ್ಲೆಲ್ಲ ಹರತಾಳವು ಪಾಲಿಸಲ್ಪಟ್ಟಿತು. ಸಭೆಗಳಾದವು. ಮಹಾತ್ಮರು ಸಂಚಾರವನ್ನು ಕೈಕೊಂಡು, ಅಹಿಂಸೆಯನ್ನು

ಉಪದೇಶಿಸಹತ್ತಿದರು. ಈ ಸತ್ಯಾಗ್ರಹದ ದಿನವು ಮೊದಲು ೩೦ನೇ ಮಾರ್ಚವೆಂದು ಗೊತ್ತಾದ್ದರಿಂದ ದಿಲ್ಲಿ ಪಂಜಾಬಗಳಲ್ಲಿ ಅಂದೇ ಹರ ತಾಳವು ಪಾಲಿಸಲ್ಪಟ್ಟಿತು. ಇದರ ಝಳವು ಸರಕಾರಕ್ಕೆ ಹತ್ತಿತು. ಚಳವಳಿಯು ಯಾವ ಸ್ವರೂಪವನ್ನು ತಾಳುವದೋ ಎಂದು ಸರಕಾರವು ವಿವಂಚನೆಗೊಳಗಾಯಿತು. ಗಾಂಧಿಯವರಿಗೆ ದಿಲ್ಲಿ ಪಂಜಾಬಗಳಿಗೆ ತೀವ್ರವೇ ಬರಲು ಆಮಂತ್ರಣವು ಬಂದಿತು. ಗಾಂಧಿಯವರು ೭ನೇ ಎಪ್ರಿಲಕ್ಕೆ ಹೊರಟರು. ಶಾಂತತೆಯು ಭಂಗವಾಗುವದೆಂದು ಮಹಾತ್ಮರನ್ನು **ಕೋಸಿ** ಎಂಬಲ್ಲಿ ಹೋಗಕೂಡದೆಂದು ಪ್ರತಿಬಂಧಿಸಿದರು. ಮಹಾತ್ಮರು ಅಪ್ಪಣೆಯನ್ನು ಮನ್ನಿಸಲಿಲ್ಲ. ಕಾಯದೇಭಂಗವನ್ನು ಮಾಡಿದರು. ಅವರನ್ನು ಹಿಡಿದು ಮುಂಬಯಿಗೆ ತಂದುಬಿಟ್ಟರು. ಅತ್ತ ಲಾಹೋರ ಅಮೃತಸರಗಳಲ್ಲಿ ಆದ ಪ್ರಚಂಡವಾದ ಹರತಾಳಗಳಿಗಾಗಿ ಡಾ। ಕಿಚಲು, ಡಾ। ಸತ್ಯಪಾಲರನ್ನು ಗಡಿಪಾರು ಮಾಡಿದರು. ಎಲ್ಲಿಗೆ ಒಯ್ದರೆಂಬುದು ತಿಳಿಯಲಿಲ್ಲ. ಖಟ್ಲೆಯಿಲ್ಲ, ನ್ಯಾಯವಿಚಾರಣೆಯಿಲ್ಲ. ಒಮ್ಮೆಲೆ ಹೀಗೆ ಎತ್ತಿಕೊಂಡು ಹೋದುದನ್ನು ಕಂಡು ಜನರ ತಲೆ ತಿರುಗಿತು. ದಂಗೆಗೆ ಆರಂಭವಾಯಿತು. ಗೋಳೀಬಾರಾದವು. ಕೊನೆಗೆ ಅಮೃತಸರದ ಕೊಲೆಯಾಯಿತು. ಜನರಲ್ ಡಾಯರನ ಅಮಾನುಷವಾದ ಈ ಕೊಲೆಯು ಜಗತ್ಪ್ರಸಿದ್ಧವಾಗಿದೆ. ದಿಲ್ಲಿಯಲ್ಲಿಯೂ ಗೋಳೀಬಾರಾಯಿತು. ಶಾಂತತೆಯು ಉಳಿಯಲಿಲ್ಲ. ಇದನ್ನು ಕಂಡು ಮಹಾತ್ಮರು ೧೮ನೇ ಎಪ್ರಿಲ ದಿವಸ ಸತ್ಯಾಗ್ರಹವನ್ನು ನಿಲ್ಲಿಸಿಬಿಟ್ಟರು. ಮಳೆ ನಿಂತರೂ ಮಳೆಯ ಹನಿಯು ನಿಲ್ಲಲಿಲ್ಲವೆಂಬಂತೆ ಸರಕಾರದ ದಬ್ಬಾಳಿಕೆಯು ನಿಲ್ಲಲಿಲ್ಲ. ಲಾಹೋರ, ಅಮೃತಸರಗಳಲ್ಲಿ **ಮಾರ್ಶಲ ಲಾ** ದಂಡಿನ ಆಡಳಿತೆಯು ಆರಂಭಿಸಲ್ಪಟ್ಟಿತು. ಈ ಆಳಿಕೆಯು ೧೫ ತಿಂಗಳ ವರೆಗೆ ನಡೆಯಿತು. ಈ ಆಳಿಕೆಯಲ್ಲಿ ನಡೆದ ಅಮಾನುಷ ಕೃತ್ಯಗಳು ರಾಕ್ಷಸೀಯವಾಗಿದ್ದವು. ಜನರಿಗೆ ಹೊಟ್ಟೆ ಹೊಸೆಯಲು ಹಚ್ಚೋಣ, ಮಕ್ಕಳನ್ನು ಬಿಸಿಲಿನಲ್ಲಿ ಓಡಿಸೋಣ, ಪತಿವೃತೆಯರ ಮಾನಭಂಗ ಮಾಡೋಣ, ಇತ್ಯಾದಿ ಅನನ್ವಿತ ಕೃತ್ಯಗಳು ನಡೆದವು. ಇದೆಲ್ಲವನ್ನೂ ಕಂಡು

ಭಾರತವು ಸಂತಪ್ತವಾಯಿತು. ಮಹಾತ್ಮರ ಸಾಮ್ರಾಜ್ಯ ಪ್ರೀತಿಯೂ ವಿಶ್ವಾಸವೂ ಮಣ್ಣುಗೂಡಿದವು. ಬ್ರಿಟಿಶ ಜನಾಂಗವು ಕಾಡುಜನಾಂಗ ವೆಂದು ಡಂಗುರ ಹೊಡೆಯಲ್ಪಟ್ಟಿತು. ಈ ಕೊಲೆಯ ಹಾಗು ದಂಡಿನ ಆಳಿಕೆಯ ವೃತ್ತಾಂತವನ್ನು ಕೇಳಿ, ಅನೇಕ ಯುರೋಪಿಯನ್ ಸದ್ಗೃಹ ಸ್ಥರು ಕೂಡ ದಬ್ಬಾಳಿಕೆಯನ್ನು ನಿಷೇಧಿಸಿದರು.

ಸರಕಾರವು ತನ್ನ ಕುಟಿಲ ನೀತಿಗೆ ಅನುಸರಿಸಿ ಇತ್ತ ಹಿಂದೀಯರ ರಕ್ತದ ಕಾಲುವೆಯನ್ನು ಹರಿಸುತ್ತ ಪಾರ್ಲಿಮೆಂಟಿನಲ್ಲಿ ಸುಧಾರಣೆಗಳ ಘೋಷಣೆಯನ್ನು ಮಾಡಿತು. ಪಂಜಾಬದ ಅತ್ಯಾಚಾರದ ವಿಚಾರವಾಗಿ ಒಂದು ಕಮೀಟಿಯನ್ನೂ ನಿಯಮಿಸಿತು. ಕಾಂಗ್ರೆಸ್ಸು ಈ ಕಮೀಟಿಗೆ ಬಹಿಷ್ಕಾರವನ್ನು ಹಾಕಿ ೧೯೧೯ನೇ ನವ್ಹಂಬರದಲ್ಲಿ ತಮ್ಮದೇ ಒಂದು ವಿಚಾರಣಾ ಕಮೀಟಿಯನ್ನು ನಿಯಮಿಸಿತು. ಅದರಲ್ಲಿ ಮಹಾತ್ಮರೂ ಇದ್ದರು. ಸುಧಾರಣೆಗೆ ಅನುಕೂಲ ವಾತಾವರಣವು ಉತ್ಪನ್ನವಾಗ ಬೇಕೆಂದು ರಾಜಕೀಯ ಕೈದಿಗಳ ಬಿಡುಗಡೆಯನ್ನು ಮಾಡಿದರು. ಅಲ್ಲೀ ಬಂಧುಗಳು, ಡಾ। ಕಿಚಲು, ಡಾ। ಸತ್ಯಪಾಲ, ರಾಮಭುಜದತ್ತ ಚೌಧರಿ ಮೊದಲಾದವರು ಬಿಡಲ್ಪಟ್ಟರು. ದಂಡಿನ ಆಳಿಕೆಯಲ್ಲಿ ಶಿಕ್ಷೆ ಹೊಂದಿದ ಜನರನ್ನೂ ಬಿಟ್ಟರು. ಇದೇ ಸಮಯದಲ್ಲಿ **ಅಮೃತಸರ ಕಾಂಗ್ರೆಸ್ಸು** ಆಯಿತು. ಸುಧಾರಣೆಗಳ ವಿಷಯವಾಗಿ ಅಸಂತೋಷವೂ ಅಸಮಾ ಧಾನವೂ ವ್ಯಕ್ತಮಾಡಲ್ಪಟ್ಟಿತು. ಪಂಜಾಬದ ಕೊಲೆಯನ್ನೂ ದಂಡಿನ ಆಳಿಕೆಯನ್ನೂ ತೀವ್ರವಾಗಿ ನಿಷೇಧಿಸಿ **ಜನರಲ್ ಡಾಯರ ಮತ್ತು ಓಡ್ವಾಯರರನ್ನು** ನೌಕರಿಯಿಂದ ತೆಗೆಯಬೇಕೆಂದು ತನ್ನ ಅಭಿಪ್ರಾಯ ವನ್ನು ವ್ಯಕ್ತಪಡಿಸಿತು. ಖಿಲಾಫತ ವಿಷಯದಲ್ಲಿ ಹಿಂದೀ ಮುಸಲ್ಮಾನರ ಅಂತಃಕರಣವು ನೊಯ್ಯದಂತೆ ಪ್ರಶ್ನೆಯನ್ನು ಬಿಡಿಸಬೇಕೆಂದೂ ನಿರ್ಣಯ ವಾಯಿತು. ಆದರೆ ಮುಂದೆ ಏನು ?

ಕೊಲೆಯ ವಿಚಾರಣಾ ಕಮೀಟಿಗಳೆರಡೂ ಕಾರ್ಯ ಮಾಡಿದವು. ಕಾಂಗ್ರೆಸ ವಿಚಾರಣಾ ಕಮೀಟಿಯು ತನ್ನ ವರದಿಯನ್ನು ಮಾರ್ಚಿನಲ್ಲಿ ಹೊರಗೆಡವಿತು. ೧೭೦೦ ಜನ ಸಾಕ್ಷಿಗಳನ್ನು ತೆಗೆದುಕೊಂಡು, ' ಓಡ್ವಾ

ಯರನ ದಬ್ಬಾಳಿಕೆಯ ಆಳಿಕೆಯೂ, ರೌಲೆಟ್ ಕಾಯದೆಯ ಚಳವಳಿಯೂ ಜನರಲ್ಲಿ ಕ್ಷೋಭವನ್ನುಂಟು ಮಾಡಿದವು. ಸತ್ಯಾಗ್ರಹ ಮತ್ತು ಹರತಾಳ ಚಳವಳಿಗಳಿಂದ ಜನರಲ್ಲಿ ಜಾಗೃತಿ ಹುಟ್ಟಿ ಹಿಂಸಾಮಯ ಪ್ರವೃತ್ತಿಗಳಿಗೆ ತಡೆ ಹಾಕಿ ಹೆಚ್ಚಿನ ಅನರ್ಥಗಳಿಂದ ಜನರನ್ನು ಉಳಿಸಿದವು. ಗಾಂಧಿ, ಸತ್ಯಪಾಲ, ಕಿಚಲೂರವರನ್ನು ಹಿಡಿದದ್ದರಿಂದಲೇ ಶಾಂತತೆಯು ಭಂಗವಾಯಿತು. ಇದಕ್ಕೆ ಸರಕಾರವೇ ಕಾರಣ. ದಂಡಿನ ಆಳಿಕೆಯನ್ನು ಪ್ರಾರಂಭಿಸಲು ಕಾರಣವಿರಲಿಲ್ಲ. ಜಾಲಿಯನ್‌ವಾಲಾಬಾಗದ ಕೊಲೆಯು ಅಮಾನುಷ ಕೃತ್ಯವು. ದಂಡಿನಾಳಿಕೆಯು ರಾಕ್ಷಸರಿಗೆ ಒಪ್ಪುವಂತಹದು. ಈ ಎಲ್ಲ ಅನ್ಯಾಯಗಳ ಪರಿಮಾರ್ಜನೆಯಾಗಬೇಕಾದರೆ, ಇವರೆಲ್ಲರನ್ನೂ ಮನೆಗೆ ಕಳಿಸಬೇಕು, ಅನ್ಯಾಯ ಮಾಡಿದವರ ವಿಚಾರವಾಗಿ ಶಿಕ್ಷೆಯಾಗಬೇಕು, ಎಂದು ಕಾಂಗ್ರೆಸ್ಸಿನವರು ಅರ್ಥಾತ್ ಮಹಾತ್ಮರು ತಮ್ಮ ವರದಿಯನ್ನು ಪ್ರಸಿದ್ಧಿಸಿದರು. ಸರಕಾರದವರ ವರದಿಯೂ ಮೇ ತಿಂಗಳಲ್ಲಿ ಪ್ರಸಿದ್ಧವಾಯಿತು. ಕೊಲೆಗೆ ಗಾಂಧಿಯವರ ಚಳವಳಿಯೇ ಕಾರಣವೆಂದು ಅವರು ತೋರಿಸಿದ್ದರು. ಅದರಲ್ಲಿಯೂ ಮತಭೇದವಿದ್ದಿತು. ಅನ್ಯಾಯದ ಹಾಗು ಅಮಾನುಷಕೃತ್ಯಗಳನ್ನು ಮಾತ್ರ ಒಪ್ಪಿಕೊಂಡಿದ್ದರು.

ಮಾರ್ಚ ತಿಂಗಳಿನಲ್ಲಿ ಕೂಡಿದ ಅಖಿಲ ಭಾರತೀಯ ಕಾಂಗ್ರೆಸ ಕಮೀಟಿಯಲ್ಲಿ ಖಿಲಾಫತ ಪ್ರಶ್ನೆಯು ಯೋಗ್ಯರೀತಿಯಿಂದ ಬಿಡಿಸಲ್ಪಡದಿದ್ದರೆ, ಅಸಹಕಾರದ ಬಂಡನ್ನು ಹೂಡಬೇಕೆಂದು ಮಹಾತ್ಮರು ಸೂಚಿಸಿದರು. ಮಾರ್ಚ ೧೦ನೇ ತಾರೀಖಿನ ದಿವಸ ಮಹಾತ್ಮರು ತಮ್ಮ ಸ್ಪಷ್ಟ ಅಭಿಪ್ರಾಯವಿದ್ದ ಪತ್ರಿಕೆಯನ್ನು ತೆಗೆದಿದ್ದರು. ಇದನ್ನು ವಿಚಾರಿಸುವದಕ್ಕಾಗಿ, ಸಪ್ಟಂಬರದಲ್ಲಿ ವಿಶೇಷ ಅಧಿವೇಶನವೊಂದನ್ನು ಕೂಡಿಸಬೇಕೆಂದೂ ನಿರ್ಣಯವಾಗಿತ್ತು.

ರೌಲೆಟ್ ಕಟ್ಟಳೆಯಾಯಿತು, ಪಂಜಾಬದ ಕೊಲೆಯೂ ಆಯಿತು, ಹಂಟರ ಕಮೀಟಿಯೂ ಆಯಿತು, ಖಿಲಾಫತ್ತಿನ ಕೊಲೆಯೂ ಆಯಿತು, ವಿಜಾಪುರವೂ ಆಯಿತು, ಗೋಳಗುಮ್ಮಟವೂ ಆಯಿತು—ಮುಂದೇನು ? ಹಿಂದೀ ಜನರ ಬೇಡಿಕೆಗಳು ಕಸದ ಬುಟ್ಟಿಗೆ ಎಸೆಯಲ್ಪಟ್ಟವು. ಜನರಲ್,

ಡಾಯರ, ಓಡ್ವಾಯರರಿಗೆ, ಶಿಕ್ಷೆಯ ಬದಲು ಅವರ ಬಾಹದ್ದೂರಿಕೆಗಾಗಿ ಇಂಗ್ಲಂಡದಲ್ಲಿ ಸನ್ಮಾನಸಮಾರಂಭಗಳು ನಡೆದವು. ಕಾಣಿಕೆಗಳು ಅರ್ಪಿಸಲ್ಪಡಹತ್ತಿದವು. ಖಿಲಾಫತ್ತಿನ ವಿಷಯವಾಗಿ ಕೊಟ್ಟ ವಚನಗಳು ಭಂಗಮಾಡಲ್ಪಟ್ಟವು. ಸ್ವಾಭಿಮಾನಿಯಾದ ರಾಷ್ಟ್ರವು ಇದನ್ನು ಸಹನಮಾಡಬಹುದೇ? ವಂಗಭಂಗದ ಚಳವಳಿಯಲ್ಲಿಯೂ ಇದೇ ಪರಿಸ್ಥಿತಿಯಿದ್ದಿತು. ಲಾರ್ಡ ಕರ್ಝನನು ಬ್ರಿಟಿಶಸಾಮ್ರಾಜ್ಯಕ್ಕೆ ಬೆಂಕಿಯನ್ನಿಟ್ಟನು, ಡಾಯರನು ಅದನ್ನು ಚನ್ನಾಗಿ ಹೊತ್ತಿಸಿದನು. ವಂಗಭಂಗವು ಲೋಕಮಾನ್ಯರನ್ನು ಬಹಿರಂಗಕ್ಕೆ ಎಳೆಯಿತು. ಖಿಲಾಫತ್ತಿನ ವಚನಭಂಗವೂ ಪಂಜಾಬಿನ ಕೊಲೆಯೂ ಮಹಾತ್ಮರನ್ನು ವಿಶ್ವರಂಗಕ್ಕೆ ತಂದವು.

ಮಹಾತ್ಮರ ಸಾತ್ವಿಕ ಕ್ರೋಧಾಗ್ನಿಯು ಹೊರಹೊಮ್ಮಿತು. ಅಸಹಕಾರದ ತುತೂರಿಯ ಸಪ್ಪಳವು ಕೇಳಬರಹತ್ತಿತು. ೧೯೨೦ರ ೧ ನೇ ಜೂನ ದಿವಸ ಅಖಿಲ ಭಾರತ ಖಿಲಾಫತ ಕಮೀಟಿಯು ನೆರೆಯಿತು. ಮುಸಲ್ಮಾನರ ಬೇಡಿಕೆಗಳು ಯೋಗ್ಯ ರೀತಿಯಿಂದ ಬಿಡಿಸಲ್ಪಡದಿದ್ದರೆ, ೧ ನೇ ಅಗಸ್ಟಕ್ಕೆ ಅಸಹಕಾರವು ಪ್ರಾರಂಭಿಸಲ್ಪಡುವದೆಂದು ಸಾರಲ್ಪಟ್ಟಿತು.

ಮಹಾತ್ಮರು ಅಸಹಕಾರದ ಸಿದ್ಧತೆಯನ್ನು ನಡೆಯಿಸಿದರು. **ಯಂಗ ಇಂಡಿಯಾ** ಪತ್ರವು ರಣಗರ್ಜನೆಯನ್ನು ಮಾಡಹತ್ತಿತು. ಹಿಂದೂಮುಸಲ್ಮಾನರ ಐಕ್ಯ, ಸತ್ಯಾಗ್ರಹ ಧರ್ಮಗಳು, ಸರಕಾರದ ದಬ್ಬಾಳಿಕೆಗಳಿಂದ ಪತ್ರವು ತುಂಬಿತುಳುಕಹತ್ತಿತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ೧॥ ಸಾವಿರವಿದ್ದ ಚಂದಾದಾರರ ಸಂಖ್ಯೆಯು ೪೦ ಸಾವಿರಕ್ಕೆ ಮುಕ್ಕಿತು. ಅಂದ ಮೇಲೆ ಅವರ ಗರ್ಜನೆಯು ಎಂತಹದಿರಬೇಕು. ಮಹಾತ್ಮರು ತಮ್ಮ ತತ್ವ ಪ್ರಚಾರಕ್ಕಾಗಿ ಭಾರತ ಸಂಚಾರವನ್ನು ಕೈಕೊಂಡರು. ಮಹಾತ್ಮರ ದಿವ್ಯ ಆತ್ಮಿಕ ತೇಜಸ್ಸಿನಿಂದ ಅಲ್ಲೀ ಬಂಧುಗಳು ಮಹಾತ್ಮರನ್ನು ಬಂದು ಕೂಡಿದರು. ಅಲ್ಲೀ ಬಂಧುಗಳ ವೀರ ಗರ್ಜನೆಗಳಿಂದ ಇಡೀ ರಾಷ್ಟ್ರದಲ್ಲಿ ನವಶಕ್ತಿಯ ಸಂಚಾರವಾಯಿತು. ಅಸಹಕಾರ ಆಂದೋಲನವು ಜನರ ಮನಸ್ಸನ್ನು ತನ್ನೆಡೆ ಸೆಳೆದುಕೊಂಡಿತು.

ಮಹಾತ್ಮರು, ಹಿಂದೂಮುಸಲ್ಮಾನರ ಐಕ್ಯವೇ ಸ್ವಾತಂತ್ರ್ಯದ ಮೊದಲನೆ ಹೆಜ್ಜೆಯೆಂದು ಸಾರಿದರು. ಖಿಲಾಫತ್ತಿನಿಂದ ನೊಂದ, ಪಂಜಾಬ ಕೊಲೆಯಿಂದ ಬೆಂದ, ಹಿಂದೂಮುಸಲ್ಮಾನರ ಕಾದ ಮನಸ್ಸುಗಳನ್ನೂ ಸಮಯಕ್ಕೆ ಸರಿಯಾಗಿ ಬಡೆದು ಐಕ್ಯವನ್ನುಂಟುಮಾಡಿದರು.

ಮುಸಲ್ಮಾನ ಮುಂದಾಳುಗಳು ಹಿಂಸೆಯ ಯುದ್ಧವನ್ನು ಮಾಡಿಯಾದರೂ ಖಿಲಾಫತ್ತಿನ ಅನ್ಯಾಯಗಳನ್ನು ದೂರಮಾಡಿಕೊಳ್ಳಬೇಕೆಂಬ ನಿಶ್ಚಯವನ್ನು ಮಾಡಿದ್ದರು. ಇಂಥ ಸಮಯದಲ್ಲಿ ಅವರ ಮನವಲಿಸಿ, ಅವರನ್ನು ಅಹಿಂಸಾಮಾರ್ಗಕ್ಕೆ ಹಚ್ಚಿದರು. ಹಿಂದೂ–ಮುಸಲ್ಮಾನರು ಒಂದುಗೂಡಿ ಕಾರ್ಯಮಾಡಬೇಕಿದ್ದರೆ, ಅಹಿಂಸಾತ್ಮಕರೀತಿಯಿಂದಲೇ ಆಗಬೇಕೆಂದು ಸ್ಪಷ್ಟವಾಗಿ ಹೇಳಿದರು. ಮುಸಲ್ಮಾನ ಬಂಧುಗಳು ಅಹಿಂಸಾತ್ಮಕರೀತಿಯಿಂದ ಅಸಹಕಾರ ಚಳವಳಿಗೆ ಮನಃಪೂರ್ವಕವಾಗಿ ನೆರವಾದರೆ, ಒಂದು ವರ್ಷದಲ್ಲಿಯೇ ಸ್ವರಾಜ್ಯ ಮತ್ತು ಖಿಲಾಫತ್ತಿನ ಪ್ರಶ್ನೆಗಳು ಬಿಡಬಹುದೆಂದೂ ವಿಶ್ವಾಸದಿಂದ ಹೇಳಿದರು. ಇದೇ ಮಾತನ್ನೆ ಹಿಂದುಗಳನ್ನು ಕುರಿತೂ ಹೇಳಿದರು.

'It is a question then, for the rest of the Indian population to consider, whether they want to perform a neighbourly duty by their Musalman Country men, and if they do, they have the opportunity of a lifetime which will not occur for another hundred years, to show their good-will, fellowship and friendship and to prove what they have been saying for all these long years that the Musalman is the brother of the Hindu.'

'ಮುಸಲ್ಮಾನ ಬಾಂಧವರ ವಿಷಯದಲ್ಲಿ ನೆರೆಹೊರೆಯವರಾದ ನಮಗೆ ಒಂದು ಪವಿತ್ರವಾದ ಕರ್ತವ್ಯವಿರುತ್ತದೆಂಬುದನ್ನು ವಿಚಾರ ಮಾಡಬೇಕು. ಆಯುಷ್ಯದಲ್ಲಿ ಎಂದೂ ಬರದಂಥ ಮುಸಲ್ಮಾನರಿಗೆ ಸಹಾಯ ಮಾಡುವ ಸುವರ್ಣ ಸಂಧಿಯು ಬಂದಿದೆ. ಇಂಥ ಸಮಯವು ನೂರು ವರ್ಷಗಳಾದರೂ ಬರಲಾರದು. ನಾವಿಬ್ಬರೂ ಭಾರತೀಯರು. ಅವರೂ ನಮ್ಮ ಬಾಂಧವರು ಎಂಬುದನ್ನು ಸಿದ್ಧಮಾಡಿ ತೋರಿಸುವ ಸಂಧಿಯು.

ನಮ್ಮಲ್ಲಿ ಅವರ ವಿಷಯಕ್ಕಿರುವ ಪ್ರೇಮ, ಗೆಳೆತನ, ಕಲ್ಯಾಣೇಚ್ಛೆಗಳನ್ನು ತೋರಿಸುವ ಹೊತ್ತು ಈಗ ಬಂದಿದೆ'

ಎಂದು ಸಾರಿದರು. ಈ ಅಮೃತಮಯ ಸೂಚನೆಯಿಂದ ಭಾರತದ ಬಣ್ಣವೇ ಬದಲಾಗಿ ಹೋಯಿತು. ಮುಸಲ್ಮಾನರ ಮಸೀದಿಯಲ್ಲಿ ಹಿಂದೂ ಸನ್ಯಾಸಿಗಳ ಉಪದೇಶದ ಸುಂದರವಾದ ದೃಶ್ಯವು ದೃಗ್ಗೋಚರವಾಯಿತು. ಭಾರತದ ರಾಷ್ಟ್ರದಲ್ಲೆಲ್ಲ ಐಕ್ಯದ ಕೂಗು ಕೇಳಬರಹತ್ತಿತು. ಹೀಗೆ ಮಹಾತ್ಮರು ಅಸಹಕಾರಿತೆಯ ಸಿದ್ಧತೆಯಲ್ಲಿರಲು ಭಾರತದ ನಾಯಕರಾದ ಲೋಕಮಾನ್ಯರು ರಾಷ್ಟ್ರದ ಸೂತ್ರಗಳು ಮಹಾತ್ಮರ ಕೈಸೇರಲೆಂಬ ಇಚ್ಛೆಯಿಂದಲೋ ಏನೋ ಎನ್ನುವಂತೆ ೧ನೇ ಅಗಸ್ಟ ದಿವಸ ಸ್ವರ್ಗವಾಸಿಗಳಾದರು. ಅಂದೇ ಮಹಾತ್ಮರು ಅಸಹಕಾರದ ಬಂಡಾಯವನ್ನು ಹೂಡಿದರು.

ಮಹಾತ್ಮರು ಅಸಹಕಾರದ ಧ್ವಜವನ್ನು ಏರಿಸಿದರು, ವ್ಹಾಯಿಸರಾಯರಿಗೆ ಒಂದು ಪತ್ರವನ್ನು ಬರೆದರು, ತಮಗೆ ಸಿಕ್ಕ 'ಕಾಯಿಸರ ಇ. ಹಿಂದ'ವೆಂಬ ಬಂಗಾರದ ಪದಕವನ್ನು ತಿರುಗಿ ಕಳಿಸಿದರು. ಈ ಪದಕಗಳನ್ನು ಯಾಕೆ ಕಳಿಸಿದೆನೆಂಬುದನ್ನೂ ಮುಂದೆ ತಾವು ಏನು ಮಾಡಬೇಕೆಂದಿರುವನೆಂಬುದನ್ನೂ ಪತ್ರದಲ್ಲಿ ಹೇಳಿದ್ದರು.

'ಹೋದ ತಿಂಗಳಿನಲ್ಲಿ ಆದ ಸಂಗತಿಗಳು ಸಾಮ್ರಾಜ್ಯ ಸರಕಾರವು ಖಿಲಾಫತ ಪ್ರಶ್ನೆಯಲ್ಲಿ ಸದಸದ್ವಿವೇಕವನ್ನು ಬದಿಗಿಟ್ಟು, ನೀತಿಯನ್ನು ತೊರೆದು, ಅನ್ಯಾಯದ ಮಾರ್ಗವನ್ನು ಹಿಡಿದಿದೆ ಎಂದು ನನಗೆ ಮನಗಾಣಿಸಿಕೊಟ್ಟಿರುವವು. ತಮ್ಮ ಅನೀತಿಯ ಸಂರಕ್ಷಣೆಗೋಸ್ಕರ ಒಂದು ತಪ್ಪಿನಿಂದ ಮತ್ತೊಂದು ತಪ್ಪಿಗೆ ಆಶ್ರಯ ಕೊಟ್ಟಿರುತ್ತದೆಂದು ನನಗೆ ಅನಿಸುತ್ತದೆ. ಇಂಥ ಸರಕಾರದ ವಿಷಯಕ್ಕೆ ನನ್ನ ಮನಸ್ಸಿನಲ್ಲಿ ಆದರವೂ ಇಲ್ಲ ಸಂತೋಷವೂ ಇಲ್ಲ.'

ಅಸಂತೋಷವಿರುವದರಿಂದ ಮುಂದೆ ಈ ಸರಕಾರದ ವಿರುದ್ಧ ಬಂಡಾಯವನ್ನು ಎಬ್ಬಿಸುವದು ಕರ್ತವ್ಯವಾಗಿದೆ ಎಂದು ಧ್ವನಿತಮಾಡಿ ತಮ್ಮ ಕಾರ್ಯಕ್ರಮವನ್ನು ತಿಳಿಸಿರುವರು.

"In my humble opinion the ordinary method of agitating by way of petitions, deputations and the like is no

remidy for moving to repentence a Government so hopelessly indifferent to the welfare of its charge as the Government of India has proud to be. In European countries, condonation of such grievous wrongs as the Khilaphat and the Punjab would have resulted in a bloody revolution by the people. They would have resisted at all cost national emasculation such as the said wrongs imply. But half of India is too weak to offer violent resistance and the other half is unwilling to do so. I have therefore venture to suggest the remidy of non-cooperation which enables those who wish to dissociate themselves from the Government, and which, if it is unattended by voilence and undertaken in an ordered manner must compete it to retrace its steps and undo the wrongs committed."

"ಹಿಂದುಸ್ಥಾನ ಸರಕಾರದಷ್ಟು ತನ್ನ ಕರ್ತವ್ಯದ ಬಗ್ಗೆ ಉದಾಸೀನವಾಗಿರುವಂಥ ಸರಕಾರವನ್ನು ಹಾದಿಗೆ ತರಲಿಕ್ಕೆ ಅರ್ಜಿ, ವಿರೋಧ ಮುಂತಾದ ಉಪಾಯಗಳು ಸಾಕಾಗಲಾರವೆಂದು ನನ್ನ ಮತವಿದೆ. ಯುರೋಪೀಯ ದೇಶಗಳಲ್ಲಿ ಖಿಲಾಫತ್ ಮತ್ತು ಪಂಜಾಬದಂಥ ಭಯಂಕರವಾದ ಅತ್ಯಾಚಾರಗಳನ್ನು ಮಾಡಗೊಟ್ಟಿದ್ದರೆ, ಅಲ್ಲಿಯ ಜನರು ರಕ್ತಮಯವಾದ ಕ್ರಾಂತಿಯನ್ನು ಮಾಡುತ್ತಿದ್ದರೆಂಬುದರಲ್ಲಿ ಸಂಶಯವಿಲ್ಲ. ಬೇಕಾದಷ್ಟು ಹಾನಿಯಾದರೂ ಇಂಥ ರಾಷ್ಟ್ರೀಯ ದಬ್ಬಾಳಿಕೆಯನ್ನು ಅವರು ವಿರೋಧಿಸುತ್ತಿದ್ದರು. ಆದರೆ ಅರ್ಧ ಹಿಂದುಸ್ಥಾನವು ಯುದ್ಧವನ್ನು ಮಾಡಲು ಅಸಮರ್ಥವಿದೆ. ಮತ್ತೊಂದು ಅರ್ಧದಲ್ಲಿ ಯುದ್ಧಮಾಡುವ ಬುದ್ಧಿಯೇ ಇಲ್ಲ. ಆದ್ದರಿಂದ ನಾನು ಅಸಹಕಾರಿತೆಯೇ ಅದಕ್ಕೆ ಉಪಾಯವೆಂದು ಯೋಚಿಸಿರುವೆನು. ಅಸಹಕಾರದಲ್ಲಿ ಬೇಕಾದವರು ಸರಕಾರದವರ ಸಂಬಂಧವನ್ನು ಬಿಡಲು ಸಾಮರ್ಥ್ಯವಿರುವದು; ಮತ್ತು ಇದೇ ಚಳವಳಿಯು ಅಹಿಂಸಾತ್ಮಕವಾಗಿಯೂ ಶಿಸ್ತಿನಿಂದಲೂ ನಡೆದರೆ, ಸರಕಾರವನ್ನು ಹಿಮ್ಮೆಟ್ಟಿಸಿ, ಮಾಡಿದಂಥ ಅನ್ಯಾಯಗಳನ್ನು ಸರಿಗೊಳಿಸುವದೆಂಬುದರಲ್ಲಿ ಏನೂ ಸಂಶಯವಿಲ್ಲ."

ಸಶಸ್ತ್ರವಾದ ಬ್ರಿಟಿಶ ಸಾಮ್ರಾಜ್ಯದ ಸಂಗಡ ಹಗೆತನವನ್ನು ಬೆಳೆಯಿಸಿ, ರಣಾಂಗಣದಲ್ಲಿ ಸೆಡ್ಡು ಹೊಡೆದು ನಿಂತ ವೀರಪುರುಷರೆಂದರೆ ಮಹಾತ್ಮರೇ ಸರಿ. ದೇಶದಲ್ಲೆಲ್ಲ ಸಭೆಗಳಾದವು. ಅನೇಕ ಪದವೀಧರರು ಪದವಿಗಳನ್ನು ತಿರುಗಿ ಕಳಿಸಿದರು. ಪ್ರಚಾರಕ್ಕೆ ಪ್ರಾರಂಭವಾಯಿತು. ಆ

ಕಾರ್ಯಕ್ರಮವು ಸರಕಾರಿ ಬಹುಮಾನ, ಶಾಲೆ, ಕೋರ್ಟು, ನೌಕರಿಗಳ ಬಹಿಷ್ಕಾರಗಳನ್ನೊಳಗೊಂಡಿತ್ತು. ಅಗಸ್ಟ ೩೦ನೇ ತಾರೀಖಿನ ಕಾಯದೇ ಮಂಡಲದಲ್ಲಿ ವ್ಹಾಯಿಸರಾಯರು ಇಂತಹ ಚಳವಳಿಯನ್ನು ದಬ್ಬಲು ತಮ್ಮ ಕೈಯಲ್ಲಿಯ ಎಲ್ಲ ಸಾಧನಗಳನ್ನು ಉಪಯೋಗಿಸುವದೆಂದು ಜಾಹೀರ ಪಡಿಸಿದರು. ಜನತೆಯು ಆವ್ಹಾನವನ್ನು ಸ್ವೀಕರಿಸಿತು. ರಾಷ್ಟ್ರದಲ್ಲಿ ಪ್ರಚಂಡವಾದ ಆಂದೋಲನವೆದ್ದಿತು.

ಕಲಕತ್ತೆಯ ವಿಶೇಷ ಅಧಿವೇಶನವು ಪ್ರಾರಂಭವಾಯಿತು. ಭಾರತದ ಭವಿತವ್ಯತೆಯ ನಿರ್ಣಯವಾಗಬೇಕಿತ್ತು. ಮಹಾತ್ಮರು ಬಂಡನ್ನೆನೋ ಹೂಡಿದ್ದರು. ಇನ್ನೂ ರಾಷ್ಟ್ರವು ಒಪ್ಪಿದ್ದಿಲ್ಲ. ಲಾಲಾಜಿಯವರು ಅಧ್ಯಕ್ಷತೆಯನ್ನು ವಹಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಖಿಲಾಫತ್ತಿನ ಅನ್ಯಾಯ, ಪಂಜಾಬದ ಕೊಲೆ ಮೊದಲಾದ ವಿಷಯಗಳ ನಿಷೇಧವನ್ನು ಮಾಡಿದ್ದರು. ಆದರೆ, ಅಸಹಕಾರದ ವಿಷಯಕ್ಕೆ ಮಾತ್ರ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ. ಮಹಾತ್ಮಾ ಗಾಂಧಿಯವರು ಅಸಹಕಾರದ ಗೊತ್ತುವಳಿಯನ್ನು ಮಂಡಿಸಿದರು. ಬಿಪಿನಚಂದ್ರಪಾಲ, ದೇಶಬಂಧು ದಾಸ, ಆನಿಬಿಝೆಂಟ್, ಪಂಡಿತ ಮದನಮೋಹನ ಮಾಲವೀಯ, ಜಿನ್ನಾ ಮೊದಲಾದ ಎಲ್ಲ ಪಕ್ಷದ ಮುಖಂಡರು ವಿರೋಧಿಸಿದರು. ಕೊನೆಗೆ ೧೮೮೬ ಪ್ರತಿನಿಧಿಗಳು ಅನುಕೂಲರಾಗಿಯೂ ೮೮೪ ಪ್ರತಿನಿಧಿಗಳು ಪ್ರತಿಕೂಲರಾಗಿಯೂ ಪ್ರಚಂಡ ಬಹುಮತದಿಂದ ಮಹಾತ್ಮಾ ಗಾಂಧಿಯವರು ಹಿಂದೀ ರಾಷ್ಟ್ರವನ್ನು ಜಯಿಸಿದರು. ಅಂದಿನಿಂದ ಇಲ್ಲಿಯ ವರೆಗೆ ಅವರೇ ರಾಷ್ಟ್ರದ ಅಧಿನಾಯಕರು. ಸ್ವಾತಂತ್ರ್ಯ ಸಂಗ್ರಾಮದ ಸೇನಾಪತಿಗಳು ಆಗಿರುವರು.

ತಮ್ಮ ಗೊತ್ತುವಳಿಯನ್ನು ರಾಷ್ಟ್ರವು ಸ್ವೀಕರಿಸಿದ್ದರಿಂದ ಮಹಾತ್ಮರಿಗೆ ಹೃತ್ಪೂರ್ವಕವಾದ ಆನಂದವಾಯಿತು. (ಆ ಸಮಯದಲ್ಲಿಯ ಅವರ ನಗೆಯನ್ನು ಕಂಡವರೇ ಧನ್ಯರೆಂದು ಹೇಳುತ್ತಾರೆ.) ಮಹಾತ್ಮರು ತಮ್ಮ ಭಾಷಣದಲ್ಲಿ **'ನಾನು ಹೇಳಿದಂತೆ ಕೇಳಿದರೆ ಒಂದೇ ಒಂದು ವರ್ಷದಲ್ಲಿ ಸ್ವರಾಜ್ಯವನ್ನು ದೊರಕಿಸಿಕೊಡುವೆನು'**

ಎಂದು ಹೇಳಿದರು. ಹಿಂದೀ ರಾಷ್ಟ್ರವು ಪ್ರಬಲವಾದ ಶಸ್ತ್ರಾಸ್ತ್ರಗಳಿಂದ ಸಜ್ಜಾದ ಬ್ರಿಟಿಶ ಸಾಮ್ರಾಜ್ಯದೊಡನೆ ಬಂಡನ್ನು ಹೂಡಿತು. ಕಾಂಗ್ರೆಸ್ಸಿನ ಈ ಗೊತ್ತುವಳಿಯಿಂದ ರಾಷ್ಟ್ರದಲ್ಲಿ ನವಯುಗವೇ ಪ್ರಾರಂಭವಾಯಿತು.

ಮಹಾತ್ಮರ ಶಕ್ತಿಪ್ರಭಾವದಿಂದ ಹಿಂದೀ ರಾಷ್ಟ್ರವು ಒಂದು ನೂರು ವರ್ಷ ಮುಂದೆ ಹೋಯಿತೆಂದು ಹೇಳಬಹುದು. ಚಳವಳಿಯು ವಿದ್ಯುದ್ವೇಗದಿಂದ ಮುಂದರಿಯಹತ್ತಿತು. ವಕೀಲರು ವಕೀಲಿಗೆ ಶರಣು ಹೊಡೆದರು. ಕೌನ್ಸಿಲ ಬಹಿಷ್ಕಾರವು ಸಾರಲ್ಪಟ್ಟಿತು. ಪದವೀಧರರು ಪದವಿಗಳನ್ನು ಬಿಸುಟಿದರು. ವಿದ್ಯಾರ್ಥಿಗಳು ಶಾಲೆ ಕಾಲೇಜುಗಳಿಗೆ ಶರಣು ಹೊಡೆದು, ರಣರಂಗಕ್ಕೆ ಬಂದರು. ವ್ಹಾಯಿಸರಾಯರ ಕೌನ್ಸಿಲ್ಲಿನಲ್ಲಿ ಪಂಜಾಬದ ವಿಷಯವಾಗಿ ಬಂದ ಗೊತ್ತುವಳಿಗೆ ವ್ಹಾಯಿಸರಾಯನು ಒಪ್ಪಿಗೆಯನ್ನು ಕೊಡದ್ದರಿಂದ ಸಭಾಸದರೆಲ್ಲರೂ ಸಭಾತ್ಯಾಗ ಮಾಡಿದರು. ಅಕ್ಟೋಬರ ೨ನೇ ತಾರೀಖಿನ ದಿವಸ ವರ್ಕಿಂಗ ಕಮೀಟಿಯು ಕೂಡಿ ದೀರ್ಘವಾದ ವಿಚಾರ ಮಾಡಿ ಕಾರ್ಯಕ್ರಮವನ್ನು ನಿಶ್ಚಯಿಸಿತು. ಮಹಾತ್ಮರೂ, ಮೋತಿಲಾಲರೂ, ಅಲ್ಲೀ ಬಂಧುಗಳೂ ಉತ್ತರ ಹಿಂದುಸ್ತಾನದ ಸಂಚಾರವನ್ನು ಕೈಕೊಂಡರು. ಅಲಿಗಡ ಕಾಲೇಜದ ವಿದ್ಯಾರ್ಥಿಗಳು ಕಾಲೇಜನ್ನು ಬಿಟ್ಟರು. ಈ ಬೇಗೆಯು ಎಲ್ಲೆಡೆಯಲ್ಲಿಯೂ ಹಬ್ಬಿತು. ಪಂಜಾಬ, ಬಂಗಾಲ, ಮುಂಬಯಿಗಳಲ್ಲಿ ಶಾಲೆ ಕಾಲೇಜುಗಳಿಂದ ಸಾವಿರಾರು ವಿದ್ಯಾರ್ಥಿಗಳು ಹೊರಬಿದ್ದರು. ಅಲ್ಲಲ್ಲಿ ವಕೀಲರು ವಕೀಲಿಗೆ ಶರಣು ಹೊಡೆದರು. ಹಳ್ಳಿಗಳಲ್ಲಿ ಚರಖಗಳು ತಿರುಗಹತ್ತಿದ್ದವು. ಕೌನ್ಸಿಲ ಬಹಿಷ್ಕಾರವು ಒಳ್ಳೇ ಯಶಸ್ವಿಯಾಯಿತು. ಸರಕಾರಿ ಶಾಲೆಕಾಲೇಜುಗಳೂ ಕೋರ್ಟುಗಳೂ ಹಾಳು ಸುರಿಯಹತ್ತಿದವು. ಹೀಗೆಯೇ ಏರುತ್ತನಡೆದ ಚಳವಳಿಯನ್ನು ಕಂಡು, ಅಸಹಕಾರದ ಚಳವಳಿಯು ಅತ್ಯಾಚಾರಗಳಲ್ಲಿ ಪರಿಣಮಿಸದಿದ್ದರೆ ಅದನ್ನು ಯಾವ ರೀತಿಯಿಂದಲೂ ತಡೆಯಬಾರದೆಂದು ವ್ಹಾಯಿಸರಾಯನು ಪ್ರಸಿದ್ಧಿಸಿದನು.

೧೯೨೦ನೇ ಡಿಸೆಂಬರ ಸಮೀಪಿಸಿತು. ನಾಗಪೂರ ಕಾಂಗ್ರೆಸ ಬಂದಿತು. ವಿಜಯರಾಘವಾಚಾರ್ಯರು ಅಧ್ಯಕ್ಷರಾದರು. ಈ ಸಮಯದಲ್ಲಿ ಮತ್ತೊಂದು ನೂತನ ಪಕ್ಷವೂ ಉದಯವಾಗಿತ್ತು. ಸಾಮ್ರಾಜ್ಯದಿಂದ ಹೊರಬೀಳಬೇಕೆಂಬುದೇ ಈ ಪಕ್ಷದ ಸಾಹಸ. ದೇಶಬಂಧು ದಾಸರು ಅಸಹಕಾರದ ಕಾರ್ಯಕ್ರಮವನ್ನು ಬದಲಿಸಲು ಅಪೇಕ್ಷಿಸುತ್ತಿದ್ದರು. ಅವರು ೨೫೦ ಜನ ಪ್ರತಿನಿಧಿಗಳನ್ನು ೩೬೦೦೦ ರೂ. ವೆಚ್ಚಮಾಡಿ ಕರೆದುಕೊಂಡು ಬಂದಿದ್ದರು. **ಕ. ವೇಜವುಡ್, ಬೀನಸ್ಫೂರ, ಹಾಲಫರ್ಡ ನಾಯಿಟ** ಮೊದಲಾದವರು ಬಂದಿದ್ದರು. ಮಹಾರಾಷ್ಟ್ರದವರು ಒಳ್ಳೇ ಸಂಘಟಿತರಾಗಿ ವಿರೋಧಿಸಬೇಕೆಂದು ಸಜ್ಜಾಗಿ ಬಂದಿದ್ದರು.

ವಿಷಯನಿಯಾಮಕ ಮಂಡಲದಲ್ಲಿ ಅಸಹಕಾರಿತೆಯ ವಿರುದ್ಧವಾಗಿ, ಕ. ವೆಜವುಡ್ಡನು ತನ್ನ ಬುದ್ಧಿ ಸಾಮರ್ಥ್ಯವನ್ನೆಲ್ಲ ಉಪಯೋಗಿಸಿದನು. ಆದರೆ ಅದೆಲ್ಲವೂ ವ್ಯರ್ಥವಾಯಿತು. ಮಹಾತ್ಮರ ಅಸಹಕಾರಿತೆಯ ಗೊತ್ತುವಳಿಯು ಸ್ವೀಕರಿಸಲ್ಪಟ್ಟಿತು. ಇಷ್ಟೇ ಅಲ್ಲ. ಇಲ್ಲಿಯವರೆಗೆ ಶಾಸನಬದ್ಧರೀತಿಯಿಂದ ಇದ್ದ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಗಳಿಸಬೇಕೆಂಬ ಧ್ಯೇಯದ ಉಚ್ಚಾಟನೆಯಾಯಿತು. ಇದನ್ನು ಕಂಡು ಸರಕಾರವು ಮಹಾತ್ಮರ ವಿಜಯ ಸಂಪೂರ್ಣವಾಯಿತೆಂದೂ, ಕಾಂಗ್ರೆಸ್ಸಿನ ಮೂಲ ಉತ್ಪಾದಕರೂ ಮುಂದಾಳುಗಳೂ ಹಿಂದೆಬಿದ್ದರು ಎಂದು ತಿಳಿದುಕೊಂಡಿತು. ಇದು ಅಕ್ಷರಶಃ ನಿಜವಿತ್ತು. ಮಹಾತ್ಮಾ ಗಾಂಧಿಯವರ ಮೋಹಿನಿಗೆ ಎಲ್ಲರೂ ತಲೆಬಾಗಿದರು. ಇಂಥ ತೇಜಸ್ವಿ ಅಧಿಕಾರವಾಣಿಯಿಂದ ಮಾತನಾಡುವ ಪುರುಷನು ಎಲ್ಲಿಂದ ಬಂದನು ಎಂದು ತಮ್ಮತಮ್ಮೊಳಗೆ ಎಲ್ಲರೂ ಮಾತನಾಡಿಕೊಳ್ಳಹತ್ತಿದರು.

ಕಾಂಗ್ರೆಸ್ಸಿನ ಈ ಧ್ಯೇಯ ಬದಲಾವಣೆಯು ಭಾರತೀಯ ರಾಜಕೀಯ ಜೀವನದಲ್ಲಿ ದೊಡ್ಡ ಹೆಜ್ಜೆಯೆಂದೇ ಹೇಳಬಹುದು.

"Self Government within the British Empire" ಎಂದು ಇತ್ತು. ಈ ಅಧಿವೇಶನದಲ್ಲಿ ಕಾಂಗ್ರೆಸ್ಸಿನ ಧ್ಯೇಯವು "Attainment

of Swaraj by the people of India by peacefull and legitimate means," ಎಂಬಧಾಗಿ ಬದಲಾಯಿತು.

'ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಗಳಿಸುವದೇ ಧ್ಯೇಯವೆಂದು ಇದ್ದದ್ದು ಬದಲಾಗಿ ಶಾಂತ ಮತ್ತು ಯೋಗ್ಯಮಾರ್ಗಗಳಿಂದ ಸ್ವರಾಜ್ಯವನ್ನು ದೊರಕಿಸುವುದೇ ಧ್ಯೇಯವೆಂದಾಯಿತು.'

ಬ್ರಿಟಿಶ ಸಾಮ್ರಾಜ್ಯದ ಸಂಬಂಧವನ್ನು ಕಡಿದುಹಾಕಬೇಕೆಂದು ಮಹಾತ್ಮರ ಇಚ್ಛೆಯಿದ್ದಿಲ್ಲ. ಆದರೆ ಪ್ರಸಂಗವು ಬಂದರೆ, ಭಾರತಕ್ಕೆ ಸಾಮ್ರಾಜ್ಯದಲ್ಲಿರುವ ಅಥವಾ ಬಿಡುವ ಅಧಿಕಾರವು ಭಾರತೀಯರಿಗೆ ಇರಬೇಕೆಂಬುದೇ ಮಹಾತ್ಮರ ಗುಟ್ಟು. ಇದರಿಂದ ಹಿಂದೀ ರಾಷ್ಟ್ರವು, ಬ್ರಿಟಿಶರೊಡನೆ ಸಮಭಾವವನ್ನು ತಾಳಿತು.

ಇನ್ನು ಒಂದು ದೃಷ್ಟಿಯಿಂದ ಈ ಕಾಂಗ್ರೆಸ್ಸು ಅದರಲ್ಲಿಯೂ ಈ ಗೊತ್ತುವಳಿಯು ಅತ್ಯಂತ ಮಹತ್ವದ್ದಾಗಿದೆ. ಶಾಸನಬದ್ಧವಾದ ಚಟವಟಿಕೆಗಳನ್ನು ಮೀರಬಹುದು. ಅನ್ಯಾಯದ ಕಾಯದೆಯನ್ನು ಮುರಿಯುವ ಅಧಿಕಾರವು ಎಲ್ಲರಿಗೂ ಉಂಟು ಎಂಬ ಸಿದ್ಧಾಂತವನ್ನು ಪ್ರಸ್ಥಾಪಿಸಿತು. ದಬ್ಬಾಳಿಕೆಯ, ಅನ್ಯಾಯದ ಕಾಯದೆಗಳಿಗೆ ಇದರಂಥ ಸರ್ವೋತ್ಕೃಷ್ಟವಾದ ಔಷಧವು ಇನ್ನೊಂದು ಇಲ್ಲ.

ಇನ್ನೊಂದು ಚಮತ್ಕೃತಿಯೆಂದರೆ, ಪದವಿ ಬಹಿಷ್ಕಾರದಿಂದ ಕರ ಬಂದಿ ಚಳವಳಿಯ ವರೆಗಿನ ಅಸಹಕಾರದ ಕಾರ್ಯಕ್ರಮವಿದ್ದ ಎಲ್ಲ ಕ್ಷೇತ್ರಗಳನ್ನು ವ್ಯಾಪಿಸುವ ಅಸಹಕಾರಿತೆಯ ಠರಾವು ಸ್ವೀಕೃತವಾಯಿತು. ಅಸಹಕಾರಿತೆಯನ್ನು ಎದುರಿಸಬೇಕೆಂದು ಬಂದ ದೇ. ಬ. ದಾಸರು ಮಹಾತ್ಮರ ದಾಸರಾಗಿ, ಅಸಹಕಾರ ಧ್ವಜವನ್ನೆತ್ತಿ ರಣರಂಗದಲ್ಲಿ ಧುಮುಕಿದರು. ಕಲಕತ್ತೆಯಲ್ಲಿ ಒಂಟಿಕಾಲ ಮೇಲೆ ನಿಂತ ಅಸಹಕಾರಿತೆಯು ಎಲ್ಲ ಮುಂದಾಳುಗಳಿಂದಲೂ ಇಡೀ ರಾಷ್ಟ್ರದಿಂದಲೂ ಸ್ವೀಕೃತವಾಗಿ ಗಟ್ಟಿಮುಟ್ಟಿಯಾಯಿತು. ಲಾಲಾ ಲಜಪತರಾಯ, ಮೋತಿಲಾಲಜಿ, ದೇಶಬಂಧು ದಾಸ ಮೊದಲಾದ ಮುಖಂಡರೆಲ್ಲರೂ ಅಸಹಕಾರದ ಪುರಸ್ಕರ್ತರಾದುದನ್ನು ನೋಡಿದರೆ ಮಹಾತ್ಮರು

ದಿಗ್ವಿಜಯಿಗಳಾದರೆಂದು ಹೇಳಬಹುದು. ಶಾಂತತಾಪುಯವಾದ ಬಂಡಾಯದ ಧ್ವಜವು ನಾಗಪೂರದಲ್ಲಿ ಏರಿಸಲ್ಪಟ್ಟಿತು.

೧೯೨೧ನೇ ಇಸ್ವಿಯೆಂದರೆ, ಗಾಂಧಿಯವರು ಬಲಿಷ್ಠವಾದ ಬ್ರಿಟಿಶ ಸಾಮ್ರಾಜ್ಯದೊಡನೆ ಹೂಡಿದ ಬಂಡಾಯದ ಹೋರಾಟದ ವರ್ಷವು. ಭಾರತವು ಮೈಛಳಿ ಬಿಟ್ಟು ಹೋರಾಡಿದ ವರ್ಷವು. ಬ್ರಿಟಿಶ ಸಾಮ್ರಾಜ್ಯದ ಅಸ್ತಿವಾರವೂ ನಡುಗಿದ ವರ್ಷವು. ಭಾರತೀಯ ಸ್ವಾತಂತ್ರ್ಯದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂಥ ವರ್ಷವು.

ಶಸ್ತ್ರಾಸ್ತ್ರಗಳಿಂದ ಬಲಿಷ್ಠವಾದ ಬ್ರಿಟಿಶ ಸಾಮ್ರಾಜ್ಯವೊಂದೆಡೆಗೆ, ನಿಃಶಸ್ತ್ರರಾದ ಭಾರತೀಯರು ಒಂದು ಕಡೆಗೆ. ಹೀಗೆ ವಿಚಿತ್ರವಾದ ಈ ಯುದ್ಧವು ನಡೆಯಿತು. ಸರಕಾರವು ನಿಷ್ಪ್ರಭೆಯಾಯಿತು. ಅದರ ತೇಜೋವಧವಾದಂತಾಯಿತು.

ಇಂಥ ಭಯಂಕರ ಪರಿಸ್ಥಿತಿಯಲ್ಲಿ ಹೊಸ ಸುಧಾರಣೆಗಳನ್ನು ಪ್ರಾರಂಭಿಸುವದಿತ್ತು. ಯುವರಾಜರ ಬದಲು ಬಾದಶಹರ ಕಕ್ಕಂದಿರು ಕಳಿಸಲ್ಪಟ್ಟರು. **ಡ್ಯೂಕ ಆಫ್ ಕೊನಾಟರು** ಜನವರಿ ೧೦ನೇ ತಾರೀಖಿಗೆ ಮದ್ರಾಸಕ್ಕೆ ಬಂದಿಳಿದರು. ಪ್ರಖರವಾದ ಹರತಾಳವು ಪಾಲಿಸಲ್ಪಟ್ಟಿತು. ಮದ್ರಾಸ ನಗರವು ಅವರಿಗೆ ಸ್ಮಶಾನದಂತೆ ಕಾಣಿಸಿತು. ಬಂಗಾಲಕ್ಕೆ ಹೋದರು. ದಿಲ್ಲಿಗೆ ಬಂದರು. ಎಲ್ಲಿ ನೋಡಿದರೂ ಅದೇ ಹಣೆಯಬರಹ. ಅಧಿಕಾರಿಗಳು ಈ ನೋಟವು ಅವರ ಕಣ್ಣಿಗೆ ಬೀಳಬಾರದೆಂದು ವಿಶ್ವಪ್ರಯತ್ನ ಮಾಡಿದರು. ಆದರೇನು? ವ್ಯರ್ಥವಾಯಿತು. ಅವರಿಗೆ ಪರಿಸ್ಥಿತಿಯ ಅರಿವು ಆಯಿತು. ದಿಲ್ಲಿಯ ಲೇಜಿಸ್ಲೇಟಿವ್ಹ ಅಸೆಂಬ್ಲಿಯ ಅನಾವರಣ ಸಮಾರಂಭವನ್ನು ಮಾಡುವಾಗ ಅವರು ತಮ್ಮ ಮನಬಿಚ್ಚಿದರು.

'ಹಿಂದುಸ್ಥಾನದ ಜನರು ಮತ್ತು ಅಧಿಕಾರಿಗಳು ಇವರಲ್ಲಿ ಪ್ರೇಮ ಸಂಬಂಧಗಳಿರಬೇಕು. ಅದರ ಬದಲು ದ್ವೇಷವೂ ವೈಷಮ್ಯಬುದ್ಧಿಯೂ ನನಗೆ ಕಂಡುಬಂದಿದೆ. ಅಮೃತಸರದ ಛಾಯೆಯು ಹಿಂದುಸ್ಥಾನದಲ್ಲೆಲ್ಲ ಪಸರಿಸಿದೆ. ಇಲ್ಲಿ ಕೂಡಿದ ಹಿಂದೀ ಮತ್ತು ಬ್ರಿಟಿಶ ಜನರಿಗೆ ನನ್ನ ಬಿನ್ನಹ

ಇಷ್ಟೆ! ಹಿಂದಿನ ತಪ್ಪುಗಳನ್ನೂ ತಪ್ಪುತಿಳವಳಿಕೆಗಳನ್ನೂ ಮರೆತು ಬಿಡಿ. ಕ್ಷಮಿಸಬೇಕಾಗಿದ್ದ ಮಾತುಗಳನ್ನು ಕ್ಷಮಿಸಿರಿ, ಇಂದಿನಿಂದ ಪ್ರಾರಂಭವಾದ ಸತ್ಕಾರ್ಯಕ್ಕೆ ಕೈಹಾಕಿರಿ' ಎಂದು ಹೇಳಿದರು. ಮುಂದೆ ಮುಂಬೈಯಿಂದ ನೆಟ್ಟಗೆ ಇಂಗ್ಲಂಡಕ್ಕೆ ಹೋದರು. ಅವರು ಹೋದ ಕಡೆಗೆಲ್ಲ ಹರತಾಳ, ಸಭೆ, ನಿಷೇಧಗಳು ಬೆನ್ನುಹತ್ತಿದ್ದವು. ತಾವು ಏಕಾದರೂ ಬಂದೆವೆಂದು ಅವರಿಗೆ ಅನಿಸಿರಬಹುದು. ಆದ್ದರಿಂದಲೇ ಮೇಲಿನ ಉದ್ಗಾರಗಳು ಹೊರಬಿದ್ದವು.

ಮಹಾತ್ಮರು ಭಾರತೀಯ ಜೀವನವನ್ನು ವಿದ್ಯುದ್ವೇಗದಿಂದ ತಿರುಗಿಸಹತ್ತಿದರು. ಇಡೀ ವರ್ಷ ಯಾರಿಗೂ ವಿಶ್ರಾಂತಿಯಿಲ್ಲ. ಒಂದರ ಹಿಂದೊಂದು ಕಾರ್ಯಕ್ರಮ. ಒಂದರಕ್ಕಿಂತಲೂ ಇನ್ನೊಂದರ ಹೆಜ್ಜೆಯು ಮುಂದೆ ಮುಂದೆ. ನಾಟಗಾರನು ತನ್ನ ಯಕ್ಷಿಣಿಯಿಂದ ಮಾಟವನ್ನು ಮಾಡುವಂತೆ, ಮಹಾತ್ಮರು ತಮ್ಮ ಕಾರ್ಯಕ್ರಮಗಳಿಂದ ಮರುಳುಗೊಳಿಸಿದರು, ಕುಣಿಸಿದರು, ನಲಿಸಿದರು, ಮೇಲಕ್ಕೇರಿಸಿದರು. ಸಂಕಟಗಳನ್ನು ಸಹಿಸಲಿಕ್ಕೆ ಹಚ್ಚಿದರು. ರಾಷ್ಟ್ರವನ್ನು ಮುಂದಕ್ಕೆ ಒಯ್ದರು. ಇವರು ಹೇಳಿದ್ದೇ ಪೂರ್ವದಿಶೆ. ಇವರ ವಾಣಿಯೇ ರಾಷ್ಟ್ರದವಾಣಿ, ಇವರ ಜೀವವೇ ರಾಷ್ಟ್ರದ ಜೀವ. ಇಷ್ಟರವುಟ್ಟಿಗೆ ರಾಷ್ಟ್ರದೊಡನೆ ತನ್ಮಯರಾಗಿದ್ದರು. ಮಾರ್ಚ ತಿಂಗಳಿನಲ್ಲಿ ಬಿಝುವಾಡಾದಲ್ಲಿ ಅ. ಭಾ. ಕಾಂಗ್ರೆಸ ಕಮಿಟಿಯು ಕೂಡಿತು. ಕಾರ್ಯದ ಸಿಂಹಾವಲೋಕನವನ್ನು ಮಾಡಿತು. ಮುಂದಿನ ಮೂರುತಿಂಗಳ ಕಾರ್ಯಕ್ರಮವನ್ನು ನಿಶ್ಚಯಿಸಿತು. ೧ ಕೋಟಿ ರೂಪಾಯಿ ಟಿಳಕನಿಧಿಯನ್ನು ಕೂಡಿಸಬೇಕು. ೧ ಕೋಟಿ ಕಾಂಗ್ರೆಸಸಭಾಸದರನ್ನು ಮಾಡಬೇಕೆಂದೂ ಹಳ್ಳಿಗಳಲ್ಲಿ ೨೦ ಲಕ್ಷ ರಾಟಿಗಳು ಪ್ರಾರಂಭವಾಗಬೇಕೆಂದೂ ನಿರ್ಣಯವಾಯಿತು.

ಕಾರ್ಯಕ್ರಮಕ್ಕೆ ಪ್ರಾರಂಭವಾಯಿತು. ಕಾಂಗ್ರೆಸ್ಸಿನ ಸಂದೇಶವು ಹಳ್ಳಿಹಳ್ಳಿಗೆ ಮುಟ್ಟಿಸಲ್ಪಟ್ಟಿತು. ಸ್ವರಾಜ್ಯ, ಖಾದೀ, ಖಿಲಾಫತ್, ಪಂಜಾಬದ ಕೊಲೆಗಳ ಪಾರಾಯಣವು ರಾಷ್ಟ್ರದಲ್ಲಿ ಆಯಿತು. ಭಿಕ್ಷೆಗೆ ಪ್ರಾರಂಭವಾಯಿತು. ಸ್ವರಾಜ್ಯಕ್ಕಾಗಿ ಜನರ ಅಂತಃಕರಣವು ಉಕ್ಕಿ

ಬರುತ್ತಿರುವದನ್ನು ನೋಡಿದರೆ, ಭಾರತೀಯ ಅಂತಃಕರಣವು ಹೇಗೆ ಜಾಗೃತವಾಗಿದೆ ಎಂಬುದು ಸ್ಪಷ್ಟವಾಗಿ ಕಾಣುತಿತ್ತು. ಯಾರು ಉಂಗರವನ್ನು ಕೊಟ್ಟರು. ಯಾರು ನೋಟುಗಳನ್ನು ಸುರುವಿದರು. ಯಾರು ಮನೆಯನ್ನು ಅರ್ಪಿಸಿದರು. ಭಾರತೀಯ ಲಲನೆಯರು ಮುಂದೆ ಬಂದು ಆಭರಣಗಳನ್ನು ಕೊಡಹತ್ತಿದರು. ಯಾರು ಬಳೆ, ಯಾರು ನತ್ತು, ಯಾರು ಕಂಠಿ, ಯಾರು ಕೊರಳೊಳಗಿನಹಾರ ಹೀಗೆ ಚಿನ್ನದ ಮಳೆಗರೆಯಹತ್ತಿದರು. ವಿದ್ಯಾರಣ್ಯರ ಸುವರ್ಣವೃಷ್ಟಿಯ ನೆನಪಾಯಿತು. ಅವಧಿಯ ಒಳಗಾಗಿ ಒಂದು ಕೋಟಿ ರೂಪಾಯಿಗಳು ಕೂಡಿಯೇ ಬಿಟ್ಟವು. ಸಭಾಸದರ ಸಂಖ್ಯೆಯೂ ಸಾಕಷ್ಟಾಯಿತು. ಇದನ್ನು ಕಂಡು ಸರಕಾರದ ಹೊಟ್ಟೆಯಲ್ಲಿ ಬೆಂಕಿಯು ಬಿದ್ದಿತು.

ಎಪ್ರಿಲ ೨ನೇ ತಾರೀಖಿಗೆ ಲಾರ್ಡ ರೀಡಿಂಗರು ವ್ಹಾಯಿಸರಾಯರಾಗಿ ಬಂದರು. ಬೇರೆ ಬೇರೆ ಪ್ರಾಂತಗಳಲ್ಲಿ ದಬ್ಬಾಳಿಕೆಗೆ ಪ್ರಾರಂಭವಾಯಿತು. ಬಿಹಾರದವರು ಮದ್ಯಪಾನ ಚಳವಳಿಯನ್ನು ಮುರಿಯಲು ಮುಂದಾದರು. ಸಂಯುಕ್ತ ಪ್ರಾಂತದಲ್ಲಿ ೧೪೪ನೇ ಕಲಮಿನಂತೆ ಭಾಷಣ, ಸಭಾ ಸ್ವಾತಂತ್ರ್ಯಗಳನ್ನು ಕಸಿದುಕೊಳ್ಳಲಾಯಿತು. ಅಸಹಕಾರ ಚಳವಳಿಯು ಕ್ರಾಂತಿಕಾರಕ ಚಳವಳಿಯೆಂದು ಜಾಹೀರಪಡಿಸಿದರು. ಅಯೋಧ್ಯೆಯಲ್ಲಿ ರಾಜದ್ರೋಹಿ ಸಭೆಗಳ ಕಾಯದೆಯು ತಲೆ ಎತ್ತಿತು. ಆದರೆ ಮುಂಬಯಿಯವರು ಮಾತ್ರ ತಲೆ ಕೆಡಿಸಿಕೊಂಡಿದ್ದಿಲ್ಲ. ಚಳವಳಿಯು ದಬ್ಬಾಳಿಕೆಯು ಬೆಳೆದಂತೆ ವ್ಯಾಪಕಪ್ರಮಾಣದಲ್ಲಿ ಬೆಳೆಯತೊಡಗಿತು.

ಹೊಸ ವ್ಹಾಯಿಸರಾಯರು, ಮೇ ೧೩ ರಿಂದ ೧೮ರವರೆಗೆ ಮಹಾತ್ಮರನ್ನು ಕರೆಯಿಸಿಕೊಂಡು ಎಷ್ಟೋ ಸಲ ಮಾತನಾಡಿದರು. ಮಹಾತ್ಮರು ಅಸಹಕಾರದ ಉದ್ದೇಶವನ್ನು ತಿಳಿಸಿಹೇಳಿದರು. ಬೆಜವಾಡದ ಸಭೆಯ ನಂತರ ರಾಷ್ಟ್ರವು ಅದ್ಭುತ ಸಾಮರ್ಥ್ಯವನ್ನು ತೋರಿಸಿತು. ಈ ಮೂರು ತಿಂಗಳ ಕಾರ್ಯವು ಅವರ್ಣನೀಯವಾಗಿತ್ತು. ಜುಲೈ ೨೮ನೇ

ತಾರೀಖಿಗೆ, ಮತ್ತೆ ಅಖಿಲ ಭಾರತ ಕಾಂಗ್ರೆಸ ಕಮೀಟಿಯು ಮುಂಬಯಿ ಯಲ್ಲಿ ಕೂಡಿತು. ಯುವರಾಜರು ಬಂದಾಗ ಅವರ ಎಲ್ಲ ಕರ್ಯಕ್ರಮ ಗಳಿಗೆ ಬಹಿಷ್ಕಾರ ಹಾಕಬೇಕೆಂದೂ ೩೦ನೇ ಸಪ್ಟಂಬರದವರೆಗೆ, ಪರ ದೇಶಿ ವಸ್ತ್ರ ಬಹಿಷ್ಕಾರವನ್ನು ಸಾಗಿಸಬೇಕೆಂದೂ ಖಾದಿಗೆ ಪ್ರೋತ್ಸಾಹಿಸ ಬೇಕೆಂದೂ ಈ ಕಾರ್ಯಕ್ರಮವು ಮುಗಿಯುವವರೆಗೆ ಕಾಯದೇ ಭಂಗವು ಮುಂದಕ್ಕೆ ಹಾಕಬೇಕೆಂದೂ ನಿರ್ಣಯವಾಯಿತು. ಪರದೇಶಿ ಬಹಿಷ್ಕಾ ರದ ಕಾರ್ಯಕ್ರಮವು ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ದೇಶದ ಲ್ಲೆಲ್ಲ ಪರದೇಶಿ ವಸ್ತ್ರಗಳ ಹೋಳಿಯಾಯಿತು.

ಜುಲೈ ತಿಂಗಳಲ್ಲಿ ಕರಾಚಿಯಲ್ಲಿ ಕೂಡಿದ ಖಿಲಾಫತ ಪರಿಷತ್ತಿನಲ್ಲಿ ಸೈನ್ಯದಲ್ಲಿ ಸೇರುವದು ಮುಸಲ್ಮಾನ ಧರ್ಮದ ವಿರುದ್ಧವಿರುವದೆಂದೂ, ಯಾರೂ ಸೇರಬಾರದೆಂದೂ, ಠರಾವು ಪಾಸುಮಾಡಲ್ಪಟ್ಟಿತು. ಈ ಸಭೆ ಯಲ್ಲಿ ಭಾಗವಹಿಸಿದ್ದಕ್ಕೆ ಅಲ್ಲೀ ಬಂಧುಗಳು, ಡಾ. ಕಿಚಲು, ಶಾರದಾ ಪೀಠದ ಶಂಕರಾಚಾರ್ಯ ಮೊದಲಾದವರು ಬಂಧಿಸಲ್ಪಟ್ಟರು. ಖಿಲಾಫ ತ್ತಿನ ಮುಖಂಡರೂ ರಾಷ್ಟ್ರದ ಉಳಿದ ಎಲ್ಲ ಮುಖಂಡರೂ ಆ ಗೊತ್ತುವಳಿಯನ್ನೇ ಎಲ್ಲಕಡೆಗೂ ಮಾಡಿದರು. ಇದು ಸರಕಾರಕ್ಕೆ ಆಪ್ವಾಹನವಾಯಿತು. ಸರಕಾರವು ರೊಚ್ಚಿಗೆದ್ದಿತು. ಅಲ್ಲೀ ಬಂಧುಗಳಿಗೂ ಉಳಿದವರಿಗೂ ಎರಡೆರಡು ವರ್ಷ ಕಠಿಣ ಶಿಕ್ಷೆಯನ್ನು ವಿಧಿಸಿತು.

ನವ್ಹೆಂಬರ ೪ನೇ ತಾರೀಖಿಗೆ ಮತ್ತೆ ಅ. ಭಾ. ಕಾಂಗ್ರೆಸ ಕಮೀ ಟಿಯು ಸೇರಿದು, ಪ್ರತಿಯೊಂದು ಪ್ರಾಂತವು ತನ್ನ ಹೊಣೆಗಾರಿಕೆಯನ್ನರಿತು ವ್ಯೈಯಕ್ತಿಕ ಇಲ್ಲವೆ ಸಾಮೂಹಿಕ ಕಾಯದೇಭಂಗವನ್ನು ಪ್ರಾರಂಭಿಸ ಬಹುದೆಂದು ನಿರ್ಣಯಿಸಿ ಸರಕಾರಕ್ಕೆ ಉತ್ತರಕೊಟ್ಟಿತು. ಚಳವಳಿಯು ಏರಿಕೆಯ ಧೋರಣದಿಂದ ಮುಂದಕ್ಕೆ ಸಾಗಿತು.

ನವ್ಹಂಬರ ೧೭ನೇ ತಾರೀಖಿನ ದಿವಸ ಯುವರಾಜರು ಹಿಂದುಸ್ತಾ ನಕ್ಕೆ ಬಂದರು. ಅವರ ಸತ್ಕಾರಸಮಾರಂಭವನ್ನು ರಾಷ್ಟ್ರವು ಬಹಿಷ್ಕರಿಸ ಬೇಕೆಂದು ನಿರ್ಣಯಿಸಿತ್ತು. ಪ್ರಚಂಡವಾದ ಹರತಾಳವು ಆಚರಿಸಲ್ಪ ಟ್ಟಿತು. ಆದರೆ ಕೆಲವು ಪಾರ್ಸಿ ಸದ್ಗೃಹಸ್ಥರು ಭಾಗತೆಗೆದುಕೊಂಡರು.

ಜನರ ತಲೆತಿರುಗಿತು. ಅವರ ಮೇಲೆ ಏರಿಹೋದರು. ಟ್ರ್ಯಾಮು ಗಾಡಿ ಗಳನ್ನು ಸುಟ್ಟರು. ಸರಕಾರದವರು ಗುಂಡುಹಾರಿಸಿದರು. ೫ ದಿನಗಳ ವರೆಗೆ ಈ ದಂಗೆಯು ನಡೆಯಿತು. ಯುವರಾಜರು ಬಂದ ದಿವಸ ಭಾರತ ದಲ್ಲಿಯ ಎಲ್ಲ ಪ್ರಮುಖ ಪಟ್ಟಣಗಳಲ್ಲಿ ಭಯಂಕರವಾದ ಹರತಾಳವು ಪಾಲಿಸಲ್ಪಟ್ಟಿತು. ಸರಕಾರಕ್ಕೆ ಇದರಿಂದ ಭಯಂಕರ ಅಪಮಾನವೆನಿಸಿತು. ದಬ್ಬಾಳಿಕೆಗೆ ಪ್ರಾರಂಭವಾಡಿತು. ೧೯ನೇ ನವ್ಹಂಬರ ದಿವಸ, ಬಂಗಾಲ ದಲ್ಲಿಯ ಎಲ್ಲ ಸ್ವಯಂಸೇವಕ ದಲಗಳು, ಸಂಘಗಳು ಅಕ್ರಮಕೂಟ ಗಳೆಂದು ಪ್ರಸಿದ್ಧ ಪಡಿಸಿದರು. ಕಲಕತ್ತೆಯ ಸಾವಿರಾರು ದೇಶಭಕ್ತರು ಸ್ವಯಂಸೇವಕರಾದರು. ಯುವರಾಜರು ತಾ. ೨೪ಕ್ಕೆ ಕಲಕತ್ತೆಗೆ ಬಂದಾಗ ಪ್ರಚಂಡವಾದ ಹರತಾಳವಾಗಬೇಕೆಂದು ಜಾಹೀರನಾಮೆ ಯನ್ನು ಮುಖಂಡರು ತೆಗೆದರು. ವರ್ಕಿಂಗಕಮಿಟಿಯು ೨೨-೨೩ನೇ ದಿವಸ ಕೂಡಿ, ಸರಕಾರದ ದಬ್ಬಾಳಿಕೆಗೆ ಉತ್ತರ ಕೊಡಬೇಕೆಂದೂ ಪ್ರತಿ ಯೊಂದು ಪ್ರಾಂತದಲ್ಲಿ ಸ್ವಯಂಸೇವಕ ಸಂಘಗಳನ್ನು ಸ್ಥಾಪಿಸಿ, ಎಲ್ಲರೂ ಸ್ವಯಂಸೇವಕರಾಗಬೇಕೆಂದೂ ಅವು ಅಕ್ರಮಕೂಟಗಳೆಂದು ನಿರ್ಣಯಿ ಸಲ್ಪಟ್ಟರೆ, ಎಲ್ಲ ಸ್ವಯಂಸೇವಕರು ಶರೆಮನೆಗಳನ್ನು ತುಂಬಬೇಕೆಂದೂ, ಗೊತ್ತುವಳಿಯನ್ನು ಮಾಡಿದರು. ಇದನ್ನು ಕಂಡು ಸರಕಾರದ ತಲೆಯೇ ತಿರುಗಿಹೋಯಿತು. ವಿವೇಕವು ಉಳಿಯದಾಯಿತು. ದಬ್ಬಾಳಿಕೆಯು ಹೆಚ್ಚಾಯಿತು. ದಿಲ್ಲಿ, ಪಂಜಾಬ, ಸಂಯುಕ್ತಪ್ರಾಂತಗಳಲ್ಲಿ ಸಭಾಬಂದಿ ಹುಕುಮು ಹೊರಡಿಸಲ್ಪಟ್ಟಿತು. ವ್ಹಾಯಿಸರಾಯರು ಒಂದು ಭಾಷಣ ದಲ್ಲಿ ಇನ್ನು ಮುಂದೆ ಶಾಂತತೆಯನ್ನು ಕಾಯಲು ಯೋಗ್ಯವಾದ ಉಪಾಯಗಳನ್ನು ಕೈಕೊಳ್ಳಲು ಹಿಂಜರಿಯುವದಿಲ್ಲೆಂದು ಹೇಳಿದರು.

ದಬ್ಬಾಳಿಕೆಯೂ ಶಿಖರಕ್ಕೆ ಮುಟ್ಟಿತು. ರಾಷ್ಟ್ರದ ಮುಖಂಡ ರಾದ ದಾಸ, ಮೋತಿಲಾಲ ನೆಹರೂ, ಜವಾಹರಲಾಲ ಮೊದಲಾದ ಎಲ್ಲ ಮುಖಂಡರು ಹಿಡಿಯಲ್ಪಟ್ಟರು. ಪ್ರತಿಯೊಂದು ಪ್ರಾಂತದಲ್ಲಿಯೂ ಶಿಕ್ಷೆಗಳ ಸತ್ರವೇ ನಡೆಯಿತು. ಪಂಜಾಬದಲ್ಲಿ ಕಾಂಗ್ರೆಸ್ ಖಿಲಾಫತ್ ಸಂಸ್ಥೆಗಳು ಅಕ್ರಮ ಕೂಟಗಳೆಂದು ನಿರ್ಣಯಿಸಲ್ಪಟ್ಟವು. ಖಾದಿಯನ್ನು

ಮಾರಿದ್ದಕ್ಕಾಗಿ ಕಲಕತ್ತೆಯಲ್ಲಿ ೫೦ ಜನ ಹೆಣ್ಣುಮಕ್ಕಳನ್ನು ಹಿಡಿದರು. ಬಿಹಾರದಲ್ಲಿ ಕಾಂಗ್ರೆಸ ಸಂಸ್ಥೆಗಳು ಅಕ್ರಮ ಕೂಟವಾದವು. ಯುವ ರಾಜರು ಹೋದಲ್ಲೆಲ್ಲ ಪ್ರಚಂಡ ಹರತಾಳಗಳಾದವು. ಕಲಕತ್ತೆಯಲ್ಲಂತೂ ಸತ್ಯಾಗ್ರಹಕ್ಕೆ ಕಳೆಯೇರಿತು. ಡಿಸೆಂಬರ ೨ನೇ ತಾರೀಖಿನ ದಿವಸ ಸ್ವಯಂಸೇವಕರನ್ನು ಹಿಡಿದರು. ಮರುದಿವಸ ೨೦೦ ಜನರು ಹೊರ ಬಿದ್ದರು. ೧೨೦ ಜನರನ್ನು ಹಿಡಿದರು. ೧೬ನೇ ತಾರೀಖಿನ ದಿವಸ ೪೦೦ ಜನರು ಹೊರಟಿದ್ದರು. ಅವರಲ್ಲಿ ೧೨೦ ಜನರನ್ನು ಹಿಡಿದರು. ೧೭ಕ್ಕೆ ೪೫೦ ಜನರು ಹೊರಬಂದರು. ೨೫೦ ಜನರನ್ನು ಹಿಡಿದರು. ೧೮ಕ್ಕೆ ೭೦೦ ಜನರು ಬರಲು ೩೦೦ ಜನರನ್ನು ಹಿಡಿದರು. ೨೩ನೇ ತಾರೀಖಿನ ದಿವಸ ವಂತೂ ೨೦೦೦ ಜನರು ಹೊರಬಿದ್ದರು. ೫೦೦ ಜನರನ್ನು ಹಿಡಿದರು. ೨೪ನೇ ತಾರೀಖಿನ ದಿವಸ ಕಲಕತ್ತೆಯಲ್ಲಿ ಸಂಪೂರ್ಣ ಹರತಾಳವಾಯಿತು. ಯುವರಾಜರು ಎಲ್ಲಿಯೂ ಸನ್ಮಾನವಿಲ್ಲದೆ ಮರಳಬೇಕಾಯಿತು.

ಡಿಶಂಬರ ತಿಂಗಳಲ್ಲಿ ಅಹಮ್ಮದಾಬಾದಿನಲ್ಲಿ ಕಾಂಗ್ರೆಸ್ಸಿನ ಅಧಿವೇಶನವಾಯಿತು. ೨೫೦೦೦ ಜನರು ಸೆರೆಮನೆಯನ್ನು ಸೇರಿದ್ದರು. ನಿಯೋಜಿತ ಅಧ್ಯಕ್ಷರಾದ ದೇಶಬಂಧು ದಾಸರು ಸೆರೆಮನೆಗೆ ಹೋಗಿದ್ದರು. ಹಕೀಮ ಅಜಮುಲಖಾನರು ಅಧ್ಯಕ್ಷರಾದರು.

'ಸ್ವರಾಜ್ಯಸಿಗುವವರೆಗೆ, ಅಸಹಕಾರವು ನಡೆಯಬೇಕೆಂದೂ, ಕಾಂಗ್ರೆಸ್ಸಿನ ಉಳಿದ ಎಲ್ಲ ಕಾರ್ಯಗಳನ್ನು ನಿಲ್ಲಿಸಿ, ಸ್ವಯಂಸೇವಕರಾಗಿ ಜನರು ಸೆರೆಮನೆಯನ್ನು ಸೇರಬೇಕೆಂದೂ, ಶಕ್ಯವಿದ್ದಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಕಾಯದೇಭಂಗವನ್ನು ಏರ್ಪಡಿಸಬೇಕೆಂದೂ ಉಳಿದ ಎಲ್ಲ ಚಟುವಟಿಕೆಗಳನ್ನು ನಿಲ್ಲಿಸಬೇಕೆಂದೂ ಮಹಾತ್ಮಾ ಗಾಂಧಿಯವರಿಗೆ ಸರ್ವಾಧಿಕಾರ ಕೊಡಬೇಕೆಂದೂ ನಿರ್ಣಯವಾಯಿತು.'

ಅಹಮ್ಮದಾಬಾದ ಕಾಂಗ್ರೆಸ್ಸಿನ ಮೊದಲೇ ಒಪ್ಪಂದದ ಮಾತುಗಳು ಪ್ರಾರಂಭವಾಗಿದ್ದವು. ದಾಸರು ಜೇಲಿನಲ್ಲಿದ್ದರು. ಅಕ್ರಮ ಕೂಟದ ಸಭಾಸದರೆಂದು ಸೆರೆಮನೆ ಕಂಡವರನ್ನೆಲ್ಲ ಬಿಡಬೇಕೆಂದು

ದಾಸರು ಹೇಳಿದರು. ಸತ್ಯಾಗ್ರಹದಲ್ಲಿ ಸೆರೆಮನೆಗೆ ಹೋದವರನ್ನು ಬಿಡಲು ಕಾಂಗ್ರೆಸ್ಸಿನ ೨೨ ಜನರ ಕಾಂಗ್ರೆಸ ಪ್ರತಿನಿಧಿಗಳನ್ನೊಳಗೊಂಡ ದುಂಡು ಮೇಜಿನ ಪರಿಷತ್ತನ್ನು ಕರೆಯಲು ಸರಕಾರವು ಒಪ್ಪಿಕೊಂಡಿತು. ಅಲ್ಲೀ ಬಂಧುಗಳನ್ನು ಬಿಡಲಿಕ್ಕೂ ಪಿಕೇಟಿಂಗಿನ ಹಕ್ಕನ್ನು ಮಾನ್ಯ ಮಾಡಲಿಕ್ಕೂ ಸರಕಾರವು ಒಪ್ಪಲಿಲ್ಲ. ೨೨ನೇ ಇಸ್ವಿಯ ಜನವರಿ ೧೪–೧೫ ತಾರೀಖಿಗೆ ಸರ್ವ ಪಕ್ಷೀಯ ಪರಿಷತ್ತು ಮುಂಬಯಿಯಲ್ಲಿ ಕೂಡಿ ಸರಕಾರವು ದಬ್ಬಾಳಿಕೆಯನ್ನು ಕೂಡಲೇ ನಿಲ್ಲಿಸಬೇಕೆಂದೂ ರಾಷ್ಟ್ರದ ಬೇಡಿಕೆಗಳನ್ನು ಸಾಧಿಸಲು ಎರಡನೇ ಮಾರ್ಗವು ಇಲ್ಲೆಂದು ಕಾಣುವ ವರೆಗೆ ಕಾಂಗ್ರೆಸ್ಸಿನಲ್ಲಿ ನಿರ್ಣಿತವಾದ ಕಾಯದೇಭಂಗವನ್ನು ಬಳಿಕೆಯಲ್ಲಿ ತರಬಾರದೆಂದೂ ಸರಕಾರ ಮತ್ತು ಜನತೆಯ ನಡುವೆ ಶಾಂತಿಯನ್ನು ಹುಟ್ಟಿಸಲಿಕ್ಕೆ ದುಂಡುಮೇಜಿನ ಪರಿಷತ್ತನ್ನು ಕೂಡಿಸಬೇಕೆಂದೂ ಈ ಪರಿಷತ್ತಿಗೆ ಅನುಕೂಲ ವಾತಾವರಣ ಹುಟ್ಟಿಸಲು ಎಲ್ಲ ರಾಜಕೀಯ ಕೈದಿಗಳನ್ನು ಬಿಡಬೇಕೆಂದೂ ಠರಾವುಗಳು ಪಾಸಾದವು. ಇದಕ್ಕಾಗಿ ವರ್ಕಿಂಗ ಕಮೀಟಿಯವರು ಅಸಹಕಾರದ ಕಾರ್ಯಕ್ರಮವನ್ನು ೧೫ ದಿವಸಗಳ ವರೆಗೆ ನಿಲ್ಲಿಸಿದರು.

ಒಪ್ಪಂದದ ಮಾತುಗಳು ನಡೆದಿದ್ದರೂ ರಾಷ್ಟ್ರದ ಲಕ್ಷ್ಯವು ಬಾರ್ಡೋಲಿಕಡೆಗೆ ಇತ್ತು. ಮಹಾತ್ಮರು ೨೬ ನೇ ಜನವರಿಗೆ ಬಾರ್ಡೋಲಿಯಲ್ಲಿ ತಳಊರಿದ್ದರು. ೩೦ ನೇ ತಾರೀಖಿನ ದಿವಸ ಎಲ್ಲ ಹಳ್ಳಿಗಳ ೪ ಸಾವಿರ ಜನರು ಸೇರಿ ಸಾಮೂಹಿಕ ಸತ್ಯಾಗ್ರಹದ ನಿಶ್ಚಯವನ್ನು ಮಾಡಿದ್ದರು. ಮರುದಿನ ವರ್ಕಿಂಗ ಕಮೀಟಿಯ ಸಭೆಸೇರಿ ಎಲ್ಲ ಜನರು ಬಾರ್ಡೋಲಿಗೆ ಸಹಾಯ ಮಾಡಬೇಕೆಂದು ಬಿನ್ನವಿಸಿದರು. ೧ ನೇ ತಾರೀಖಿನ ದಿವಸ ಮಹಾತ್ಮರು ವ್ಹಾಯಿಸರಾಯರಿಗೆ ಪತ್ರ ಬರೆದು ಸರಕಾರದವರು ತಮ್ಮ ದಬ್ಬಾಳಿಕೆಯನ್ನು ನಿಲ್ಲಿಸಿ ಜನತೆಯ ಬೇಡಿಕೆಗಳನ್ನು ಮನ್ನಿಸುವೆವೆಂದು ೭ ದಿನಗಳಲ್ಲಿ ಪ್ರಸಿದ್ಧಿಸದಿದ್ದರೆ, ಬಾರ್ಡೋಲಿ ತಾಲೂಕಿನಲ್ಲಿ ಸಾಮೂಹಿಕ ಸತ್ಯಾಗ್ರಹವು ಪ್ರಾರಂಭಿಸಲ್ಪಡುವದೆಂದು ತಿಳಿಸಿದರು. ಸರಕಾರವು ಉತ್ತರವನ್ನಿತ್ತಿತು. ದಬ್ಬಾಳಿಕೆಯನ್ನು ಸಮರ್ಥಿಸಿ

ಸಾಮೂಹಿಕ ಸತ್ಯಾಗ್ರಹವನ್ನು ಕಠೋರತನದಿಂದ ಮುರಿಯುವೆವೆಂದು ಸಾರಿದರು. ಆದರೆ ಫೆಬ್ರುವರಿಯಲ್ಲಿ **ಚೌರಿಚೌರಾ**ದಲ್ಲಿ ದಂಗೆಯಾಯಿತು. ಈ ಸುದ್ದಿಯನ್ನು ಕೇಳಿ ವರ್ಕಿಂಗ ಕಮೀಟಿಯವರು ೧೧-೧೨ಕ್ಕೆ ಬಾರ್ಡೋಲಿಯಲ್ಲಿ ಸೇರಿ ಕಾಯದೆ ಭಂಗವನ್ನು ನಿಲ್ಲಿಸಿದರು. ದೇಶದಲ್ಲಿ ಶಾಂತತೆಯು ನೆಲೆಗೊಳ್ಳುವದಕ್ಕಾಗಿ ಅಸಹಕಾರದ ಉಗ್ರ ಕಾರ್ಯಕ್ರಮಗಳೆಲ್ಲ ನಿಲ್ಲಿಸಲ್ಪಟ್ಟವು. ವಿಧಾಯಕ ಕಾರ್ಯಕ್ರಮವು ಗೊತ್ತು ಮಾಡಲ್ಪಟ್ಟಿತು. ಬಾರ್ಡೋಲಿಯ ಗುಂಡು ಈ ರೀತಿಯಾಗಿ ಹುಸಿಯಾಯಿತು.

ಯಂಗ ಇಂಡಿಯಾದಲ್ಲಿ ಬರೆದ ಕೆಲವು ಲೇಖನಗಳಿಗಾಗಿ, ರಾಜದ್ರೋಹದ ಆರೋಪದ ಮೇಲೆ ಮಹಾತ್ಮರನ್ನು ೧೦ನೇ ಮಾರ್ಚಿಗೆ ಹಿಡಿದರು. ೧೮ಕ್ಕೆ ಖಟ್ಲೆಯು ಪ್ರಾರಂಭವಾಯಿತು. ತಮ್ಮ ಮೇಲಿನ ಆರೋಪವನ್ನು ಮಹಾತ್ಮರು ಒಪ್ಪಿಕೊಂಡು ತಾವು ರಾಜದ್ರೋಹಿಗಳು ಏಕೆ ಆದೆವೆಂಬುದನ್ನು ವಿಸ್ತೃತವಾಗಿ ಹೇಳಿದರು. ದೇಶದಲ್ಲಿ ನಡೆದ ಎಲ್ಲ ಅತ್ಯಾಚಾರಗಳ ಹೊಣೆಯನ್ನು ತನ್ನ ತಲೆಯಮೇಲೆಯೇ ತೆಗೆದುಕೊಂಡರು.

'ನಾನು ಒಬ್ಬ ಹೊಣೆಗಾರ ಮನುಷ್ಯನು, ಸುಶಿಕ್ಷಿತನು ಆದುದರಿಂದ ನನ್ನ ಕೃತಿಗಳ ಪರಿಣಾಮವನ್ನು ಬಲ್ಲವನು. ಹೌದು ನನ್ನ ಕೃತಿಗಳ ಪರಿಣಾಮವು ನನಗೆ ಗೊತ್ತಿತ್ತು. ನಾನು ಬೆಂಕಿಯೊಡನೆ ಆಡುತ್ತಿರುವೆನೆಂಬುದೂ ನನಗೆ ಗೊತ್ತು. ನನ್ನನ್ನು ಈಗ ಬಿಟ್ಟರೆ ನಾನು ಮತ್ತೆ ನಾನು ಬೆಂಕಿಯೊಡನೆಯೇ ಆಡುವೆನು. ನಾನು ಹಾಗೆ ಮಾಡದಿದ್ದರೆ ನನ್ನ ಕರ್ತವ್ಯವನ್ನು ನಾನು ಮಾಡಿದಂತಾಗುವದಿಲ್ಲ. ಅತ್ಯಾಚಾರವನ್ನು ತಪ್ಪಿಸಬೇಕೆಂದು ನನ್ನ ನಿಶ್ಚಯವಿದೆ. ಅನತ್ಯಾಚಾರವು ನನ್ನ ಅಚಲ ಧರ್ಮವಾಗಿದೆ. ನನ್ನ ದೇಶಕ್ಕೆ ಅಪಾರ ಹಾನಿಯನ್ನು ಮಾಡಿದ ರಾಜ್ಯಪದ್ಧತಿಯು ಒಂದೆಡೆಗೆ, ನನ್ನಿಂದ ನಿಜವಾದ ಮಾತನ್ನು ತಿಳಿದು ತಲೆಕೆಟ್ಟ ಜನತೆಯ ರೋಷಾಗ್ನಿಯು ಇನ್ನೊಂದೆಡೆಗೆ. ನಾನು ಇವೆರಡರಲ್ಲಿ ಒಂದನ್ನು ಆಚರಿಸಬೇಕಾಗಿತ್ತು. ನನ್ನ ಜನರು ಹುಚ್ಚರಂತೆ ಕೆಲವುಸಲ

ವರ್ತಿಸಿದರು. ಇದಕ್ಕಾಗಿ ನಾನು ವಿಷಾದಿಸುವೆನು. ಆದರೆ ನನ್ನ ವಿಷಯದಲ್ಲಿ ದಯೆಯನ್ನು ತೋರಿರೆಂದು ನಾನು ಹೇಳಲಾರೆ. ನಾನು ಮಾಡಿದ ಕೃತಿಗಳು ಕಾಯದೆಯ ದೃಷ್ಟಿಯಿಂದ ಅಪರಾಧಗಳಿದ್ದರೂ ನನ್ನ ದೃಷ್ಟಿಯಿಂದ ಅವು ನಾಗರಿಕನ ಶ್ರೇಷ್ಠ ಕರ್ತವ್ಯಗಳಾಗಿವೆ. ಆದ್ದರಿಂದ ನೀವು ಕೊಡತಕ್ಕ ಎಲ್ಲಕ್ಕೂ ಹೆಚ್ಚಿನ ಶಿಕ್ಷೆಯನ್ನು ನಾನು ಆನಂದದಿಂದ ಸ್ವೀಕರಿಸುವೆನು. ನೀವು ನಡವಳಿಕೆಯಲ್ಲಿ ತರಬೇಕಾದ ಕಟ್ಟಳೆಯು ಅನ್ಯಾಯದಿದ್ದು ನಾನು ನಿರಪರಾಧಿಯೆಂದು ತೋರಿದರೆ, ನೀವು ನಿಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವದು ಒಳಿತು. ಆದರೆ ಆ ಕಾಯದೆಗಳು ಜನರ ಹಿತಕ್ಕಾಗಿವೆ ಎಂದೂ ನನ್ನ ಕೃತಿಗಳು ಜನರಿಗೆ ಹಾನಿಕಾರಕವಾಗಿವೆಯೆಂದೂ ನಿಮಗೆ ಅನಿಸಿದರೆ, ನನಗೆ ಆದಷ್ಟು ಹೆಚ್ಚಿಗೆ ಶಿಕ್ಷೆಯನ್ನು ವಿಧಿಸುವದೇ ನಿಮ್ಮ ಕರ್ತವ್ಯವು ' ಎಂದು ಹೇಳಿದರು. ೧೮ನೇ ಮಾರ್ಚಿಗೆ ೬ ವರ್ಷದ ಶಿಕ್ಷೆಯು ವಿಧಿಸಲ್ಪಟ್ಟಿತು. ಮಹಾತ್ಮರ ಸಂದೇಶಕ್ಕಾಗಿ ಜನರು ಕಾದಿದ್ದರು. '**ಖಾದಿಯೇ ಸ್ವಾತಂತ್ರ್ಯದ ಹಾದಿ**' ಎಂಬ ಒಂದೇ ಒಂದು ಮಾತಿನಲ್ಲಿ ದಿವ್ಯಮಂತ್ರವನ್ನು ಉಪದೇಶಿಸಿದರು.

ಮಹಾತ್ಮರು ಜೇಲಿಗೆ ಹೋದೊಡನೆಯೇ ವಾತಾವರಣವೇ ಬದಲಾಯಿತು. ಕೌನ್ಸಿಲ ಪ್ರವೇಶದ ಮಾತಿಗೆ ಪ್ರಾರಂಭವಾಯಿತು. ಅದೇ ದಿಶೆಯಲ್ಲಿ ಮುಂದಕ್ಕೆ ಸಾಗಿತು.

ಗಾಂಧಿಯವರು ಜೇಲಿನಲ್ಲಿ ಎರಡು ವರ್ಷ ಕಳೆಯುವದರಲ್ಲಿಯೇ ಅವರ ಪ್ರಕೃತಿಯು ಕೆಟ್ಟಿತು. ಕರುಳಿನರೋಗವಾಯಿತು. (ಅಪೆಂಡಿಸಾಯಿಟ್ಸ) ಸರಕಾರವು ಆಪರೇಶನದ ಹೊಣೆಯನ್ನು ಹೊರಲಿಲ್ಲ. ಗಾಂಧಿಯವರು ತಾವೇ ಹೊಣೆ ಹೊತ್ತರು. ಸಸೂನ ಆಸ್ಪತ್ರೆಯಲ್ಲಿ ಕರಳು ಕೊಯ್ಯಲಾಯಿತು. ಸರಕಾರದವರು ಅವರನ್ನು ಬಂಧಮುಕ್ತ ಮಾಡಿದರು.

ಮಹಾತ್ಮರು ಹೊರಬೀಳುವ ಸಮಯಕ್ಕೆ ದೇಶದಲ್ಲಿ ಅನವಸ್ಥೆಯುಂಟಾಗಿತ್ತು. ಹಿಂದು ಮುಸಲ್ಮಾನರ ಐಕ್ಯವು ಮಾಯವಾಗಿ ದ್ವೇಷವೂ ಮತ್ಸರವೂ ಬಳೆಯತೊಡಗಿದ್ದವು. ಇದನ್ನು ಕಂಡು

ಮಹಾತ್ಮರಿಗೆ ಅತ್ಯಂತ ದುಃಖವಾಗಿ ೨೧ ದಿವಸದ ಉಪವಾಸವನ್ನು ಕೈಕೊಂಡರು. ಅದರ ಪರಿಣಾಮವಾಗಿ ಐಕ್ಯ ಪರಿಷತ್ತು ಕೂಡಿತು.

೧೯೨೪ರಲ್ಲಿ ಬೆಳಗಾವಿ ಕಾಂಗ್ರೆಸ್ಸಿಗೆ ಮಹಾತ್ಮರೇ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಮಹಾತ್ಮರು ತಮ್ಮ ಸತ್ಯಾಗ್ರಹದ ಮೇಲಿನ ನಿಷ್ಠೆಯನ್ನು ಮತ್ತೆ ಪ್ರಕಟಿಸಿದರು. 'ಸತ್ಯಾಗ್ರಹದ ಮೇಲೆ ನನ್ನ ಅಚಲವಾದ ವಿಶ್ವಾಸವಿದೆ. ಅಸಹಕಾರವಾಗಲೀ ಕಾಯದೇಭಂಗವಾಗಲಿ ಇವು ಸತ್ಯಾಗ್ರಹದ ಶಾಖೆಗಳಾಗಿವೆ. ಸತ್ಯಾಗ್ರಹವು ನನ್ನ ಕಲ್ಪದ್ರುಮವಾಗಿದೆ. ಸತ್ಯಾಗ್ರಹವು ಸತ್ಯದ ಶೋಧನೆಯು. ಸತ್ಯವೆಂದರೆ ದೇವರು. ಸತ್ಯವನ್ನು ತೋರಿಸಿಕೊಡುವ ಬೆಳಕೇ ಅಹಿಂಸೆಯು. ನನ್ನ ಮಟ್ಟಿಗೆ ಹೇಳುವುದಾದರೆ, ಸ್ವರಾಜ್ಯವಾದರೂ ಈ ಸತ್ಯದ ಒಂದು ಭಾಗವಾಗಿದೆ. ದಕ್ಷಿಣ ಆಫ್ರಿಕೆಯಲ್ಲಿಯೂ ಖೇಡಾ ಜಿಲ್ಹೆಯಲ್ಲಿಯೂ ಚಂಪಾರಣ್ಯದಲ್ಲಿಯೂ ಸತ್ಯಾಗ್ರಹವು ಯಶಸ್ವಿಯಾಗಿದೆ. ಸತ್ಯಾಗ್ರಹದಲ್ಲಿ ಯಾವ ತರಹದ ಹಿಂಸೆಯೂ ಇಲ್ಲ, ದ್ವೇಷವೂ ಇಲ್ಲ. ನಾನು ಇಂಗ್ಲೀಷರನ್ನು ದ್ವೇಷಿಸಲಾರೆ. ಅವರ ದಾಸ್ಯದಲ್ಲಿಯೂ ಇರಲಾರೆ. ಆದುದರಿಂದ ನಾವೆಲ್ಲರೂ ಸತ್ಯಾಗ್ರಹಿಗಳಾಗುವ. ಸ್ವರಾಜ್ಯದಂತೆಯೇ ಸತ್ಯಾಗ್ರಹವೂ ಜನ್ಮಸಿದ್ಧ ಹಕ್ಕಾಗಿದೆ' ಎಂದು ಹೇಳಿದರು.

ರಾಷ್ಟ್ರದ ಸಿದ್ಧತೆಯು ಕಾಣದ್ದರಿಂದ ಮಹಾತ್ಮರು ಸರಿದು ನಿಂತರು. ವಿಧಾಯಕ ಕಾರ್ಯಕ್ರಮವನ್ನು ಕೈಕೊಂಡರು. ಖಾದಿ ಕಾರ್ಯವು ಇದರಿಂದ ರೂಪಗೊಂಡಿತು. ಅದ್ಭುತವಾಗಿ ಬೆಳೆಯಿತು. ಮಹಾತ್ಮರು ಕಾಂಗ್ರೆಸ ಕಾರ್ಯದಿಂದ ಸರಿದುನಿಂತರೂ ರಾಷ್ಟ್ರವು ಸರಿದು ನಿಲ್ಲಲಿಲ್ಲ. ಕಾಂಗ್ರೆಸ್ಸಿನ ಪ್ರತಿಯೊಂದು ಕಾರ್ಯವು ಇವರ ಆಲೋಚನೆಯಂತೆಯೇ ನಡೆಯುತ್ತಿತ್ತು. ಪ್ರತಿಯೊಂದು ಮಾತೂ ಇವರ ಕಿವಿಯ ವರೆಗೆ ಬರದೆ ಹೋಗುತ್ತಿದ್ದಿಲ್ಲ. ಎರಡು ಮೂರು ವರ್ಷಗಳು ಕಳೆದವು.

ರಾಜಕೀಯ ವಾತಾವರಣವು ಬದಲಾಗಹತ್ತಿತು. ಯಾವ ತರಹದ ಸುಧಾರಣೆಗಳನ್ನು ಕೊಡಬೇಕೆಂಬ ಬಗ್ಗೆ ವಿಚಾರಮಾಡುವದಕ್ಕಾಗಿ

**ಸಾಯಮನ್ ಕಮೀಶನ್** ನಿಯಮಿಸಲ್ಪಟ್ಟಿತು. ಅದರಲ್ಲಿ ಒಬ್ಬನೂ ಹಿಂದೀಯನು ಇಲ್ಲದ್ದರಿಂದ ಇಡೀ ರಾಷ್ಟ್ರವೇ ಬಹಿಷ್ಕರಿಸಬೇಕೆಂದು ನಿಶ್ಚಯಿಸಿತು. ಎಲ್ಲ ಪಕ್ಷದವರು ಕಾಂಗ್ರೆಸ್ಸಿನ ಕಡೆಗೆ ನಿರೀಕ್ಷಿಸುತ್ತಿದ್ದರು. ಡಾ। ಅನ್ಸಾರಿಯವರ ಅಧ್ಯಕ್ಷತೆಯಲ್ಲಿ ೧೯೨೭ರಲ್ಲಿ ಮದ್ರಾಸಿನಲ್ಲಿ ಕಾಂಗ್ರೆಸ್ಸು ನೆರೆಯಿತು. ಸಾಯಮನ್ ಕಮೀಶನ್‌ವನ್ನು ಕಾಯದೇಮಂಡಲದವರೂ ರಾಷ್ಟ್ರವೂ ಬಹಿಷ್ಕರಿಸಬೇಕೆಂದು ಗೊತ್ತುವಳಿಯಾಯಿತು. ಇದಲ್ಲದೆ ಕಾಂಗ್ರೆಸ್ ವರ್ಕಿಂಗ್‌ಕಮೀಟಿಯವರು ಎಲ್ಲ ಪಕ್ಷಪಂಗಡಗಳ ಸಹಾಯದಿಂದ ಸ್ವರಾಜ್ಯ ಘಟನೆಯನ್ನು ಸಿದ್ಧಪಡಿಸಬೇಕೆಂದೂ ನಿರ್ಣಯಮಾಡಿದರು.

ಸಾಯಮನ್ ಕಮೀಶನ್ ಭಾರತಕ್ಕೆ ಫೆಬ್ರುವರಿ ೩ನೇ ತಾರೀಖಿಗೆ ಬಂದಿತು. ಬಹಿಷ್ಕಾರದ ಗಾಳಿಯು ಬೀಸಹತ್ತಿತು. ಭಾರತದ ಎಲ್ಲ ದೊಡ್ಡ ಪಟ್ಟಣಗಳಲ್ಲಿ ಹರತಾಳವು ಪಾಲಿಸಲ್ಪಟ್ಟಿತು. ಮದ್ರಾಸದಲ್ಲಿ ಗೋಳೀಬಾರಾಯಿತು. ಲಾಹೋರಿನಲ್ಲಿ ಲಾಠಿ ಚಾರ್ಜು ಆಗಿ, ಲಜಪತರಾಯರಿಗೆ ಹೊಡತ ಬಿದ್ದು ಅದರಿಂದಲೆ ಮುಂದೆ ಅವರು ಮರಣಹೊಂದಿದರು. ಲಖನೌದಲ್ಲಿ ಕುದುರೇ ಸ್ವಾರರೂ ಸೈನಿಕರೂ ಜನರನ್ನು ಮನಬಂದಂತೆ ಹೊಡೆದರು. '**ಸಾಯಮನ್ನರೇ ತಿರುಗಿ ಹೋಗಿರಿ**' ಎಂಬ ಕೂಗು ಭಾರತದ ನಭೋಮಂಡಲದಲ್ಲೆಲ್ಲ ದುಮುದುಮಿಸಿತು. ಇತ್ತ ಸರ್ವಪಕ್ಷೀಯ ಪರಿಷತ್ತು ನೆರೆದು ನೆಹರೂ ವರದಿಯೂ ಸಿದ್ಧವಾಯಿತು.

೧೯೨೮ರಲ್ಲಿ ಕಲಕತ್ತೆಯಲ್ಲಿ ಮೋತೀಲಾಲರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸು ಕೂಡಿತು. ಯುವಕರು ಸರಕಾರದ ಅತ್ಯಾಚಾರದಿಂದ ಸಂತಪ್ತರಾಗಿದ್ದರು. ನೆಹರು ವರದಿಯನ್ನು ರಾಷ್ಟ್ರವು ಸ್ವೀಕರಿಸಕೂಡದೆಂದೂ ಸಂಪೂರ್ಣ ಸ್ವಾತಂತ್ರ್ಯವೇ ಭಾರತದ ಧ್ಯೇಯವೆಂದೂ ಚಳವಳಿಯು ಪ್ರಾರಂಭವಾಯಿತು. ರಾಜಸನ್ಯಾಸವನ್ನು ಸ್ವೀಕರಿಸಿದ ಮಹಾತ್ಮರು ಮತ್ತೆ ರಾಜಕೀಯ ರಂಗಕ್ಕೆ ಬಂದರು. ಸರಕಾರದವರು ೧ ವರ್ಷದಲ್ಲಿ ನೆಹರುವರದಿಯಂತೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಒಂದು ವರ್ಷದಲ್ಲಿ ಕೊಡದಿದ್ದರೆ ಸಂಪೂರ್ಣ ಸ್ವಾತಂತ್ರ್ಯವೇ

ಕಾಂಗ್ರೆಸ್ಸಿನ ಧ್ಯೇಯವೆಂದು ಸಾರಬೇಕೆಂದೂ ಕಾಂಗ್ರೆಸ್ಸು ಕರಬಂದಿಯನ್ನೊಳಗೊಂಡ ಅಸಹಕಾರದ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದೂ ನಿರ್ಣಯವಾಯಿತು.

ರಾಷ್ಟ್ರದಲ್ಲಿ ಸಂಘಟನೆಗೆ ಪ್ರಾರಂಭವಾಯಿತು. ಮಹಾತ್ಮರ ಸಂಚಾರವೂ ಪ್ರಾರಂಭವಾಯಿತು. ಕಲಕತ್ತೆಯಲ್ಲಿ ಪರದೇಶಿ ಬಟ್ಟೆಗಳ ಹೋಳಿಯನ್ನು ಮಾಡಿದರು. ಅದಕ್ಕಾಗಿ ಮಹಾತ್ಮರ ಮೇಲೆ ಖಟ್ಲೆಯಾಯಿತು. ಅವರಿಗೆ ಒಂದು ರೂಪಾಯಿ ದಂಡವಾಯಿತು. ದಂಡವನ್ನು ಕೊಡಲು ತಪ್ಪುದೆಂಬುದು ತನ್ನ ಹತ್ತಿರ ಏನೂ ಇಲ್ಲವೆಂದೂ ಯಾರು ನನ್ನ ಸಲುವಾಗಿ ದಂಡವನ್ನು ಕೊಟ್ಟಿರುವರೊ ಅವರು ನನ್ನ ಹಿತಚಿಂತಕರು ಅಲ್ಲವೆಂದರು. ಮಹಾತ್ಮರು ಕಾರ್ಯರಂಗಕ್ಕೆ ಬಂದೊಡನೆಯೇ ವಾತಾವರಣವು ಕಾಯಹತ್ತಿತು. ಕಲಕತ್ತೆಯ ಕಾಂಗ್ರೆಸ ಸಮೀಪಿಸಹತ್ತಿತ್ತು. ವ್ಹಾಯಿಸರಾಯರು ಮುಂದಿನ ಆಲೋಚನೆಗಾಗಿ ಇಂಗ್ಲಂಡಕ್ಕೆ ತೆರಳಿದರು. ಅಕ್ಟೋಬರದಲ್ಲಿ ಮರಳಿ ಬಂದರು. ಭಾರತವನ್ನು ಕ್ರಮೇಣ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವುಳ್ಳ ರಾಷ್ಟ್ರಗಳ ಪಂಙ್ತಿಗೆ ತರುವದೇ ಬ್ರಿಟಿಶರ ಇಚ್ಛೆಯಿದೆ; ಅದಕ್ಕಾಗಿ ಭಾರತದ ಪ್ರತಿನಿಧಿಗಳೊಡನೆ (ಕಾಂಗ್ರೆಸ್ಸಿನೊಡನೆಯೇ ಅಲ್ಲ) ಬ್ರಿಟಿಶ ಸರಕಾರವು ವಿಚಾರವಿನಿಮಯ ಮಾಡುವದೆಂದು ಬಳ್ಳೇ ಮೋಹಕವಾದ ಭಾಷೆಯಲ್ಲಿ ಹೇಳಿದರು.

ಬ್ರಿಟಿಶರ ಹುರುಳನ್ನರಿತ ಮಹಾತ್ಮರ ಮುಂದೆ ಇದು ಹೇಗೆ ಸಾಗಬೇಕು? ಮಹಾತ್ಮರು, ಮೋತೀಲಾಲರು, ಜಿನ್ನಾ, ಸಪ್ರು, ವಿಠ್ಠಲಭಾಯಿ ಪಟೇಲ ಇವರೆಲ್ಲರೂ ೨೫ ನೇ ಡಿಸೆಂಬರ ದಿವಸ ವ್ಹಾಯಿಸರಾಯರನ್ನು ಕಂಡರು. ಮಾತಿಗೆ ಮೊದಲೇ ಮಹಾತ್ಮರು 'ವಸಾಹತಿ ಸ್ವರಾಜ್ಯವನ್ನು ಕೊಡಬೇಕೆಂಬ ಆಧಾರದ ಮೇಲೆಯೇ ಮಾತುಕಥೆ ನಡೆಯುವದಷ್ಟೇ!' ಎಂದು ಕೇಳಿದರು. ವ್ಹಾಯಿಸರಾಯರು ಅಂತಹ ವಚನವನ್ನು ಕೊಡಲು ಬರುವದಿಲ್ಲೆಂದರು. ಮಹಾತ್ಮರು ಅಲ್ಲಿಗೆ ಮಾತು ಮುಗಿಸಿ ಲಾಹೋರಿಗೆ ಹೋದರು. ಪಂ. ಜವಾಹರಲಾಲರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ ಪ್ರಾರಂಭವಾಯಿತು. ಕಾಂಗ್ರೆಸ್ಸು ತನ್ನ ವಚನದಂತೆ, ೩೧ ನೇ ತಾರೀಖಿನ

ರಾತ್ರಿ ೧೨ ಘಂಟೆಯವರೆಗೆ ಹಾದೀ ನೋಡಿತು. ಸರಕಾರದಿಂದ ಯಾವ ಉತ್ತರವೂ ಬರಲಿಲ್ಲ. ರಾತ್ರಿ ೧೨ ಘಂಟೆಗೆ ಸಂಪೂರ್ಣ ಸ್ವಾತಂತ್ರ್ಯದ ಘೋಷಣೆಯು ಮಾಡಲ್ಪಟ್ಟಿತು. ಮುಂದಿನ ಹೋರಾಟದ ಸಿದ್ಧತೆಯೆಂದು, ಕೌನ್ಸಿಲ ಬಹಿಷ್ಕಾರವು ಸಾರಲ್ಪಟ್ಟಿತು. ಯೋಗ್ಯ ಸಮಯ ನೋಡಿಕೊಂಡು ಸತ್ಯಾಗ್ರಹವನ್ನು ಹೂಡಬೇಕೆಂದು ನಿರ್ಣಯ ವಾಯಿತು.

ವರ್ಕಿಂಗ ಕಮಿಟಿಯವರು ರಾಷ್ಟ್ರದ ಶಕ್ತಿಯನ್ನು ತಿಳಿದುಕೊಳ್ಳು ವದಕ್ಕಾಗಿ ೨೬ನೇ ಜನವರಿಯ ದಿನವನ್ನು ಸ್ವಾತಂತ್ರ್ಯದಿನವೆಂದು ಪಾಲಿಸ ಬೇಕೆಂದು ರಾಷ್ಟ್ರಕ್ಕೆ ಆಜ್ಞೆಯನ್ನಿತ್ತರು. ಕಾಂಗ್ರೆಸ್ಸಿನ ಎಲ್ಲ ಸಿದ್ಧತೆಯನ್ನು ಕಂಡು ವ್ಹಾಯಿಸರಾಯರು ಒಂದು ಭಾಷಣವನ್ನು ೨೫ನೇ ಜನವರಿಗೆ ಮಾಡಿದರು. ಸ್ವಾತಂತ್ರ್ಯ ದಿನಾಚರಣೆಯು ಭಾರತದಲ್ಲೆಲ್ಲ ಒಳ್ಳೇ ವಿಜೃಂಭಣೆಯಿಂದ ಪಾಲಿಸಲ್ಪಟ್ಟಿತು. ವರ್ಕಿಂಗ ಕಮಿಟಿಯವರು ಗೊತ್ತುಪಡಿಸಿದ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ರಾಷ್ಟ್ರವು ಮಾಡಿತು. ಮಹಾತ್ಮರು ಅಂದೇ ವ್ಹಾಯಿಸರಾಯರಿಗೆ ಬಂದು ಪತ್ರವನ್ನು ಬರೆದು ದೊಡ್ಡ ದೊಡ್ಡ ಮಾತುಗಳನ್ನು ಆಡುವದಕ್ಕಿಂತ ಈ ನಮ್ಮ ಬೇಡಿಕೆಗಳನ್ನು ಕೂಡಲೆ ಮನ್ನಿಸಿರಿ ಎಂದು ಆವ್ಹಾನಿಸಿದರು.

## ಮಹಾತ್ಮರ ಹನ್ನೊಂದು ಬೇಡಿಕೆಗಳು

(೧) ಮದ್ಯಪಾನವು ಪೂರ್ಣ ನಿಲ್ಲಬೇಕು. (೨) ಹುಂಡಿಯ ಧಾರಣೆಯು ೧೬ ಪೇನ್ಸ ಆಗಬೇಕು. (೩) ತೆರಿಗೆಯು ಬಹಳ ಕಡಿಮೆಯೆಂದರೆ ೧೦೦ಕ್ಕೆ ೫೦ರಷ್ಟಾದರೂ ಇಳಿಸಲ್ಪಡಬೇಕು. (೪) ಉಪ್ಪಿನ ಮೇಲಿನ ಕರವು ಹೋಗಬೇಕು. (೫) ಸೈನ್ಯದ ಖರ್ಚನ್ನು ಮೊದಲಿಗೆ ಅರ್ಧದಷ್ಟಾದರೂ ಕಡಿಮೆ ಮಾಡಬೇಕು. (೬) ವರಿಷ್ಠ ಅಧಿಕಾರಿಗಳ ಪಗಾರವು ಅರ್ಧದಷ್ಟು ಇಲ್ಲವೆ ಅದಕ್ಕಿಂತ ಸ್ವಲ್ಪ ಕಡಿಮೆ ಮಾಡಿ ತೆರಿಗೆಯಿಂದ ಕಡಿಮೆಯಾದ ಹಣವನ್ನು ಭರ್ತಿ ಮಾಡಿಕೊಳ್ಳಬೇಕು. (೭) ಪರದೇಶಿ ಅರಿವೆಗಳ ಮೇಲೆ ಸಂರಕ್ಷಕ ಜಕಾತಿಯನ್ನು ಕೂಡಿಸಬೇಕು. (೮) ಬಂದರದಲ್ಲಿಯ ವ್ಯಾಪಾರದ ನಿಯಂತ್ರಣವು ಭಾರತೀಯರ ಕೈಯಲ್ಲಿ ಬರಬೇಕು.

(೯) ಕೊಲೆ ಮಾಡಿದ ಇಲ್ಲವೆ ಪ್ರಯತ್ನ ಮಾಡಿದ ಕೈದಿಗಳನ್ನು ಬಿಟ್ಟು ಉಳಿದ ಎಲ್ಲ ರಾಜಕೀಯ ಕೈದಿಗಳನ್ನು ಬಿಟ್ಟುಬಿಡಬೇಕು. ಮತ್ತು ಗಡಿದಾಟಿಸಲ್ಪಟ್ಟ ಎಲ್ಲರಿಗೂ ತಿರುಗಿ ಬರಲು ಅಪ್ಪಣೆ ದೊರೆಯಬೇಕು. (೧೦) ಗುಪ್ತ ಪೋಲೀಸ ಖಾತೆಯು ಕಿತ್ತೊಗೆಯಲ್ಪಡಬೇಕು. ಇಲ್ಲವೆ ಪ್ರಜಾಪ್ರತಿನಿಧಿಗಳ ಕಡೆಗೆ ಬರಬೇಕು. (೧೧) ಆತ್ಮರಕ್ಷಣೆಯ ಸಲು ವಾಗಿ ಶಸ್ತ್ರಾಸ್ತ್ರಗಳನ್ನು ಉಪಯೋಗಿಸಲು ಅಧಿಕಾರ ಕೊಡಬೇಕು.

(ಇವೇ ಮಾತುಗಳನ್ನೇ ಮುಖ್ಯ ಮಂತ್ರಿಗಳಾದ ಮ್ಯಾಕ್ಡೊನಾಲ್ಡರ ಮುಂದೆಯೂ ಮಂಡಿಸಲ್ಪಟ್ಟಿದ್ದವೆಂದು ಹೇಳುತ್ತಾರೆ.)

'ಈ ಮಾತುಗಳನ್ನು ವ್ಹಾಯಿಸರಾಯರು ಕೂಡಲೆ ಮಾನ್ಯ ಮಾಡಿದ್ದರೆ ಅವರಿಗೆ ಕಾಯದೇಭಂಗದ ಧ್ವನಿಯು ಕೇಳುತ್ತಿದ್ದಿಲ್ಲ. ಯಾವ ಸ್ಥಳದಲ್ಲಿ ವಿಚಾರಸ್ವಾತಂತ್ರ್ಯವು ಇರುವದೋ, ಬೇಡಿಕೆಗಳನ್ನು ಸ್ಪಷ್ಟ ಮಂಡಿಸಲು ಅನುವು ಇದೆಯೋ, ಅಂಥ ಯಾವುದೇ ಸಭೆಯಲ್ಲಿ ಭಾಗ ವಹಿಸಲು ಕಾಂಗ್ರೆಸ್ಸು ಭಾಗ ತೆಗೆದುಕೊಳ್ಳುವದು. ಇಂಥ ಸಣ್ಣ ಮಾತುಗಳನ್ನು ಕೂಡ ಮಾಡಲು ಒಪ್ಪದಿದ್ದರೆ ಕಾಯದೇ ಭಂಗವನ್ನು ಮಾಡಿರಿ ಎಂದೇ ಹೇಳಿದಂತಾಗುವದು.'

ಉಳಿದ ರಾಷ್ಟ್ರಗಳು ಸ್ವಾತಂತ್ರ್ಯಕ್ಕಾಗಿ ಬೇರೆ ಸಾಧನಗಳನ್ನು ಉಪಯೋಗಿಸಬಹುದು. ಆದರೆ ಹಿಂದುಸ್ಥಾನಕ್ಕೆ ಮಾತ್ರ ಅಸತ್ಯಾಚಾರಿ ಅಸಹಕಾರಿತೆಯ ಹೊರ್ತು ಮತ್ತೊಂದು ಮಾರ್ಗವಿಲ್ಲ. ದೇವರು ನಮಗೆ ಸಾಮರ್ಥ್ಯವನ್ನು ಕೊಡಲಿ. ಯುದ್ಧವು ತಲೆಬಾಗಿಲಿಗೆ ಬಂದಿದೆ.

ಈ ಪತ್ರದ ಹಣೆಯ ಬರಹವು ಏನಾಗುವದೆಂಬುದು ಮಹಾತ್ಮರಿಗೂ ರಾಷ್ಟ್ರಕ್ಕೂ ಗೊತ್ತೇ ಇತ್ತು. ರಾಷ್ಟ್ರದಲ್ಲಿ ಸತ್ಯಾಗ್ರಹ ಸಿದ್ಧತೆಯು ಒಳ್ಳೇ ವೇಗದಿಂದ ಪ್ರಾರಂಭವಾಯಿತು. ೨೫ನೇ ಫೇಬ್ರುವರಿಗೆ ಕಾಂಗ್ರೆಸ ವರ್ಕಿಂಗ್ ಕಮೀಟಿಯು ಕೂಡಿತು. ಗಾಂಧಿಯವರು ಸರ್ವಾಧಿಕಾರಿಗಳಾಗಿ ನಿಯಮಿಸಲ್ಪಟ್ಟರು. ವ್ಹಾಯಿಸರಾಯರಿಗೆ ಪತ್ರ ಬರೆಯುವದೇ ಗಾಂಧಿಯವರ ಮೊದಲಿನ ಕೆಲಸವಾಗಿತ್ತು. ಈ ಕಾರ್ಯವನ್ನು **ರೇಜಿನಾಲ್ಡ** ಎಂಬ ಒಬ್ಬ ಇಂಗ್ಲೀಷ ತರುಣನಿಗೆ ಒಪ್ಪಿಸಿದರು. ಈ

ಕಾರ್ಯದಿಂದ ತಾವು ಇಂಗ್ಲೀಷರನ್ನು ದ್ವೇಷಿಸುವದಿಲ್ಲೆಂದು ಜಗತ್ತಿಗೆ ತೋರಿಸಿದರು. ಯುದ್ಧನೀತಿಯಂತೆ ಸರಕಾರಕ್ಕೆ ತಿಳಿಸುವದು ಅವಶ್ಯ ವಿತ್ತು. ಈ ಪತ್ರದಲ್ಲಿ ಸರಕಾರಕ್ಕೆ ಕೊನೆಯ ಮಾತನ್ನು ತಿಳಿಸಲಾಗಿತ್ತು. ಭಾರತದ ಬೇಡಿಕೆಗಳ ವಿಷಯವಾಗಿ ಮಾರ್ಚ ೧೧ನೇ ತಾರೀಖಿನ ಒಳಗಾಗಿ ಉತ್ತರವು ಬರದಿದ್ದರೆ ಉಪ್ಪಿನ ಸತ್ಯಾಗ್ರಹಕ್ಕಾಗಿ ತನ್ನ ಸಂಗಡಿಗರೊಡನೆ ಆಶ್ರಮದಿಂದ ಹೊರಬೀಳುವೆನೆಂದು ಬರೆದಿದ್ದರು. ವ್ಹಾಯಿಸರಾಯರು ತಮ್ಮ ಉತ್ತರದಲ್ಲಿ ಗಾಂಧಿಯವರ ನಿಶ್ಚಯದ ಬಗ್ಗೆ ಖೇದವನ್ನು ವ್ಯಕ್ತ ಪಡಿಸಿ ಇಂಥ ಘೋರ ಕಾರ್ಯಕ್ಕೆ ಕೈಹಾಕಬಾರದೆಂದು ಬರೆದಿದ್ದರು.

ಮಹಾತ್ಮರು ಇದಕ್ಕೆ ಉತ್ತರ ಕೊಡುತ್ತ 'ನಾನು ಜೋಳಿಗೆ ಯನ್ನು ತೆಗೆದುಕೊಂಡು ವಿನಯದಿಂದ ಭಿಕ್ಷೆಯನ್ನು ಬೇಡಿದರೆ ರೊಟ್ಟಿಯ ಬದಲು ಕಲ್ಲುಗಳು ಸಿಕ್ಕವು. ಬ್ರಿಟಿಶ ಜನಾಂಗವು ಆಸುರೀ ಸಾಮರ್ಥ್ಯದ ಮೇಲೆಯೇ ಬದುಕಲು ಬಯಸುತ್ತಿದೆ'

ಮಾರ್ಚ ೧೨ನೇ ತಾರೀಖಿನ ದಿವಸ ಮಹಾತ್ಮರು ೭೯ ಜನ ಆಶ್ರಮಸಿವಾಸಿಗಳನ್ನು ತೆಗೆದುಕೊಂಡು ದಾಂಡಿ ಯಾತ್ರೆಗೆ ಹೊರಟರು. ಅದ್ಭುತವಾದ ದೃಶ್ಯವಿತ್ತು. ಒಬ್ಬ ಲಂಗೋಟಿಯ ಬಂಟಿ ಎಲುಬಿನ ಸನ್ಯಾಸಿಯು ಬ್ರಿಟಿಶ ಸಾಮ್ರಾಜ್ಯದೊಡನೆ ಹೋರಾಡಲು ಬರಿಗೈ ಯಿಂದ ಹೊರಟಿದ್ದು ಜಗತ್ತಿನ ಇತಿಹಾಸದಲ್ಲಿಯೇ ಹೊಸಬಗೆಯು. ಸೈನ್ಯವು ಹೋದಹೋದಲ್ಲೆಲ್ಲ ಅದ್ಭುತವಾದ ಸ್ವಾಗತವಾಗಹತ್ತಿತ್ತು. ಗೌಡ ಶಾನಭೋಗರೆಲ್ಲರೂ ರಾಜೀನಾಮೆಗಳನ್ನು ಕೊಡಹತ್ತಿದ್ದರು. ಮಹಾತ್ಮರು ಸತ್ಯಾಗ್ರಹದ ತತ್ವಗಳನ್ನು ಉಪದೇಶಿಸುತ್ತಿದ್ದರು. ಭಾರತ ವೆಲ್ಲವೂ ಉತ್ಸಾಹದಿಂದ ತುಂಬಿತುಳುಕಹತ್ತಿತು.

೨೧ನೇ ಮಾರ್ಚಿಗೆ ಕಾಂಗ್ರೆಸ ವರ್ಕಿಂಗ ಕಮೀಟಿಯು ಕೂಡಿ, ೬ ನೇ ಎಪ್ರಿಲಿನಿಂದ ಭಾರತವಲ್ಲೆಲ್ಲ ಸತ್ಯಾಗ್ರಹ ಮಾಡಬೇಕೆಂದು ಸಾರಿ ದರು. ೫ ನೇ ತಾರೀಖಿನ ದಿವಸ ಮಹಾತ್ಮರು, ದಾಂಡಿಯನ್ನು ಮುಟ್ಟಿ ದರು. ೬ ನೇ ತಾರೀಖಿನ ದಿವಸ ಸಮುದ್ರದಲ್ಲಿ ಸ್ನಾನಮಾಡಿ ಸಮು ದ್ರದ ದಂಡೆಯ ಮೇಲಿನ ಉಪ್ಪನ್ನು ಕೈಯಲ್ಲಿ ಹಿಡಿದು ಉಪ್ಪಿನ

ಕಾಯದೆಯನ್ನು ಮುರಿದರು. ಭಾರತದಲ್ಲೆಲ್ಲ ಲಕ್ಷಾವಧಿ ಜನರು ಕಾಯದೆ ಭಂಗವನ್ನು ಮಾಡಿದರು. ಸಾವಿರಾರು ಜನರು ಸೆರೆಮನೆಯನ್ನು ಸೇರಿದರು. ಉಪ್ಪಿನ ಕಾಯದೆಯು ಮಣ್ಣುಗೂಡಿತು. ಆದರೂ ಮಹಾತ್ಮರನ್ನು ಹಿಡಿಯಲಿಲ್ಲ. ಮಹಾತ್ಮರು ಸಿಂದೀ ಗಿಡಗಳ ಸಂಹಾರಕ್ಕೆ ಕೈಯಿಕ್ಕಿದರು. ಕೋಟ್ಯಾವಧಿ ಗಿಡಗಳು ಕಡಿಯಲ್ಪಟ್ಟವು. ಮೇ ೪ ನೇ ತಾರೀಖಿಗೆ ಇನ್ನೊಂದು ಪತ್ರವನ್ನು ಸರಕಾರಕ್ಕೆ ಬರೆದು **ಧರಸಾನಾ ಉಪ್ಪಿನ** ಆಗರದ ಮೇಲೆ, ದಾಳಿಮಾಡುವೆವೆಂದು, ಸಾರಿದರು. ೫ ನೇ ತಾರೀಖಿಗೆ ಮಹಾತ್ಮರು ಹಿಡಿಯಲ್ಪಟ್ಟರು. ಸತ್ಯಾಗ್ರಹವು ಶಿಖರಕ್ಕೆ ಮುಟ್ಟಿತು. ದಬ್ಬಾಳಿಕೆಯು ಹೆಚ್ಚಾಯಿತು. ಎಷ್ಟೋ ಸ್ಥಳಗಳಲ್ಲಿ ಪೋಲೀಸರು ಎಸರಾದ ಉಪ್ಪನ್ನು ಸತ್ಯಾಗ್ರಹಿಗಳ ಮೇಲೆ ಸುರುವಿದರು. ತಲೆಗಳನ್ನು ಒಡೆದರು. ಲಾಠೀ ಹೊಡತಗಳಂತೂ ಹುಡುಗರ ಆಟವಾಗಿ ಹೋಯಿತು. ಭಾರತೀಯರು ಇವನ್ನೆಲ್ಲ ವೀರತನದಿಂದ ಸಹನಮಾಡಿದರು. ಎರಡು ಮೂರು ಕಡೆಗೆ ಗೋಳೀಬಾರಗಳೂ ಆದವು. ಆದರೆ ಉತ್ಸಾಹವು ಇಮ್ಮಡಿಯಾಯಿತು. ಸತ್ಯಾಗ್ರಹವು ವಿಶ್ವರೂಪವನ್ನು ತಾಳಿತು. ಅನೇಕ ಮುಖದಿಂದ ಹೊರಬಿದ್ದಿತು. ಜಂಗಲ ಸತ್ಯಾಗ್ರಹ, ಜಪ್ತಾದ ಪುಸ್ತಕಗಳನ್ನು ಮಾರುವದು, ಬ್ರಿಟಿಶ ಮಾಲುಗಳ ಪಿಕೆಟಿಂಗ, ವೃತ್ತಪತ್ರಗಳನ್ನು ತೆಗೆಯುವದು, ಇವೇ ಮೊದಲಾದ ಕಾಯದೆಗಳನ್ನು ಮುರಿದು ಜೇಲಿಗೆ ತೆರಳಹತ್ತಿದರು. ಮುಂಬಯಿ ವ್ಯಾಪಾರಸ್ಥರು ಒಂದು ವರ್ಷದವರೆಗೆ ಪರದೇಶಿ ವಸ್ತ್ರಗಳನ್ನು ತರಿಸಬಾರದೆಂದು ನಿರ್ಣಯಿಸಿದರು. ಸರಕಾರದ ತಲೆತಿರುಗಿತು. ವಿಶೇಷಾಧಿಕಾರಗಳ ಉಪಯೋಗವನ್ನು ಮಾಡಿಕೊಂಡು ವೃತ್ತಪತ್ರಗಳ ಬಾಯಿಗೆ ಚಂಡು ತುರುಕಿದರು. ಕಾಂಗ್ರೆಸ ಕಮಿಟಿಗಳನ್ನು ಅಕ್ರಮಕೂಟಗಳೆಂದು ನಿರ್ಣಯಿಸಿದರು. ಆದರೆ ಚಳವಳಿಯು ಇದಕ್ಕೆ ಬಗ್ಗಲಿಲ್ಲ. ಒಳ್ಳೇ ಭರದಿಂದ ಮುಂದೆ ಸಾಗಿತು. ಈ ಯುದ್ಧದಲ್ಲಿ ಸ್ತ್ರೀಯರು ತೋರಿಸಿದ ವೀರತೆಯು ಸುವರ್ಣಾಕ್ಷರಗಳಿಂದ ಬರೆಯಲ್ಪಡುವದರಲ್ಲಿ ಸಂಶಯವಿಲ್ಲ. ಯಾವ ಕಾರ್ಯಕ್ಕೆ ವರ್ಷವು ಬೇಕೋ ಅಂಥ ಕಾರ್ಯಗಳು ದಿನದಲ್ಲಿಯೇ ಆದವು. ಘೋಷಾವನ್ನು ಕಿತ್ತೊಗೆದರು, ಸೂರ್ಯನ ಮೋರೆಯನ್ನೂ ನೋಡದ ನೂರಾರು

ಕೋಮಲಾಂಗಿಯರು ಯುದ್ಧಭೂಮಿಗೆ ಧಾವಿಸಿದರು. ಭಾರತೀಯ ವೀರ ಸ್ತ್ರೀ ಜೀವನದ ಅರಿವು ಜಗತ್ತಿಗೆ ಉಂಟಾಯಿತು. ಅವರು ಕಷ್ಟ ಸಹಿಷ್ಣುತೆ ಯಿಂದಲೂ, ವೀರತೆಯಿಂದಲೂ, ತ್ಯಾಗದಿಂದಲೂ ಗಂಡಸರನ್ನು ನಾಚಿಸಿ ದರು. ಅಸಂಭವವಿದ್ದ ಕಾರ್ಯವನ್ನು ಸಂಭವಿಸಿ ತೋರಿಸಿದರು. ಇವರು ಕಾಲಿಟ್ಟಲ್ಲಿ ಜಯವೇ ಕಟ್ಟಿಟ್ಟದ್ದು. ಶರೆ, ಸಿಂದಿ ಅಂಗಡಿಗಳು ಹೆಸರಿಗೆ ಮಾತ್ರ ಉಳಿದವು. ಪರದೇಶಿ ಬಟ್ಟೆಗಳ ವ್ಯಾಪಾರವು ಬಂದಾಯಿತು. ದಬ್ಬಾಳಿಕೆಯೂ ಜೋರಾಯಿತು. ಸೊಲ್ಲಾಪುರದಲ್ಲಿ ದಂಗೆಯಾಯಿತು. ಧನಶೆಟ್ಟಿ ಮಲ್ಲಪ್ಪ, ಸಿಂಧೆ, ಕುರ್ಬಾನ, ಹುಸೇನ ಮೊದಲಾದವರಿಗೆ ಫಾಶಿಯಾಯಿತು. ಪೇಶಾವರದಲ್ಲಿಯೂ ದಂಡಿನ ಆಳಿಕೆಯು ಪ್ರಾರಂಭ ವಾಯಿತು. ಗಢವಾಲಿ ಸೈನ್ಯದ ತುಕಡಿ ನಿಃಶಸ್ತ್ರ ಜನರ ಮೇಲೆ ಗುಂಡು ಹಾರಿಸಲು ಒಪ್ಪದಾಗಲು ಅವರಿಗೆ ಘೋರ ಶಿಕ್ಷೆಗಳಾದವು.

ದಿಲ್ಲಿಯಲ್ಲಿಯ ವ್ಯಾಪಾರಸ್ಥರೆಲ್ಲರೂ ಬ್ರಿಟಿಶ ಮಾಲುಗಳನ್ನು ಕಳಿಸ ಬೇಡಿರೆಂದು ಇಂಗ್ಲಂಡಕ್ಕೆ ತಾರು ಮಾಡಿದರು. ಪರದೇಶಿ ವಸ್ತ್ರಗಳೆಲ್ಲವೂ ಕಾಂಗ್ರೆಸ್ಸಿನಿಂದ ಮುದ್ರಿತವಾಗಿ ಬಿದ್ದವು. ಈ ಸಮಯದಲ್ಲಿ ಭಾರತದಲ್ಲಿ ಕಾಂಗ್ರೆಸ್ಸಿನ ರಾಜ್ಯವು ನಡೆದಿದೆಯೋ ಎನ್ನುವಹಾಗಿತ್ತು. ಆರ್ಡಿನನ್ಸಗಳ ಮೇಲೆ ಆರ್ಡಿನನ್ಸುಗಳು ಹೊರಟವು. ಆದರೆ ಅದರ ಪರಿಣಾಮವು ಏನೂ ಆಗಲಿಲ್ಲ. ಕೊನೆಗೆ ಸಪ್ರು ಜಯಕರರ ಮುಖಾಂತರ ಒಪ್ಪಂದಕ್ಕೆ ಪ್ರಾರಂಭವಾಯಿತು. ಮೋತೀಲಾಲ, ಜವಾಹಿರಲಾಲ, ಗಾಂಧಿ ವ್ಹಾಯಿಸರಾಯರ ನಡುವೆ ಜೇಲಿನಲ್ಲಿಯೇ ಮಾತುಗಳು ನಡೆದವು. ಕೊನೆಗೆ ವ್ಹಾಯಿಸರಾಯರು ಏನೂ ಕರಾರುಗಳಿಲ್ಲದೆ ಕಾಂಗ್ರೆಸ ವರ್ಕಿಂಗ ಕಮೀಟಿಯ ಸಭಾಸದರನ್ನು ಹೊರಗೆ ಬಿಟ್ಟರು. ಪೂರ್ಣ ವಿಚಾರ ವಿನಿಮಯವಾಗಿ ಮಾನ್ಯ ಒಪ್ಪಂದವಾಯಿತು. ಗಾಂಧಿ ಆಯರ್ವಿನ ಒಪ್ಪಂದವೆಂದು ಇದು ಜಗತ್ಪ್ರಸಿದ್ಧವಿದೆ. ಅಸಹಕಾರದ ಎಲ್ಲ ಕೈದಿಗಳು ಬಿಡಲ್ಪಟ್ಟರು. ಉಪ್ಪು ಮಾಡುವ ಅಧಿಕಾರವು ದೊರೆಯಿತು. ಈ ಒಪ್ಪಂದ ದಿಂದ ಕಾಂಗ್ರೆಸ್ಸಿನ ಮರ್ಯಾದೆಯು ತಿಳಿಯಿತು. ಬ್ರಿಟಿಶ ಸಾಮ್ರಾಜ್ಯಕ್ಕೆ ಪರಿಸಮಾನವಾದ ಸಂಸ್ಥೆಯು ಕಾಂಗ್ರೆಸ್ಸು ಎಂದು ಗಣಿಸಲ್ಪಡಹತ್ತಿತು.

ಭಾರತದಲ್ಲಿ ಇದೊಂದೇ ಸಂಸ್ಥೆ ಎಂದು ಬ್ರಿಟನ್ನವು ಒಪ್ಪಬೇಕಾಯಿತು.

ಕರಾಚಿಯ ಗೊತ್ತುವಳಿಯಂತೆ, ಮಹಾತ್ಮರು ಏಕಮೇವಾದ್ವಿತೀಯ ಕಾಂಗ್ರೆಸ್ಸಿನ ಪ್ರತಿನಿಧಿಗಳೆಂದು ರೌಂಡಟೇಬಲ್ಲಿನ ಪರಿಷತ್ತಿಗೆ ಇಂಗ್ಲಂಡಕ್ಕೆ ತೆರಳಿದರು. ಇಂಗ್ಲಂಡಕ್ಕೆ ಹೋದ ಮೇಲೆ, ಬ್ರಿಟಿಶರ ಮನೋವೃತ್ತಿಯಲ್ಲಿ ಏನೂ ಬದಲಾಗಿಲ್ಲವೆಂದು ಅವರಿಗೆ ಅನಿಸಿತು. ಒಬ್ಬ ಆಯರ್ವಿನ್ನರ ಪ್ರಯತ್ನದಿಂದ ಏನಾಗಬೇಕಿತ್ತು?

ಮಹಾತ್ಮರು ಕಾಂಗ್ರೆಸ್ಸಿನ ಬೇಡಿಕೆಯನ್ನು ಭಿಡೆ ಮುರುವತ್ತುಗಳಿಲ್ಲದೆ ನಿರ್ಭಯರೀತಿಯಿಂದ ಮಂಡಿಸಿದರು. ಆದರೆ ಅಲ್ಲಿ ನೆರೆದ ಉಳಿದವರೆಲ್ಲರೂ ಏಕಮತದವರಿಲ್ಲದ್ದರಿಂದ ಮಹಾತ್ಮರು ಪರಿಷತ್ತಿನ ಭವಿಷ್ಯವನ್ನು ಮೊದಲೇ ತಿಳಿದಿದ್ದರು. ಗಾಂಧಿಯವರ ಭಾಷಣಗಳು ಅಪೂರ್ವವಾದವು. ಕಾಂಗ್ರೆಸ್ಸಿನ ಭೂಮಿಕೆಯನ್ನು ಅವರು ನಿಸಂದಿಗ್ಧರೀತಿಯಲ್ಲಿ ಮಂಡಿಸಿದರು.

'ಕಾಂಗ್ರೆಸ್ಸು ಎಲ್ಲಕ್ಕೂ ಹಳೆಯ ರಾಜಕೀಯ ಸಂಸ್ಥೆಯು. ಕಳೆದ ಐವತ್ತು ವರ್ಷಗಳಲ್ಲಿ ಪ್ರತಿ ವರ್ಷ ಅದರ ಅಧಿವೇಶನಗಳಾಗಿವೆ. ಅದು ಎಲ್ಲ ಜಾತಿಗಳ ಪ್ರತಿನಿಧಿಯಾಗಿದೆ. ಒಬ್ಬ ಇಂಗ್ಲೀಷ ಗೃಹಸ್ಥರೇ ಅದರ ಮೂಲ ಉತ್ಪಾದಕರು. ದಾದಾಭಾಯಿ, ಮೇಥಾರಂಥ ಪಾರ್ಸಿ ಜನರಿಂದ ಅದು ಪೋಷಿತವಾಗಿದೆ. ಮೊದಲಿನಿಂದಲೂ ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರೂ ಕ್ರಿಶ್ಚನ್ನರೂ ಆಂಗ್ಲೊ ಇಂಡಿಯನ್ನರೂ ಸೇರಿರುವರು. ಎಲ್ಲ ಜಾತಿಯವರೂ ಈ ಸಂಸ್ಥೆಯ ಅಧ್ಯಕ್ಷರಾಗಿದ್ದಾರೆ. ಕಾಂಗ್ರೆಸ್ಸಿನ ವರ್ಕಿಂಗ ಕಮೀಟಿಯಲ್ಲಿ ನಾಲ್ವರು ಮುಸಲ್ಮಾನರಿರುವರು. ಇದೊಂದೆ ಭಾರತದ ನಿಜವಾದ ಪ್ರತಿನಿಧಿಯು. ಅಸ್ಪೃಶ್ಯರ ಉದ್ಧಾರಕ್ಕಾಗಿ ಕಾಂಗ್ರೆಸ್ಸು ಪ್ರಯತ್ನ ಮಾಡಿದೆ. ೧೯೨೦ ರಿಂದ ಕಾಂಗ್ರೆಸ್ಸಿನ ಕಾರ್ಯಕ್ರಮದಲ್ಲಿ ಹರಿಜನೋದ್ಧಾರವು ಒಂದು ಕಾರ್ಯಕ್ರಮವಾಗಿದೆ. ಅಸ್ಪೃಶ್ಯತಾನಿವಾರಣೆಯ ಹೊರ್ತು ಸಂಪೂರ್ಣ ಸ್ವಾತಂತ್ರ್ಯವು ದೊರೆಯಲಾರದೆಂದು ಕಾಂಗ್ರೆಸ್ಸಿನ ಭಾವನೆಯಿದೆ. ಕೋಟ್ಯಾವಧಿ ಬಡಹಳ್ಳಿಗರ ಪ್ರತಿನಿಧಿ ಎಂದರೆ ಕಾಂಗ್ರೆಸ್ಸು. ಎಲ್ಲಕ್ಕೂ ಮಹತ್ವದ ಕಾರ್ಯ ಮಾಡಿದುದೆಂದರೆ,

ಅದು ಅ. ಭಾ. ಚರಖಾ ಸಂಘದ ಪರವಾಗಿ ೨೦೦೦ ಹಳ್ಳಿಗಳಲ್ಲಿ ೫೦೦೦೦ ಹೆಂಗಸರಿಗೆ ಹೊಸ ಉದ್ಯೋಗವನ್ನು ಕಾಂಗ್ರೆಸ್ಸು ಕಲ್ಪಿಸಿಕೊಟ್ಟಿದೆ.

ದುಂಡು ಮೇಜಿನ ಪರಿಷತ್ತಿನಿಂದ ಏನೂ ಹಿಂದುಸ್ತಾನದ ಹಿತವು ಸಾಧಿಸುವದಿಲ್ಲೆಂದು ಕಂಡುಬಂದಿತು. ಕೊನೆಯ ಭಾಷಣದಲ್ಲಿ ‘ ಪರಿಷತ್ತಿನಲ್ಲಿಯ ಪ್ರತಿನಿಧಿಗಳು ಯಾವುದೊಂದು ಪಂಗಡದ ಪ್ರತಿನಿಧಿಗಳಾಗಿದ್ದಾರೆ. ಆದರೆ ಕಾಂಗ್ರೆಸ್ಸು ಅಖಂಡ ಭಾರತದ ಪ್ರತಿನಿಧಿಯಾಗಿದೆ. ಅದೇನೂ ಯಾವ ಜಾತಿನಿಷ್ಠ ಸಂಸ್ಥೆಯಲ್ಲ. ಹಿಂದುಸ್ತಾನದಲ್ಲಿಯ ೭ ಲಕ್ಷ ಹಳ್ಳಿಗಳ ಮೇಲೂ ಕಾಂಗ್ರೆಸ್ಸಿನ ಪರ್ಗಸ್ಸು ಇದೆ. ಎಂಬುದನ್ನು ಎಲ್ಲರೂ ಒಪ್ಪುವರು. ಆದರೆ ಈ ಪರಿಷತ್ತಿನಲ್ಲಿ ಮಾತ್ರ ಕಾಂಗ್ರೆಸ್ಸೆಂದರೆ ಅನೇಕ ಪಕ್ಷಗಳಲ್ಲಿ ಒಂದಾಗಿದೆ. ಇದರಿಂದ ಕಾಂಗ್ರೆಸ್ಸಿಗೇನೂ ಹಾನಿಯಿಲ್ಲ. ಆದರೆ ನಾವು ಇಲ್ಲಿ ಕೂಡಿದ ಉದ್ದೇಶಕ್ಕೆ ಮಾತ್ರ ಹಾನಿಯಿದೆ. ಕಾಂಗ್ರೆಸ್ಸೊಂದೇ ಅಖಿಲ ಭಾರತೀಯ ಸಂಸ್ಥೆಯಾಗಿದೆ.

ಕಾಂಗ್ರೆಸ್ಸೆಂದರೆ ಬಂಡಾಯದ ಪ್ರತಿನಿಧಿಯಾಗಿದೆ. ಹಿಂಸೆಯು ಅದರ ಮಾರ್ಗವಲ್ಲ. ಅಹಿಂಸಾತ್ಮಕ ಸತ್ಯಾಗ್ರಹವೇ ಅದರ ಮಾರ್ಗವು. ಸತ್ಯಾಗ್ರಹವು ನಡೆದಾಗ ಸರಕಾರದವರು ಅದನ್ನು ದಬ್ಬಲು ಯತ್ನಿಸಬಹುದು. ಆದರೆ ಈ ತರಹದ ಶಕ್ತಿಗೆ ಸರಕಾರವು ಕೊನೆಗೆ ತಲೆಬಾಗಬೇಕಾಗುವದು. ನನ್ನ ನಾಡಿಗಾಗಿ ಮರ್ಯಾದೆಯ ಒಪ್ಪಂದವನ್ನು ಮಾಡಿಕೊಳ್ಳಲು ಕೊನೆಯವರೆಗೂ ಹೆಣಗುವೆನು. ನನ್ನ ಪ್ರಯತ್ನಗಳು ನಿಷ್ಫಲವಾಗಿ ಲಕ್ಷಾವಧಿ ಜನರನ್ನು ಮತ್ತೆ ರಾಷ್ಟ್ರೀಯ ಹೋರಾಟದ ಸುಳಿಕ್ಕೆ ಹಾಕುವದು ಅವಶ್ಯವೆನಿಸಿದರೆ, ನಾನೇನು ಹಿಂಜರಿಯಲಿಕ್ಕಿಲ್ಲ.

ಇನ್ನೂ ಸಮಯವು ಮೀರಿಹೋಗಿಲ್ಲ. ನನ್ನ ಹಾಗು ವರ್ಕಿಂಗ ಕಮಿಟಿಯ ಸಭಾಸದರ ಜೀವನಗಳು ನಿಮ್ಮ ಕೈಯಲ್ಲಿಯೇ ಇವೆ. ಇದೂ ಅಲ್ಲದೆ ಕೋಟ್ಯಾವಧಿ ಭಾರತೀಯರ ಜೀವನವೂ ನಿಮ್ಮ ಕೈಯಲ್ಲಿವೆ. ಆದ್ದರಿಂದಲೇ ಸ್ವಾಭಿಮಾನ ಪೂರ್ವಕವಾದ ಒಪ್ಪಂದವನ್ನು ಮಾಡಿಕೊಳ್ಳಲು ನಾನು ಸದಾ ಸಿದ್ಧನಿದ್ದೇನೆ. **ಹಿಂದುಸ್ತಾನಕ್ಕೆ ಸ್ವಾತಂತ್ರ್ಯವು ಬೇಕಾಗಿದೆ.** ಅದಕ್ಕೆ ಬೇಕಾದ ಹೆಸರು ಕೊಡಿರಿ. ಆದರೆ

ನಕಲೀ ಸ್ವಾತಂತ್ರ್ಯವು ಮಾತ್ರ ನಮಗೆ ಬೇಡ. ಈ ಮೂಲಭೂತ ಮಾತಿನ ವಿಷಯಕ್ಕೆ ಒಪ್ಪಿಗೆಯಾಗದಿದ್ದರೆ, ನಮ್ಮ ನಿಮ್ಮ ನಡುವೆ ಶಾಂತಿಯು ಆಗಲಾರದು. ನಾನು ನಿರಾಶನಾಗಿಲ್ಲ. ದಿಲ್ಲಿಯಲ್ಲಾದ ಒಪ್ಪಂದವೇ ದೃಢವಾಗಬೇಕೆಂದು ಇಚ್ಛೆ. ೬೨ ವರ್ಷದ ಮುದುಕನಿಗೆ ಸ್ವಲ್ಪಾದರೂ ಸಂಧಿಯನ್ನು ಕೊಡಿರಿ. ನಿಮ್ಮ ಅಂತಃಕರಣದಲ್ಲಿ ಕಾಂಗ್ರೆಸ ಸಂಸ್ಥೆಗೆ ಸ್ವಲ್ಪಾದರೂ ಸ್ಥಾನವನ್ನು ಕೊಡಿರಿ. ನನ್ನ ಮೇಲೆ ವಿಶ್ವಾಸವಿದ್ದಂತೆ ತೋರಿಸುವಿರಿ. ಆದರೆ ಕಾಂಗ್ರೆಸ್ಸಿನ ಮೇಲೆ ನಿಮ್ಮ ವಿಶ್ವಾಸವಿಲ್ಲ. ನಾನು ಬೇರೆ ಕಾಂಗ್ರೆಸ್ಸು ಬೇರೆ ಎಂದು ಕ್ಷಣಮಾತ್ರಕ್ಕೂ ತಿಳಿಯಬೇಡಿರಿ. ನಮಗೆ ಗೋದೀ ರೊಟ್ಟಿಯು ಬೇಕಾಗಿಲ್ಲ. ಸ್ವಾತಂತ್ರ್ಯದ ರೊಟ್ಟಿಯು ಬೇಕಾಗಿದೆ. ಸಾತಂತ್ರ್ಯವು ದೊರೆಯದಿದ್ದರೆ, ದೇಶದಲ್ಲಿ ಲಕ್ಷಾವಧಿ ಕಾರ್ಯಕರ್ತರಿಗೂ ಶಾಂತಿಯಿಲ್ಲ, ದೇಶಕ್ಕೂ ಶಾಂತಿಯಿಲ್ಲ.

ಕೊನೆಯ ಆಭಾರವನ್ನು ಮನ್ನಿಸುವಾಗ ಮಹಾತ್ಮರು ಹೀಗೆ ಹೇಳಿದರು. ಈ ಮುಂದೆ ನಮ್ಮ ನಿಮ್ಮಲ್ಲಿ ಸಹಕಾರ ಉಂಟಾಗುವದೋ ಇಲ್ಲವೋ ಇದು ನಿಮ್ಮನ್ನೇ ಅವಲಂಬಿಸಿದೆ. ನಾನು ಎಲ್ಲರಿಗೂ ಅಭಿನಂದನೆ ಗಳನ್ನು ಅರ್ಪಿಸುತ್ತೇನೆ....ಪರಿಷತ್ತಿನ ಪರಿಣಾಮವು ಏನೇ ಆಗಲಿ, ನಾನು ಹೋದಲ್ಲೆಲ್ಲ ಪ್ರೇಮವು ಕಂಡು ಬಂದಿದೆ. ಇದನ್ನು ನಾನೆಂದಿಗೂ ಮರೆಯಲಾರೆ. ನನ್ನೊಡನೆ ಸಹಸ್ರಾವಧಿ ಇಂಗ್ಲೀಷ ಜನರ ಪ್ರೇಮ ವನ್ನು ಒಯ್ಯುತ್ತಲಿದ್ದೇನೆ. ಮುಖ್ಯ ಪ್ರಧಾನರು ಹೊರಡಿಸಿದ ಘೋಷಣೆ ಯನ್ನು ನಾನು ಮತ್ತೆ ಮತ್ತೆ ಓದಿಕೊಳ್ಳುವೆನು. ಅದರಿಂದ **'ನನಗೆ ಸಮಾಧಾನವಾಗದಿದ್ದರೆ ನನ್ನ ಮಾರ್ಗವು ನನಗೆ, ನಿಮ್ಮ ಮಾರ್ಗವು ನಿಮಗೆ.'**

ಗಾಂಧಿಯವರು ಇಂಗ್ಲಂಡದಿಂದ ಮರಳಿ ಬರುವಷ್ಟರಲ್ಲಿ ಒಪ್ಪಂದದ ಭಂಗವಾಗಿತ್ತು. ಸರಕಾರವು ವಾಯವ್ಯ ಮತ್ತು ಬಂಗಾಲ ಪ್ರಾಂತದಲ್ಲಿ ಆರ್ಡಿನನ್ಸುಗಳನ್ನು ಹೊರಡಿಸಿತ್ತು. ಅದರಂತೆ **ಅಬ್ದುಲಗಫೂರಖಾನ ರನ್ನು ಹಿಡಿದಿತ್ತು.** ಸಂಯುಕ್ತಪ್ರಾಂತದಲ್ಲಿ ಬಂಗಾಲದ ನಿಮಿತ್ತ ವಾಗಿ, ರೈತರಿಗೆ ಲಾವಣೀ ಹಣವನ್ನೂ ಹಪ್ತೆಯನ್ನೂ ಸಲ್ಲಿಸುವದು

ಕಷ್ಟಕರವಾಗಿತ್ತು. ಇದರಿಂದ ರೈತರಿಗೆ ಕೆಲವೊಂದುಮಟ್ಟಿಗೆ ಸೂಟು ಕೊಡಬೇಕೆಂದು ಚಳವಳಿಯು ಪ್ರಾರಂಭವಾಯಿತು. ಇದರಿಂದ ಆರ್ಥಿಕ ಸತ್ಯಾಗ್ರಹ ಕೈಕೊಳ್ಳುವ ಪ್ರಸಂಗ ಬಂದಿತ್ತು.

ಗಾಂಧಿಯವರು ಬಂದೊಡನೆಯೇ ವರ್ಕಿಂಗಕಮೀಟಿಯ ಸಭೆಯು ಮುಂಬಯಿಯಲ್ಲಿ ನಡೆಯಿತು. ವರ್ಕಿಂಗಕಮೀಟಿಗೆಂದು ಹೊರಟ ಪಂಡಿತ ಜವಾಹಿರಲಾಲರು ಹಾದಿಯಲ್ಲಿಯೇ ಹಿಡಿಯಲ್ಪಟ್ಟರು. ಗಾಂಧಿಯವರ ಮನಸ್ಸು ಇವೆಲ್ಲ ಸಂಗತಿಗಳಿಂದ ಉದ್ವಿಗ್ನವಾಯಿತು. ವ್ಹಾಯಿಸರಾಯರಿಗೆ ತಾವು ಮಾಡಿ ಇವೆಲ್ಲ ಮಾತುಗಳ ಚರ್ಚೆಗೆ ಅವಕಾಶವಿದೆಯೇ ಎಂದು ಕೇಳಿದರು. ಬಂಗಾಲ, ಸಂಯುಕ್ತಪ್ರಾಂತ, ವಾಯುವ್ಯಪ್ರಾಂತ ಇವುಗಳಲ್ಲಿ ಸರಕಾರವು ಕೈಕೊಂಡ ಧೋರಣವನ್ನು, ವಿಚಾರಿಸಲು ಅವಕಾಶವಿಲ್ಲೆಂದು ಉತ್ತರಕೊಟ್ಟರು. ಇದಾದ ನಂತರ ವರ್ಕಿಂಗ ಕಮೀಟಿಯವರು ಕಾಯದೇಭಂಗದ ಕಾರ್ಯಕ್ರಮವನ್ನು ಕೈಕೊಳ್ಳಲೇ ಬೇಕಾಯಿತು.

ಭಯಂಕರವಾದ ದಬ್ಬಾಳಿಕೆಗೆ ಪ್ರಾರಂಭವಾಯಿತು. ಆರ್ಡಿನನ್ಸುಗಳು ಪ್ರಸಿದ್ಧಿಸಲ್ಪಟ್ಟವು. ಕಾಂಗ್ರೆಸ ಸಂಸ್ಥೆಗಳಲ್ಲದೆ ಸಾರ್ವಜನಿಕ ಚಟವಟಿಕೆಗಳುಳ್ಳ ಎಲ್ಲ ಸಂಸ್ಥೆಗಳು ಅಕ್ರಮಕೂಟಗಳೆಂದು ಸಾರಲ್ಪಟ್ಟವು. ರಾಷ್ಟ್ರದಲ್ಲಿಯ ಮುಖಂಡರೆಲ್ಲರೂ ಹಿಡಿಯಲ್ಪಟ್ಟರು. ಆದರೆ ಎಲ್ಲ ತರಹದ ಕಾಯದೆಭಂಗಗಳು ನಡೆದೇ ಇದ್ದವು. ಇಷ್ಟೇ ಅಲ್ಲ, ಸರಕಾರವು ನಾಚಿ ತಲೆಬಾಗುವಂತೆ ಕರ್ನಾಟಕದ ವೀರರು ಕರಬಂದೀ ಚಳವಳಿಯನ್ನು ಹೂಡಿ ಕಡೆಯವರೆಗೂ ಹೋರಾಡಿದರು. ಆಯಾ ಪ್ರಾಂತಗಳಲ್ಲಿ ಪ್ರಾಂತಿಕ ಪರಿಷತ್ತುಗಳಾದವು. ೧೯೩೨ರಲ್ಲಿ ಸಹ ದಿಲ್ಲಿಯಲ್ಲಿ ಕಾಂಗ್ರೆಸ ಅಧಿವೇಶನವು ನೆರವೇರಿತು. ಎಲ್ಲ ಪ್ರಾಂತಗಳಿಂದ ೮೦೦ ಜನ ಪ್ರತಿನಿಧಿಗಳು ಬಂದಿದ್ದರು. ೧೯೩೩ರಲ್ಲಿ ಕಲಕತ್ತೆಯಲ್ಲಿಯೂ ಕಾಂಗ್ರೆಸ ನೆರವೇರಿತು. ಕಾಯದೆಭಂಗವು ಅಖಂಡವಾಗಿ ಸಾಗಿ, ೧ ಲಕ್ಷ ಜನರು ಸೆರೆಮನೆಯನ್ನು ಸೇರಿದರು. ಹೀಗೆ ಚಳವಳಿಯು ೧-೧॥ ವರ್ಷದ ವರೆಗೆ ಅಖಂಡವಾಗಿ ನಡೆದುದೇನು ಸಾಮಾನ್ಯವಲ್ಲ.

ಇಷ್ಟರಲ್ಲಿ ಇನ್ನೊಂದು ಪ್ರಸಂಗವು ಒದಗಿತು. ಅಸ್ಪೃಶ್ಯರಿಗೆ ಪ್ರತ್ಯೇಕ ಸ್ಥಳಗಳನ್ನು ಕೊಡುವ ಆಲೋಚನೆಯನ್ನು ಸರಕಾರವು ಮಾಡಿತು. ದುಂಡುಮೇಜಿನ ಪರಿಷತ್ತಿನಲ್ಲಿ ಗಾಂಧಿಯವರು ಈ ರೀತಿಯಾಗಿ ಹಿಂದುಗಳಿಂದ ಅಸ್ಪೃಶ್ಯರನ್ನು ಬೇರ್ಪಡಿಸಿದ್ದೇ ಆದರೆ, ತಮ್ಮ ಪ್ರಾಣವನ್ನು ಕೊಟ್ಟಾದರೂ ಇದಕ್ಕಾಗಿ ಹೋರಾಡುವೆನು ಎಂದು ಹೇಳಿದ್ದರು. ಮಾರ್ಚ ೧೧ನೇ ತಾರೀಖಿಗೆ, ಸ್ಟೇಟ ಸೆಕ್ರೆಟರಿಯವರಿಗೆ, ಒಂದು ಪತ್ರ ಬರೆದು ಒಂದು ವೇಳೆ ಅಸ್ಪೃಶ್ಯರಿಗೆ ಪ್ರತ್ಯೇಕ ಪ್ರತಿನಿಧಿತ್ವಕೊಟ್ಟು ಹಿಂದುಗಳಿಂದ ಬೇರ್ಪಡಿಸಿದರೆ, ತಾವು ಆಮರಣ ಉಪವಾಸ ಕೈಕೊಳ್ಳುವೆನು, ಎಂದು ತಿಳಿಸಿದರು. ಅಗಸ್ಟತಿಂಗಳಲ್ಲಿ ಬ್ರಿಟಿಶ ಸರಕಾರದ ಮತ್ತು ಮುಖ್ಯ ಮಂತ್ರಿಯಾದ ಮ್ಯಾಕ್ಡೊನಾಲ್ಡರ ನಿರ್ಣಯವು ಹೊರಬಿತ್ತು. ಅನೇಕ ಸುತ್ತು ಮಾತುಗಳಿಂದ ಅದನ್ನೇ ಹೇಳಿದ್ದರು. ೧೮ನೇ ತಾರೀಖಿನ ದಿವಸ ಪ್ರಧಾನ ಮಂತ್ರಿಗಳಿಗೆ ೨೦ನೇ ಸಪ್ಟಂಬರಕ್ಕೆ ತಾವು ಆಮರಣ ಅನಶನ ವ್ರತ ಕೈಕೊಳ್ಳುವೆವೆಂದು ಪತ್ರ ಬರೆದರು. ಮುಖ್ಯಮಂತ್ರಿಯು ಸವಿಮಾತುಗಳಿಂದ ತಿರುಗಿ ತೆಗೆದುಕೊಳ್ಳಲು ಬರುವದಿಲ್ಲೆಂದರು.

೨೦ನೇ ಸಪ್ಟಂಬರಕ್ಕೆ ಮಹಾತ್ಮರ ಉಪವಾಸವು ಪ್ರಾರಂಭವಾಯಿತು. ಸರಕಾರ ಹಾಗು ತಮ್ಮ ನಡುವೆ ನಡೆದ ಎಲ್ಲ ಪತ್ರವ್ಯವಹಾರವನ್ನು ಪ್ರಸಿದ್ಧ ಮಾಡಿದರು. ಯಾವ ಹಿತಚಿಂತಕರ ಮಾತೂ ನಡೆಯಲಿಲ್ಲ. ಸರಕಾರವೂ ಗಾಬರಿಗೊಂಡಿತು. ಇದಕ್ಕೆ ಒಂದೇ ಉಪಾಯವಿದ್ದಿತು. ಸ್ಪೃಶ್ಯರು ಅಸ್ಪೃಶ್ಯರು ಕೂಡಿಕೊಂಡು ಒಂದು ನಿರ್ಣಯಕ್ಕೆ ಬಂದರೆ ಅದನ್ನು ಸರಕಾರವು ಸ್ವೀಕರಿಸುವದೆಂದು ಒಪ್ಪಿತ್ತು. ಜಗತ್ತಿನಲ್ಲೆಲ್ಲ ಹಾಹಾಕಾರವೆದ್ದಿತು. ಇಡೀ ಭಾರತದ ಹೃದಯಗಳೆಲ್ಲ **ಎರವಡಾ** ದ ಕಡೆಗೆ ಹರಿಯಹತ್ತಿದವು. ಪುಣೆಯಲ್ಲಿ ಎಲ್ಲ ಹಿಂದುಗಳ ಪರಿಷತ್ತು ಕೂಡಿತು. ಅದರಲ್ಲಿ ಒಪ್ಪಂದವಾಯಿತು. ಸಂಯುಕ್ತ ಮತದಾರ ಸಂಘವೇ ಇರಬೇಕು. ಆದರೆ ಅಸ್ಪೃಶ್ಯರಿಗೆ ಭಾರತದಲ್ಲಿ ೧೪೮ ಸ್ಥಳಗಳು ಕಾದಿಡಬೇಕೆಂದು ನಿರ್ಣಯವಾಯಿತು. ಬ್ರಿಟಿಶ ಸರಕಾರವೂ ೨೬ನೇ ತಾರೀಖಿಗೆ ಇದನ್ನು ಸ್ವೀಕರಿಸಿತು. ಈ ಸುದ್ಧಿಯು ಗಾಂಧಿಯವರಿಗೆ

ಸಂಜೆ ೪ ಘಂಟೆಗೆ ತಿಳಿಯಿತು. ೫ ಘಂಟೆಗೆ ಉಪವಾಸವನ್ನು ನಿಲ್ಲಿಸಿದರು. ಮುಂಬಯಿಯಲ್ಲಿ ಅಸ್ಪೃಶ್ಯನಿವಾರಣ ಸಂಘವು ಸ್ಥಾಪಿಸಲ್ಪಟ್ಟಿತು. ಅದೇ ರೂಪಾಂತರವಾಗಿ ಹರಿಜನ ಸೇವಕ ಸಂಘವಾಗಿದೆ. ಪ್ರಾಂತಪ್ರಾಂತಗಳಲ್ಲಿ ಶಾಖೆಗಳು ಸ್ಥಾಪಿಸಲ್ಪಟ್ಟು ಸಂಘಟಿತ ರೀತಿಯಿಂದ ಕಾರ್ಯ ಪ್ರಾರಂಭವಾಗಿದೆ. ಈ ಚಳವಳಿಯನ್ನು ನಡಿಸಲು ಜೇಲಿನಲ್ಲಿ ಎಲ್ಲ ತರದ ಅನುಕೂಲತೆಗಳನ್ನುಂಟುಮಾಡಲು ಸರಕಾರವು ಒಪ್ಪಿಕೊಂಡಿತು.

ಆದರೆ ಈ ಚಳವಳಿಯು ಯೋಗ್ಯದಿಶೆಯಲ್ಲಿ ನಡೆಯದಿರುವದನ್ನು ಕಂಡು ಮಹಾತ್ಮರಿಗೆ ತಮ್ಮ ಅಶಕ್ತತೆಯ ಭಾಸವಾಯಿತು. ಅದಕ್ಕಾಗಿ ಮೇ ೮ನೇ ತಾರೀಖಿನಿಂದ ೨೧ ದಿವಸದ ಉಪವಾಸವನ್ನು ಜಾಹೀರ ಪಡಿಸಿದರು. ಆದರೆ ಅವರು ಬಹಳ ಅಶಕ್ತರಾಗಿದ್ದರು. ೨೧ ದಿನ ಬಾಳುವದೇ ಎಂದು ಸರಕಾರಕ್ಕೆ ಎನಿಸಿ ಅವರನ್ನು ಜೇಲಿನಿಂದ ಬಿಟ್ಟುಬಿಟ್ಟಿತು. ಮಹಾತ್ಮರು **ಪರ್ಣಕುಟೀರ**ವೆಂಬ ಅರಮನೆಯಲ್ಲಿ ತಮ್ಮ ಉಪವಾಸವನ್ನು ಪೂರ್ಣ ಮುಗಿಸಿ, ತೇಜಸ್ವಿಗಳಾಗಿ ಹೊರಬಿದ್ದರು.

ಮಹಾತ್ಮರು ಕಾಂಗ್ರೆಸ್ಸಿನ ಅಧ್ಯಕ್ಷರಾದ ಅಣೆಯವರಿಗೆ ಪತ್ರ ಬರೆದು, ೬ ವಾರಗಳ ವರೆಗೆ ಕಾಯದೆಭಂಗವನ್ನು ನಿಲ್ಲಿಸಿ ಸರಕಾರದೊಡನೆ ಪತ್ರವ್ಯವಹಾರವನ್ನು ನಡೆಸಿದರು. ಸನ್ಮಾನಪೂರ್ವಕವಾಗಿ ಸರಕಾರವು ಮಾತುಕಥೆಗಳನ್ನು ಆಡಲು ಸಿದ್ಧವಿದೆಯೋ ಹೇಗೆ? ಸರಕಾರವು ಪೂರ್ಣ ಸತ್ಯಾಗ್ರಹವು ನಿಲ್ಲದ ಹೊರ್ತು ಶಕ್ಯವಿಲ್ಲೆಂದು ತಿಳಿಸಿತು. ಪುಣೆಯಲ್ಲಿ ಕಾಂಗ್ರೆಸ ಕಾರ್ಯಕರ್ತರ ಸಭೆ ಸೇರಿ, ಸಾರ್ವತ್ರಿಕ ಕಾಯದೆಭಂಗವು ನಿಲ್ಲಿಸಲ್ಪಡಬೇಕೆಂದೂ, ಕಾಂಗ್ರೆಸ ಕಮೀಟಿಗಳು ಮುಚ್ಚಲ್ಪಡಬೇಕೆಂದೂ, ವೈಯ್ಯಕ್ತಿಕ ಕಾಯದೆಭಂಗವನ್ನು ಸ್ವಂತ ಹೊಣೆಗಾರಿಕೆಯಿಂದ ಮಾಡಬೇಕೆಂದೂ ನಿರ್ಣಯವಾಯಿತು.

ಮಹಾತ್ಮರಿಗೆ ಚಳವಳಿಯ ಪರಿಸ್ಥಿತಿಯನ್ನು ಕಂಡು ಅತ್ಯಂತ ದುಃಖವಾಯಿತು. ಯುದ್ಧಕ್ಕೆ ತ್ಯಾಗವು ಸಾಲದೆಂದು ತಮ್ಮ ಅತ್ಯಂತ ಪ್ರಿಯವಾದ ಸಾಬರಮತಿ ಆಶ್ರಮವನ್ನು ಪೂರ್ಣ ತ್ಯಾಗ ಮಾಡಿಬಿಟ್ಟರು.

ಸರಕಾರಕ್ಕೆ ತಿಳಿಸಿದರು. ೧೬ ಹೆಣ್ಣುಮಕ್ಕಳು ಮತ್ತು ೧೬ ಜನ ಗಂಡಸ ರೊಡನೆ ರಾಸಕ್ಕೆ ಸತ್ಯಾಗ್ರಹಕ್ಕೆ ಹೋಗುವೆವೆಂದು ಪ್ರಸಿದ್ಧಿಸಿದರು. ೩ನೇ ಸಪ್ಟಂಬರಕ್ಕೆ ಎಲ್ಲರೂ ಹಿಡಿಯಲ್ಪಟ್ಟರು. ಗಾಂಧಿಯವರನ್ನು **ಎರವಡಾಕ್ಕೆ** ತರಲಾಯಿತು. ೩ನೇ ಅಗಸ್ಟಕ್ಕೆ ಮತ್ತೆ ಹೊರಗೆ ಬಿಟ್ಟು ಪುಣೆಯ ಹೊರಗೆ ಹೋಗಬಾರದೆಂದು ಸ್ಥಾನಬದ್ಧರನ್ನಾಗಿ ಮಾಡಿದರು. ಗಾಂಧಿಯವರು ಮತ್ತೆ ಕಾಯದೆಭಂಗ ಮಾಡಿದರು. ಈ ಸಲ ಅವರನ್ನು 'ಏ' ಕ್ಲಾಸಿನ ಕೈದಿಯಂತೆ ನಡಿಸಿಕೊಂಡರು. ೧ ವರ್ಷದ ಸಾದಾ ಶಿಕ್ಷೆ ಯಾಗಿತ್ತು. ಸರಕಾರವು ಹರಿಜನರ ಚಳವಳಿಯ ಸಲುವಾಗಿ ಕೊಟ್ಟ ಹಕ್ಕುಗಳನ್ನು ಮಾನ್ಯಮಾಡಲಿಲ್ಲ. ಗಾಂಧಿಯವರು ಉಪವಾಸವನ್ನು ಕೈಕೊಂಡರು. ಅವರ ಪ್ರಕೃತಿಯು ಕೆಡಲು ಅವರನ್ನು ಮತ್ತೆ ಬಿಟ್ಟರು. ಸರಕಾರವು ತಮ್ಮ ಸಂಗಡ ನಡೆಯಿಸಿದ ಹುಡುಗಾಟಿಕೆಯನ್ನು ಕಂಡು ಮಹಾತ್ಮರು ಶಿಕ್ಷೆಯು ಮುಗಿಯುವವರೆಗೆ, ಕಾಯದೇಭಂಗದಂತಹ ಕಾರ್ಯವನ್ನು ಮಾಡಬಾರದೆಂದು ತಾವೇ ನಿರ್ಬಂಧವನ್ನು ಹಾಕಿಕೊಂಡು ಸರಕಾರದ ಚಲ್ಲಾಟವನ್ನು ನಿಲ್ಲಿಸಿಬಿಟ್ಟರು. ಹರಿಜನ ಕಾರ್ಯವು ಕೈಕೊಳ್ಳಲ್ಪಟ್ಟಿತು.

ಇಷ್ಟರಲ್ಲಿ ಬಿಹಾರದ ಭೂಕಂಪವಾಗಿ ದೈವೀಕೋಪವಾದ್ದರಿಂದ ಅವರ ನೆರವಿಗೆ ಹೊರಟರು. ತಮ್ಮ ಜನರೊಡನೆ ಸೇವೆ ಮಾಡುತ್ತಿರು ವಾಗ ಆಶ್ರಮವಾಸಿಗಳ ಮನಸ್ಥಿತಿಯನ್ನು ಕಂಡು, ಇನ್ನು ಮುಂದೆ ಕಾಯದೆಭಂಗವು ನಿಲ್ಲಿಸಲ್ಪಡಬೇಕೆಂದೂ, ಸತ್ಯಾಗ್ರಹ ಧರ್ಮವು ಅತ್ಯಂತ ಸೂಕ್ಷ್ಮವಿದ್ದು, ಅದನ್ನು ಆಚರಿಸುವ ಅಧಿಕಾರವು ತಮಗೆ ಒಬ್ಬರಿಗೆ ಇರುವದೆಂದೂ ರಾಷ್ಟ್ರವು ನಿಲ್ಲಿಸಬೇಕೆಂದೂ ಒಂದು ದೊಡ್ಡ ಪ್ರಕಟನೆ ಯನ್ನು ಹೊರಡಿಸಿದರು. ಪಾಟಣಾದಲ್ಲಿ ೧೮೧೯ ಮೇ ೧೯೩೪ರಲ್ಲಿ ಕೂಡಿದ ಅ. ಭಾ. ಕಾಂಗ್ರೆಸ ಕಮೀಟಿಯಲ್ಲಿ ಹಾಗು ವರ್ಕಿಂಗಕಮೀಟಿಯಲ್ಲಿ ಕಾಯದೆಭಂಗವು ನಿಲ್ಲಿಸಲ್ಪಟ್ಟು ಕೌನ್ಸಿಲ ಪ್ರವೇಶದ ಗೊತ್ತುವಳಿ ಯಾಯಿತು.

ರಾಷ್ಟ್ರದಲ್ಲಿ ಉಂಟಾದ ಭಿನ್ನಭಿನ್ನ ಮತಗಳ ಪರಿವರ್ತನೆಯನ್ನು

ಕಂಡು ತಾವು ಕಾಂಗ್ರೆಸ್ಸಿನ ಹೊರಗೆ ನಿಂತು ಕಾರ್ಯಮಾಡುವದರಲ್ಲಿಯೇ ದೇಶದ ಕಲ್ಯಾಣವಿದೆ ಎಂದು ಅವರಿಗೆ ಅನಿಸಹತ್ತಿತು. ೧೭ನೇ ಸಪ್ಟಂಬರ ದಲ್ಲಿ ಒಂದು ದೀರ್ಘವಾದ ಪತ್ರಿಕೆಯನ್ನು ಪ್ರಸಿದ್ಧ ಮಾಡಿ ತಾವು ಏಕೆ ಬಿಡುವೆವೆಂಬುದನ್ನು ಜನತೆಯ ಮುಂದಿಟ್ಟರು. ಕಾಂಗ್ರೆಸ್ಸಿನ ಶಕ್ತಿಯು ಬೆಳೆಯುವಂತೆಯೂ, ಅದು ಶುದ್ಧವಾಗುವಂತೆಯೂ ಒಂದು ಘಟನೆ ಯನ್ನು ಸಿದ್ಧಪಡಿಸಿ ಕಾಂಗ್ರೆಸ್ಸಿಗೆ ಕೊಟ್ಟರು. ಅದೇ ಈಗಲೂ ನಡೆಯು ತ್ತಿರುವ ಘಟನೆಯು.

ಮಹಾತ್ಮರು ರಾಷ್ಟ್ರೀಯ ಪುನರ್ಘಟನೆಯ ವಿಧಾಯಕ ಕಾರ್ಯಕ್ರಮವನ್ನು ಕೈಕೊಂಡು ವರ್ಧಾದ ಬಳಿಯಲ್ಲಿರುವ ಶೇಗಾವಿ ಯಲ್ಲಿ ವಾಸಮಾಡುತ್ತಲಿರುವರು. ಅ. ಭಾ. ಗ್ರಾಮೋದ್ಯೋಗ ಸಂಘವು ಕಾಂಗ್ರೆಸ್ಸಿನ ಸ್ವತಂತ್ರ ಶಾಖೆಯಾಗಿ ಕಾರ್ಯಮಾಡುತ್ತಲಿದೆ. ಶಿಕ್ಷಣದ ಪ್ರಯೋಗಕ್ಕೆ ಪ್ರಾರಂಭವಾಗಿದೆ. ಮಹಾತ್ಮರು ಅಂತಃಕರಣಪೂರ್ವಕ ವಾಗಿ ಕಾಂಗ್ರೆಸ ರಾಜಕಾರಣದಿಂದ ನಿವೃತ್ತರಾಗಿದ್ದರೂ ರಾಷ್ಟ್ರವು ಮಾತ್ರ ಅವರನ್ನು ಬಿಟ್ಟಿಲ್ಲ. ಕಾಂಗ್ರೆಸ್ಸಿನ ಪ್ರತಿಯೊಂದು ಸೂತ್ರವು ವರ್ಧಾದಿಂದಲೇ ನಡೆಯುತ್ತಲಿದೆ. ಮಹಾತ್ಮರ ಜೀವನದೊಡನೆ ಭಾರತದ ಜೀವನವು ಸಮರಸವಾಗಿದೆ. ಅವರ ಧ್ಯೇಯ ಧೋರಣಗಳೇ ರಾಷ್ಟ್ರದ ಧ್ಯೇಯಧೋರಣಗಳಾಗಿವೆ. ಅವರ ಪ್ರತಿಯೊಂದು ಕ್ಷಣವೂ ಭಾರತದ ಪುನರ್ಘಟನೆಯಲ್ಲಿ ವ್ಯಯವಾಗುತ್ತಲಿದೆ. ಕಾಂಗ್ರೆಸ್ಸೆಂದರೆ ಮಹಾತ್ಮರು, ಮಹಾತ್ಮರೆಂದರೆ ಕಾಂಗ್ರೆಸ್ಸು. ಅಧಿಕಾರವನ್ನು ಬಿಟ್ಟ ಸರ್ವಾಧಿಕಾರಿ ಗಳಿವರು.

ಸರಕಾರದ ಕಾಯದೆಗಳಿಂದಲೇ ಸರಕಾರದ ಉಸಿರನ್ನು ಕಟ್ಟುವ ಆಟವನ್ನು ವರ್ಧಾದಲ್ಲಿಯೇ ಕುಳಿತು ಮಾಡತೊಡಗಿದ್ದಾರೆ. ಮಹಾತ್ಮ ರಲ್ಲಿ ಭಾರತದ ಅಚಲವಾದ ಶ್ರದ್ಧಾಭಕ್ತಿಗಳಿವೆ. ಕಾಂಗ್ರೆಸ್ಸಿನಲ್ಲಿದ್ದ ಗಾಂಧಿಯವರಕ್ಕಿಂತಲೂ ಕಾಂಗ್ರೆಸ್ಸಿನಿಂದ ದೂರ ನಿಂತ ಮಹಾತ್ಮರ ವರ್ಚಸ್ಸು ಕಾಂಗ್ರೆಸ್ಸಿನಲ್ಲಿ ಹೆಚ್ಚಾಗಿದೆ. ಇದೇ ಅವರ ವ್ಯಕ್ತಿತ್ವದ ಮಹತ್ವವು.

ಅವರ ಸಂಕಲ್ಪಗಳೇ ಇಂದು ಭಾರತೀಯ ಜೀವನವನ್ನು ಕಲಕು ಮಲಕು ಮಾಡುತ್ತಲಿವೆ. ಅವರ ಒಂದೇ ಒಂದು ಗರ್ಜನೆಯಿಂದ ಭಾರತದ ರಾಜಕಾರಣವು ಪಲ್ಲಟವಾಗುತ್ತಲಿದೆ. ಅವರ ಜೀವನವೇ ಜಗತ್ತಿಗೆ ಸ್ಫೂರ್ತಿದಾಯಕವೂ ಮಾರ್ಗದರ್ಶಿಯೂ ಆಗಿದೆ.

ಮಹಾತ್ಮರು ಏರಿಸಿದ ಸ್ವಾತಂತ್ರ್ಯ ಸಂಗ್ರಾಮದ ಧ್ವಜವು ಇನ್ನೂ ಇಳಿಸಲ್ಪಟ್ಟಿಲ್ಲ. ಅವರೇ ಇಂದಿಗೂ ಸೇನಾಪತಿಗಳಾಗಿದ್ದಾರೆ.



# ಮಹಾತ್ಮರ ಜೀವನದ ಗುಟ್ಟು

'You cannot say, this is he, or that is he. All you can say with certainty is that he is here, he is here. Every where his influence reigns, his authority rules, his elusive personality pervades. This must be so, for it is true of all great men that they are incalculable beyond definition.'

*H. Polak*

'ಗಾಂಧಿಯವರು ಇಂಥವರು ಅಥವಾ ಅಂಥವರೆಂದು ನೀವು ಹೇಳಲಾರಿರಿ ಅವರು ಇಲ್ಲಿದ್ದಾರೆ. ಇಲ್ಲಿಯೇ ಇದ್ದಾರೆಂದು ಮಾತ್ರ ನೀವು ನಿಶ್ಚಯವಾಗಿ ಹೇಳಬಹುದು. ಆದರೆ ಎಲ್ಲೆಲ್ಲಿಯೂ ಅವರ ಪ್ರಭಾವವು ಶಾಸನ ಮಾಡುತ್ತಿದೆ, ಅವರ ಅಧಿಕಾರವು ನಡೆಯುತ್ತಿದೆ, ಮತ್ತು ಅವರ ವ್ಯಕ್ತಿತ್ವವು ಎಲ್ಲೆಡೆಯೂ ಹರಡಿದೆ. ಸಾಮಾನ್ಯ ಜೀವನಕ್ಕಿಂತಲೂ ಮಹಾಪುರುಷರ ಜೀವನವು ಅಗಣ್ಯವಿರುವದೆಂಬುದು ಸತ್ಯಸಿದ್ಧಾಂತ.'

ಮಹಾತ್ಮರು ಇಂದು ಜಗತ್ತಿನಲ್ಲಿ ಒಂದು ಮಹಾನ್ ಶಕ್ತಿಯಾಗಿದ್ದಾರೆ. ಪೌರ್ವಾತ್ಯರು, ಪಾಶ್ಚಾತ್ಯರು, ಹಿಂದುಗಳು, ಮುಸಲ್ಮಾನರು, ಕ್ರಿಶ್ಚನ್ನರು, ಪಾರ್ಸಿಗಳು, ಧಾರ್ಮಿಕರು ಅಧಾರ್ಮಿಕರು, ಮಂಕರು ಪಂಡಿತರು, ಶತ್ರುಗಳು ಮಿತ್ರರು, ಆಳುವವರೂ ಆಳಿಸಿಕೊಳ್ಳುವವರೂ ಎಲ್ಲರೂ ಮಹಾತ್ಮರಿಗೆ ಮನ್ನಣೆಯನ್ನೀಯುತ್ತಾರೆ. ಯಾರು ಬುದ್ಧನೆನ್ನುತ್ತಾರೆ. ಯಾರು ಕ್ರಿಸ್ತನೆನ್ನುತ್ತಾರೆ. ಯಾರು ಬಸವೇಶ್ವರನೆನ್ನುತ್ತಾರೆ. ಯಾರು ಮಹಾವಿಭೂತಿಯೆನ್ನುತ್ತಾರೆ. ಯಾರು ಕ್ರಾಂತಿಕಾರಕನೆನ್ನುತ್ತಾರೆ. ಯಾರು ಕಲ್ಕಿಯ ಅವತಾರವೆನ್ನುತ್ತಾರೆ. ಆ ಮಹಾತ್ಮನಲ್ಲಿರುವ ಇಂಥ ಅಸಾಧಾರಣವಾದ ಶಕ್ತಿಯು ಅದಾವುದು?

ಅವರು ಭಾರತದಲ್ಲಿ ಒಂದು ಶಕ್ತಿಯನ್ನು ಊದಿಬಿಟ್ಟಿದ್ದಾರೆ. ಅದು ಭಾರತೀಯರ ವಿವಿಧ ಜೀವನದಲ್ಲಿ ಕ್ರಾಂತಿಯನ್ನುಂಟುಮಾಡಿ, ಎಲ್ಲರ ಜೀವನಕ್ಕೂ ದಿವ್ಯ ತೇಜಸ್ಸನ್ನು ಕೊಡುತ್ತಲಿದೆ. ಎಂದೂ ಮಹಾತ್ಮರ ಹೆಸರನ್ನು ಕೇಳದ, ನೋಡದ ಅಡವಿ ಅಡವಿ ತಿರುಗುವ ಸಿಕ್ಕಲಿಗರಿಂದ ಮೊದಲು ಮಾಡಿಕೊಂಡು, ದೊಡ್ಡ ದೊಡ್ಡ ತತ್ವಜ್ಞಾನಿಗಳವರೆಗಿನ

ಎಲ್ಲರೂ ತಮ್ಮ ತಮ್ಮ ರೀತಿಯಿಂದ ಅವರ ಕಡೆಗೆ ನೋಡುತ್ತ ಹಾಗೂ ತಮ್ಮಲ್ಲಿ ಎಷ್ಟೋ ಮತಭೇದಗಳಿದ್ದರೂ ಅವರಿಗೆ ತಲೆಬಾಗುತ್ತಾರೆ. ಇದರ ರಹಸ್ಯವೇನು?

ಪಾಶ್ಚಾತ್ಯ ಸಂಸ್ಕೃತಿಯು ಮಾನವನ ಶಕ್ತಿಗಳನ್ನೆಲ್ಲ ಸೂರೆಗೈದು, ಅವನನ್ನು ಪರಾಧೀನನನ್ನಾಗಿ ಮಾಡಿ, ಯಂತ್ರಗಳ ಗುಲಾಮನನ್ನಾಗಿ ಮಾಡಿ, ಮಾನವನಲ್ಲಿರುವ ನೈಸರ್ಗಿಕವಾದ ಆತ್ಮವಿಶ್ವಾಸ, ಶ್ರದ್ಧೆ, ಆತ್ಮ ದೃಷ್ಟಿಯನ್ನು ಹಾಳುಮಾಡಿ ಪಶುವನ್ನಾಗಿ ಮಾಡತೊಡಗಿದೆ. ಶಾಸ್ತ್ರೀಯ ಸುಧಾರಣೆಯ ಶಕ್ತಿಯಿಂದ ಬಲಹೀನರನ್ನು ಬಲಿಷ್ಠರು ನುಂಗಹತ್ತಿದ್ದಾರೆ. ಐಹಿಕ ಸುಖೋಪಭೋಗಕ್ಕಾಗಿ ಬಡವರನ್ನು ದೈವುಳ್ಳವರು ಹಿಂಡತೊಡಗಿದ್ದಾರೆ. ಅತ್ಯಂತ ಪ್ರಬಲವಾದ ರಾಷ್ಟ್ರಗಳು ಬಾಯಿಯಿಂದ ಶಾಂತಿ ಮಂತ್ರವನ್ನು ಹೇಳುತ್ತ ದುರ್ಬಲ ರಾಷ್ಟ್ರಗಳನ್ನು ಸ್ವಾಹಾಕರಿಸಹತ್ತಿವೆ. ಇಂದು ಯುರೋಪವು ಏನನ್ನು ಹೇಳುತ್ತಲಿದೆ? ಕೋಟ್ಯಾವಧಿ ಬಡವರು ಗುಲಾಮರಾಗಿದ್ದಾರೆ. ಅವರ ಕರುಳಿನ ಕೂಗು ಬಂಡನ್ನೆಬ್ಬಿಸುತ್ತಲಿದೆ. ಹೋದ ಮಹಾ ಯುದ್ಧವೂ ಮುಂದೆ ಬರಲಿರುವ ಮಹಾಯುದ್ಧವೂ ಹಿಟ್ಲರ ಮುಸಲೋನಿಗಳ ಹೂಂಕಾರವೂ ತೋಳತಿಂಡಿಯೂ ಏನನ್ನು ತೋರಿಸುತ್ತವೆ? ಜಗತ್ತನ್ನು ಪ್ರಳಯದ ಕಡೆಗೆ ಎಳೆಯುತ್ತಲಿದೆ. ಇಡೀ ಮಾನವ ಜನಾಂಗವೇ ಮುಂಗಾಣದಾಗಿ ಹಲಬುತ್ತಲಿದೆ. ಇಂಥ ಭಯಂಕರ ಅಂಧಕಾರದಲ್ಲಿ ಮಾನವ ಜನಾಂಗವು ಭಯಭೀತವಾಗಿ, ಆತ್ಮವಿಶ್ವಾಸವಿಲ್ಲದೆ, ದಿಕ್ಕೆಟ್ಟ ಸಮಯದಲ್ಲಿ, ಅಶಾಂತಿಯ ಸಾಗರದಲ್ಲಿ ನಿಂತು, ಆತ್ಮವಿಶ್ವಾಸದಿಂದ, ಆತ್ಮಿಕ ತೇಜದಿಂದ ಅಧಿಕಾರವಾಣಿಯಿಂದ ಜಗತ್ತಿಗೆ ಶಾಂತಿಮಂತ್ರವನ್ನು ಉಪದೇಶಿಸಿಸುವ ಈ ಮಹಾವಿಭೂತಿಯು ಜಗತ್ತಿನ ಮನವನ್ನೆಲ್ಲ ತನ್ನಕಡೆಗೆ ಆಕರ್ಷಿಸಿಕೊಂಡರೆ ಆಶ್ಚರ್ಯವೇನು?

ಬಡವರು ತಮ್ಮ ಭಾಗ್ಯದೇವತೆಯೆಂದು ಆತನಕಡೆಗೆ ನೋಡಹತ್ತಿದ್ದಾರೆ. ದೈವುಳ್ಳವರು ಆಳರಸರು ಅವರ ಶಕ್ತಿ ಸಾಮರ್ಥ್ಯಗಳನ್ನು ಕಂಡು ಆಶ್ಚರ್ಯಚಕಿತರಾಗಿದ್ದಾರೆ. ಇಷ್ಟು ಆತ್ಮವಿಶ್ವಾಸದಿಂದ ಜಗತ್ತಿನ

ಭವಿಷ್ಯವನ್ನು ಸಾರುವ ಈ ಮಹಾವಿಭೂತಿಯನ್ನು ಕಂಡು ಪಾಶ್ಚಾತ್ಯ ರಾಷ್ಟ್ರಗಳು ಎಲ್ಲಿಂದ ಬಂದರೆಂದು ದಿಗ್ಭ್ರಮೆಗೊಂಡಿವೆ. ಈ ಮಹಾತ್ಮರೆಂದರೆ ಆತ್ಮವಿಶ್ವಾಸದ ಮೂರ್ತಿ. ಮಾನವ ಜನಾಂಗದ ಶಾಂತಿದೂತ, ದುಃಖಿಗಳ ದುಃಖನಿವಾರಕ, ಅಂಧಕಾರದಿಂದ ಜಗತ್ತನ್ನು ಪ್ರಕಾಶದ ಕಡೆಗೆ ಒಯ್ಯುವ ಮಹಾವಿಭೂತಿ.

ಇಂಥ ಅದ್ಭುತ ಸಾಮರ್ಥ್ಯವು ಇವರಲ್ಲಿ ಹೇಗೆ ಬಂದಿತು ? ಅಸಹಕಾರದಿಂದಲೋ ? ಬ್ರಿಟಿಶರೊಡನೆ ಹೋರಾಡಿದ್ದರಿಂದಲೋ ? ಅಲ್ಲ. ಅವರ ದಿವ್ಯ ಜೀವನದಿಂದ, ಅದ್ಭುತವಾದ ಸಾಧನದಿಂದ, ಅಸಾಧಾರಣವಾದ ತಪಶ್ಚರ್ಯೆಯಿಂದ.

ಇಂಥ ಮಹಾವಿಭೂತಿಗಳ ಆಂತರಿಕ ಜೀವನವನ್ನು ಅರಿಯುವುದು ಬಹು ಕಠಿಣ. ಅವರಲ್ಲಿಯೂ ಅನೇಕ ಅದ್ಭುತ ಚಮತ್ಕಾರಗಳಿಂದ ತುಂಬಿದ ಮಹಾತ್ಮರನ್ನು ಅರಿತುಕೊಳ್ಳುವದು ಅದಕ್ಕಿಂತಲೂ ಕಠಿಣ. ಅವರ ಹೃದಯದ ಸಂಪೂರ್ಣವಾದ ದರ್ಶನವನ್ನು ನಮ್ಮಂಥ ಸಾಧಾರಣ ಜನರಿಗೆ ಆಗುವದು, ಅಶಕ್ಯವೆಂದು ನನ್ನ ತಿಳುವಳಿಕೆ.

ಮಹಾತ್ಮರ ಜೀವನವನ್ನು ನಿರೀಕ್ಷಿಸಹತ್ತಿದರೆ, ಒಂದೇ ಒಂದು ಮಾತು ಒಡೆದು ಕಾಣುವುದು. ಅವರು ಸಾಧಕರು. ಮೊದಲಿನಿಂದ ಕೊನೆಯವರೆಗೆ, ಸಾಧನದಿಂದ ಅವರ ಜೀವನವು ತುಂಬಿತುಳುಕುತ್ತಲಿದೆ. ಅವರೂ ನಮ್ಮಂತೆಯೇ ಉಣ್ಣುವರು, ತಿನ್ನುವರು, ಏಳುವರು, ನಿಜ. ಆದರೆ, ಅವರು ಬೀಳುವರು, ಏಳುವರು, ಮತ್ತೆ ಬೀಳುವರು ಮತ್ತೆ ಎದ್ದವರು ಮುಂದೆಯೇ ಸಾಗುವರು. ಅವರ ಇಂಥ ದಿವ್ಯ ಸಾಧನವು ಯಾವುದು ?

**ಸತ್ಯವು. ಸತ್ಯಸಾಕ್ಷಾತ್ಕಾರವೇ ಇವರ ಗುರಿಯು ಸತ್ಯರೂಪಿಯಾದ ಪರಮಾತ್ಮನ ದರ್ಶನವೇ ಇವರ ಇತಿಕರ್ತವ್ಯವು. ಅದಕ್ಕಾಗಿಯೇ ಹಲುಬುತ್ತಿದ್ದಾರೆ. ಅದಕ್ಕಾಗಿಯೇ ಹೋರಾಡುತ್ತಿದ್ದಾರೆ, ಅದಕ್ಕಾಗಿಯೇ ಉಸಿರಾಡಿಸುತ್ತಿದ್ದಾರೆ. ಅಹಿಂಸೆಯೇ ಆ ಸಾಕ್ಷಾತ್ಕಾರದ ಸಾಧನವು.**

**ಅಂತಃಕರಣವೇ ಅದರ ಒರೆಗಲ್ಲು; ಭಾರತಭೂಮಿಯೇ ಅವರ ಪ್ರಯೋಗಶಾಲೆಯು.**

ಅವರ ಪ್ರತಿಯೊಂದು ಹೆಜ್ಜೆಯು ಸತ್ಯಕ್ಕಾಗಿಯೇ ಬೀಳುತ್ತಲಿದೆ. ಆದ್ದರಿಂದಲೇ ಅಸತ್ಯ ಜೀವನದಿಂದ ತುಂಬಿದ ಈ ಜಗತ್ತಿನಲ್ಲಿ ಮುಂದಡಿ ಇಡಬೇಕಾದರೆ, ಪ್ರತಿ ಕ್ಷಣಕ್ಕೂ ಅವರಿಗೆ ಹೋರಾಡಬೇಕಾಗುತ್ತದೆ. ಮಹಾತ್ಮರ ಈ ಸತ್ಯದ ಹೋರಾಟವೇ ಜಗತ್ತಿನ ಇಂದಿನ ಸಮಸ್ಯೆಗಳ ಮೇಲೆ, ಬೆಳಕನ್ನು ಕೆಡವುತ್ತಲಿದೆ. ಅವರ ಸತ್ಯದ ಹೋರಾಟವೇ ಅವರನ್ನು ರಾಜಕಾರಣಕ್ಕೆ ಎಳೆದಿದೆಯೇ ಹೊರತು ಅವರು ರಾಜಕಾರಣಿಗಳೆಂದು ರಾಜಕೀಯ ರಂಗದಲ್ಲಿ ಕಾಲಿಟ್ಟಿಲ್ಲ. **ಅವರು ರಾಜಕೀಯ ಮುಖಂಡರಲ್ಲ; ಸತ್ಯದ ಶೋಧಕರು.** ಸತ್ಯಶೋಧನೆಯಲ್ಲಿಯ ಒಂದು ಅಂಗವು ರಾಜಕಾರಣವು.

ತಮ್ಮ ಜೀವನದ ಸಾಧನಭೂಮಿಯಾದ–ಕರ್ಮಭೂಮಿಯಾದ ಭಾರತದ ಇಂದಿನ ಜೀವನವು ಅಸತ್ಯ, ಅಧರ್ಮ, ಅನೀತಿಯಿಂದ ತುಂಬಿದೆ. ಅದನ್ನು ತಮ್ಮ ಜೀವನಕ್ಕೆ ಯೋಗ್ಯವಾದ ಭೂಮಿಯನ್ನು ಮಾಡಿಕೊಳ್ಳುವದೆಂದರೇ ಅದರ ಜೀವನವನ್ನೂ ಸತ್ಯಮಯವಾಗಿ ಮಾಡಬೇಕೆಂದೇ ಅರ್ಥ. ಅದಕ್ಕಾಗಿಯೇ ಇಂದು ಭಾರತೀಯ ವಿಶಾಲ ಜನಸಮೂಹದಲ್ಲಿ ತಮ್ಮ ತತ್ವಗಳನ್ನು ತರಲು ಯತ್ನಿಸುತ್ತಿದ್ದಾರೆ. ಜಗತ್ತಿನ ಅಶಾಂತಿಗೆ ಸತ್ಯಧರ್ಮದ–ಜೀವನದ ಅಭಾವವೇ ಕಾರಣವು. ಆದ್ದರಿಂದ ತಮ್ಮ ಪ್ರಯೋಗಶಾಲೆಯಾದ ಭಾರತದಲ್ಲಿ ಸತ್ಯಜೀವನವನ್ನುಂಟುಮಾಡಿ, ಜಗತ್ತಿಗೆ ತಮ್ಮ ರಸಾಯನವನ್ನು ಕೊಡಲು ಹೊರಟಿದ್ದಾರೆ.

ಯಾವುದು ಆತ್ಮನನ್ನು (ಸತ್ಯವನ್ನು) ಮೂರ್ಛಿತಗೊಳಿಸುವದೋ ಅಂತಃಕರಣದ ಒಳಕೂಗನ್ನು ಮೇಲಕ್ಕೇಳಗೊಡದೆ ಕೆಳಗೆ ದಬ್ಬುವದೋ ಅಂಥ ಅಸತ್ಯವಾದ ಪ್ರತಿಯೊಂದನ್ನೂ ಸತ್ಯಜೀವಿಯು–ಶೋಧಕನು, ವಿರೋಧಿಸಲೇಬೇಕು. ಅದನ್ನು ನಾಶಪಡಿಸಬೇಕು. ಪಾಶ್ಚಾತ್ಯ ಸಂಸ್ಕೃತಿಯ ವಿರೋಧಕರು ಮಹಾತ್ಮರು ಏಕಿರುವರೆಂಬುದರ ಗುಟ್ಟೂ, ಮಹಾತ್ಮರ ಹೋರಾಟದ ಗುಟ್ಟೂ ಇದರಲ್ಲಿಯೇ ಇದೆ.

ಪಾಶ್ಚಾತ್ಯ ಸಂಸ್ಕೃತಿಯು, ಮಾನವಜೀವನದಲ್ಲಿ ಕೃತ್ರಿಮತನವನ್ನು ತರುತ್ತಲಿದೆ. ಸ್ವಾರ್ಥವನ್ನು ಹೆಚ್ಚಿಸುತ್ತಲಿದೆ. ಸ್ಪರ್ಧೆಗೆ ಹುರುಪು ಕೊಡುತ್ತದೆ. ಮತ್ತು ಎರಡನೆಯವರ ಅಂತಃಕರಣವನ್ನು ಶೂನ್ಯ-ಶಕ್ತಿಹೀನ, ಮೃತಪ್ರಾಯವಾಗಿ ಮಾಡುತ್ತದೆ. ಇದು ಅಸತ್ಯ-ಹಾಗು ಅಧರ್ಮವಿದೆ. ಆದ್ದರಿಂದಲೇ ಸತ್ಯಸಾಧಕರಾದ ಮಹಾತ್ಮರು ಇದನ್ನು ವಿರೋಧಿಸುತ್ತಿರುವರು. ಬ್ರಿಟಿಶ ಸಾಮ್ರಾಜ್ಯದ ಕೂಡ ಬಂಡು ಹೂಡಿದ್ದರ ಕಾರಣವೂ ಇದೇ ಇದೆ. ಭಾರತವನ್ನು ಸುಲಿದು ಹಾಳುಮಾಡುವವರ ಸಿದ್ಧಾಂತಕ್ಕಾಗಿಯೇ! ಈ ಆಸುರಿ ಸಿದ್ಧಾಂತಗಳನ್ನು ಜೀವನದಲ್ಲಿ ತರುವವರು, ತಂದವರು, ಪಾಶ್ಚಾತ್ಯರೇ ಇರಲಿ, ಪೌರ್ವಾತ್ಯರೇ ಇರಲಿ, ಭಾರತೀಯರೇ ಇರಲಿ, ಪರಕೀಯರೇ ಇರಲಿ, ಅವರ ಸಂಗಡ ಹೋರಾಡುವದು, ಸತ್ಯಶೋಧಕರ ಕರ್ತವ್ಯವಾಗಿದೆ, ಧರ್ಮವಾಗಿದೆ.

ಆದ್ದರಿಂದಲೇ ಮಹಾತ್ಮರು ಯಾವ ವ್ಯಕ್ತಿಯನ್ನಾಗಲೀ ಜನಾಂಗವನ್ನಾಗಲೀ ನಿಯಮಗಳನ್ನಾಗಲೀ ದ್ವೇಷಿಸುವದಿಲ್ಲ. ಅವರ ಹೋರಾಟವು ಆಸುರೀ ಸಿದ್ಧಾಂತಗಳೊಡನೆ. ಯಾವುದೇ ನಿಯಮವಾಗಲಿ, ಯಾವುದೇ ಕಟ್ಟಳೆಯಾಗಲಿ, ಯಾವುದೇ ಸಮಾಜವ್ಯವಸ್ಥೆ, ಯಾವದೇ ಜನಾಂಗ ಸತ್ಯದಿಂದ ಅಧಿಷ್ಠಿತವಾಗಿ, ಆತ್ಮಿಕಶಕ್ತಿಯನ್ನು ಹೆಚ್ಚಿಸುವದೋ ಅಂತಃಕರಣಕ್ಕೆ ಶಕ್ತಿಯನ್ನೀಯುವದೋ ಅದನ್ನು ಎತ್ತಿಹಿಡಿಯುವರು; ಸಮರ್ಥಿಸುವರು; ಅದಕ್ಕಾಗಿ ಹೋರಾಡುವರು. ಯಾವುದು ಆತ್ಮಶಕ್ತಿಯನ್ನು ಕುಂದಿಸುವದೋ, ಯಾವುದು ಅಂತಃಕರಣವನ್ನು ಹತ್ತಿಕ್ಕಿ, ಶರೀರಸುಖದ, ವಾಸನೆಗಳ ಬಲಿಯಲ್ಲಿ ನೂಕಿ ಮನುಷ್ಯನನ್ನು ಗುಲಾಮನನ್ನಾಗಿ ಮಾಡುವದೋ ಅಂಥದನ್ನು ವಿರೋಧಿಸುವರು; ಅದರೊಡನೆ ಹೋರಾಡುವರು.

ಮಹಾತ್ಮರ ಜೀವನವು ಸಾಧನಮಯವಾಗಿದೆ ಎಂದು ಸ್ಪಷ್ಟವಾಗಿಯೇ ಕಾಣುತ್ತದೆ. ಅವರು ದೊಡ್ಡ ಸಾಧಕರು. ರಾಜಕಾರಣವಾಗಲೀ ಸಮಾಜಸುಧಾರಣೆಯಾಗಲಿ, ಧಾರ್ಮಿಕಜೀವನವಾಗಲಿ, ಅವರ ಸಾಧನದ ಅಂಗಗಳಾಗಿವೆ. **ಪ್ರತಿಯೊಂದು ಕ್ಷೇತ್ರದಲ್ಲಿ ಸತ್ಯದ**

ಶೋಧದ ಪ್ರಯತ್ನವು ಅವಿಚ್ಛಿನ್ನವಾಗಿ ನಡೆದಿದೆ. ಹೋರಾಟ, ಪ್ರಯತ್ನ, ಸಾಹಸಗಳಿಂದ ಅವರ ಜೀವನವು ತುಂಬಿತುಳುಕುತ್ತಿದೆ. ಅವರ ಜೀವನದಲ್ಲಿ ನಿರಾಶೆಯನ್ನೂ ಆಲಸ್ಯವನ್ನೂ ಅಕರ್ಮಣ್ಯತ್ವವನ್ನೂ ಎಂದೂ ನೋಡಲಾರೆವು. ಹೊರಗಿರಲಿ ಜೇಲಿನಲ್ಲಿರಲಿ, ಬೇನೆಯಲ್ಲಿರಲಿ ಸುಖದಲ್ಲಿರಲಿ, ಅವರ ಜೀವನದ ಸಾಧನವು ವಾಯುವಿನ ಅವಿಚ್ಛಿನ್ನ ಪ್ರವಾಹದಂತೆ ಸತತವಾಗಿ ಹರಿಯುತ್ತಲಿದೆ.

ಆತ್ಮಸಾಕ್ಷಾತ್ಕಾರವೇ ಇವರ ಸಾಧನವು. ಸತ್ಯವೇ ಇವರ ಪರಮಾತ್ಮನು. ಅದನ್ನೇ ಸಾಕ್ಷಾತ್ಕರಿಸಿಕೊಳ್ಳಲು ಯತ್ನಿಸುತ್ತಿದ್ದಾರೆ. ಸಾಧನಗೆಯ್ಯುತ್ತಿದ್ದಾರೆ. ಅಂತಃಕರಣದ ಕೂಗನ್ನೇ ಸತ್ಯದ ಸಾಧನದ ಒರೆಗಲ್ಲನ್ನು ಮಾಡಿಕೊಂಡಿದ್ದಾರೆ. ಸತ್ಯಸಾಕ್ಷಾತ್ಕಾರಕ್ಕೆ ಅಹಿಂಸೆಯೇ ಇವರ ಸಾಧನವು.

ಸತ್ಯದ ಸಾಧನೆಗಾಗಿ, ಅದರ ಪ್ರಯೋಗಕ್ಕಾಗಿ, ಅಹಿಂಸೆಯ ಶಸ್ತ್ರವನ್ನು ಹಿಡಿದುಕೊಂಡು ಹೊರಟಿದ್ದಾರೆ. ಅದೇ ಅವರಿಗೆ ಪರಮ ಧರ್ಮವಾಗಿದೆ. ಚರಾಚರ ಸೃಷ್ಟಿಯೆಲ್ಲವು ಆ ಪರಮಾತ್ಮನಿಂದ ತುಂಬಿವೆ, ಎಲ್ಲವು ಪವಿತ್ರವಿವೆ. ಎಂಬ ಭಾವನೆಯ ಮೇಲೆಯೇ ತಮ್ಮ ಸಿದ್ಧಾಂತವನ್ನು ನಿಲ್ಲಿಸಿದ್ದಾರೆ. ಈ ಪವಿತ್ರಭಾವನೆಯಿಂದಲೇ ಸರ್ವಾಂತರ್ಯಾಮಿಯಾದ ಪರಮಾತ್ಮನ ದರ್ಶನವನ್ನು ತೆಗೆದುಕೊಳ್ಳಲು ಸಾಧ್ಯವೆಂದು ಅವರ ಮತ. ಈ ದೃಷ್ಟಿಯಿಂದ ಅವರಿಗೆ ಅಹಿಂಸೆಯು ಸಾಕ್ಷಾತ್ಕಾರದ ಪರಮಸಾಧನವಾಗಿದೆ. ಅಹಿಂಸೆಯಿಂದ ಶಕ್ತಿಯ ನಾಶವಾಗದೆ, ಆತ್ಮಿಕ ಶಕ್ತಿಯನ್ನು ಜಾಗೃತಗೊಳಿಸುವ ಭಾವನೆಗೆ ಉತ್ತೇಜನ ದೊರೆಯುವದು. ಇದರಿಂದ ನಾವು ಜಗತ್ತನ್ನೇ ಮಿತ್ರರಾಗಿ ಮಾಡಿಕೊಳ್ಳಲಿಕ್ಕೆ ಅನುಕೂಲವಾಗುವುದು. ಈಶ್ವರನ ಸತ್ಯದ ಮಹಿಮೆಯ ಅನುಭವವು ಬರುವದು. ನಾವು ಸಂಕಟಗಳಿಗೆ ಗುರಿಯಾದರೂ ನಮ್ಮ ಸುಖಶಾಂತಿಗಳು ಹೆಚ್ಚುವವು. ನಮ್ಮ ಸಾಹಸಧೈರ್ಯಗಳು ಹೆಚ್ಚುವವು. ವಿನಯವು ಬೆಳೆಯುವದು. ಅಭಿಮಾನವು ಅಳಿಯುವದು. ಪರಿಗ್ರಹವು ತನ್ನಷ್ಟಕ್ಕೆ ತಾನೇ ಕಡಿಮೆಯಾಗುವದು. ದೇಹದಲ್ಲಿ ತುಂಬಿದ ಹೊಲಸು ಕಡಿಮೆಯಾಗುತ್ತ-

ಸತ್ಯದ ಸಾಕ್ಷಾತ್ಕಾರದ ಕಡೆಗೆ–ನಮ್ಮನ್ನು ಒಯ್ಯುವದು. ಆದ್ದರಿಂದ ಸತ್ಯಶೋಧಕನಿಗೆ ಅಹಿಂಸೆಯಂಥ ಸುಲಭವಾದ ಮತ್ತೊಂದು ಸಾಧನ ವಿಲ್ಲೆಂಬುದೇ ಗಾಂಧಿಯವರ ಮುಖ್ಯ ಸಿದ್ಧಾಂತ.

ಈ ಸಿದ್ಧಾಂತವೇ ಈ ಜಗತ್ತಿನಲ್ಲಿ ಕ್ರಾಂತಿಯನ್ನುಂಟುಮಾಡಿದೆ. 'ಶಾಠ್ಯಂ ಸದಾ ದುರ್ಜನೇ' ಎಂಬ ಸಿದ್ಧಾಂತವನ್ನು ಮಹಾತ್ಮರು ಒಪ್ಪುವದಿಲ್ಲ. 'ಶಠಂ, ಪ್ರತ್ಯಪಿ ಸತ್ಯಂ.' ಎಂದೇ ಇವರು ಪ್ರತಿಪಾದಿಸು ವರು. ಇದರಲ್ಲಿಯೇ ಜೀವನದ ಗುಟ್ಟಿದೆ. 'ಶಠಂ ಪ್ರತಿ ಶಾಠ್ಯಂ' ಎಂಬ ನೈತಿಕ ಸಿದ್ಧಾಂತವನ್ನು ಉರುಳಿಸಿ ಸಾಮಾಜಿಕ ಜೀವನದಲ್ಲಿ ಕ್ರಾಂತಿ ಯನ್ನುಂಟು ಮಾಡಿದ್ದಾರೆ. ಗೀತೆಯ ಸಂದೇಶವೂ ಇದೇ ಎಂದು ಸಾರು ತ್ತಿದ್ದಾರೆ. **ಅಹಿಂಸಾ ಪರಮೋಧರ್ಮಃ** ಎಂಬ ಸಿದ್ಧಾಂತದ ಸತ್ಯತೆ ಯನ್ನು ತಮ್ಮ ಆಚರಣೆಯಿಂದ ಸಿದ್ಧಮಾಡಿ ತೋರಿಸಿ, ಜಗತ್ತಿಗೇ ಇದನ್ನು ಉಪದೇಶಿಸಿ, ಶಾಂತಿಯನ್ನು ಸ್ಥಾಪಿಸಲು ಹೆಣಗುತ್ತಿದ್ದಾರೆ.

ಇವರ ಅಹಿಂಸೆಯ ವ್ಯಾಪ್ತಿಯು ವಿಸ್ತಾರವಾಗಿ, ಜಗತ್ತನ್ನೇ ವ್ಯಾಪಿಸಿದೆ. ನಮಗೆ ಸ್ಥೂಲವಾಗಿ ಕಾಣಿಸುವ ಅಹಿಂಸೆಯಷ್ಟೇ ಅಹಿಂಸೆ ಯಲ್ಲ. ಕೊಲ್ಲಬಾರದೆಂಬುದಂತೂ ಸರಿಯೇ. ಕುವಿಚಾರಗಳೆಲ್ಲವೂ ಹಿಂಸೆಯು, ಅವಸರವು ಹಿಂಸೆಯು, ಮಿಥ್ಯಾಭಾಷಣವು ಹಿಂಸೆಯು, ದ್ವೇಷವು ಹಿಂಸೆಯು, ಯಾರಿಗಾದರೂ ಕೇಡುಬಗೆಯುವದು ಹಿಂಸೆಯು, ಹೆಚ್ಚಿಗೆ ಉಣ್ಣುವದು ಹಿಂಸೆಯು, ಜಗತ್ತಿಗೆ ಬೇಕಾದುದನ್ನು ಸಂಗ್ರಹಿ ಸುವದು ಹಿಂಸೆಯು. ಈ ಎಲ್ಲ ಹಿಂಸೆಗಳಿಂದ ಪರಾವೃತ್ತರಾಗಲೇ ಬೇಕೆಂಬುದೇ ಅವರ ಮತ. ಇದರಲ್ಲಿಯೇ ಮಹಾತ್ಮರ ಶಕ್ತಿಯು. **ಅವರ ಅಹಿಂಸೆಯ ಶುದ್ಧ ಆಚರಣೆಯೇ ಜಗತ್ತಿನಲ್ಲಿಯ ಅಸ ಮತೆಯನ್ನು ನಾಶಮಾಡಿ ಶಾಂತಿಯನ್ನು ನೆಲೆಗೊಳಿಸುವದು,** ಸತ್ಯಸಾಕ್ಷಾತ್ಕಾರವನ್ನು ಮಾಡಿಕೊಡುವದು. ಸತ್ಯ ಮತ್ತು ಅಹಿಂಸೆಗಳ ದಾಂಪತ್ಯವೇ ಮಾನವನಲ್ಲಿ ದಿವ್ಯಶಕ್ತಿಯನ್ನುಂಟು ಮಾಡುವದೆಂತಲೂ ಅದರಿಂದ ಮಾನವನು ನಿರ್ಭಯನಾಗಿ ಸಾಕ್ಷಾತ್ಕಾರವನ್ನು ಪಡೆಯುವ ನೆಂತಲೂ ಅವರ ಸಿದ್ಧಾಂತ. ಇದರಲ್ಲಿಯೇ ಅವರ ಜೀವನದಗುಟ್ಟು ಇದೆ.

ಇಂದು ಗಾಂಧಿಯವರು ತಮ್ಮ ಸಿದ್ಧಾಂತಗಳ ಪ್ರಯೋಗವನ್ನು ಭಾರತದ ವಿಶಾಲ ಜೀವನದಲ್ಲಿ ನಡೆಯಿಸಿದ್ದಾರೆ. ಜಗತ್ತಿನ ಮಧ್ಯರಂಗ ದಲ್ಲಿ ರಾಜಕೀಯ ರಣಾಂಗಣದಲ್ಲಿ ನಿಂತು, ತಮ್ಮ ಸಿದ್ಧಾಂತಗಳನ್ನು ಸ್ವೀಕರಿಸಿದರೆ ಜಗತ್ತಿಗೆ ಶಾಂತಿ ದೊರೆಯುವದು ಎಂದು ಸಾರುತ್ತ ಲಿದ್ದಾರೆ. **ಅಹಿಂಸೆಯು, ಅಪ್ರತೀಕಾರವು, ವಿಶ್ವದ ರಾಜಕಾರ ಣಕ್ಕೆ ಅರ್ಪಿಸಿದ ಮಹಾತ್ಮರ ದಿವ್ಯ ಕಾಣಿಕೆ.**

ಮಹಾತ್ಮರು ಅಂತಃಕರಣದ ಕೂಗನ್ನೇ ತಮ್ಮ ಒರೆಗಲ್ಲನ್ನಾಗಿ ಮಾಡಿಕೊಂಡಿದ್ದಾರೆ. ಅದರ ಮುಂದೆ ಯಾರ ಮಾತೂ ನಡೆಯುವದಿಲ್ಲ. ಅದನ್ನು ಪ್ರತಿಬಂಧಿಸುವ ಯಾವ ಶಕ್ತಿಯೂ ಇಲ್ಲ. ಎಲ್ಲರಿಗೂ ಮಹಾ ತ್ಮರ ದಿವ್ಯ ಉಪದೇಶವೆಂದರೆ, **'ಅಂತರಾತ್ಮನ ಅಪ್ಪಣೆಯನ್ನು ಪಾಲಿಸಿರಿ'** ಎಂದು. ಈ ಅವರ ಗುಟ್ಟನ್ನು ಅರಿತರೆ ಅವರ ಜೀವನದ ಪರಸ್ಪರ ತಾಕಲಾಟಗಳ ಮೇಲೆ ಒಳ್ಳೇ ಬೆಳಕು ಬೀಳುವುದು. ಜನರ ಹೊಗಳಿಕೆ ಬೊಗಳಿಕೆ, ಸಮ್ಮತಿ ಅಸಮ್ಮತಿ, ಪ್ರೀತಿ ಅಪ್ರೀತಿ, ಸರಕಾರದ ಕೃಪೆ ಅವಕೃಪೆ ಇವುಗಳಾವುಗಳಿಗೂ ಅವರಲ್ಲಿ ಸ್ಥಾನವಿಲ್ಲ. ಸರ್ವತಂತ್ರ ಸ್ವತಂತ್ರವಾದ ಅಂತರಾತ್ಮನ ಪ್ರೇರಣೆಯೊಂದೇ ಅವರಿಗೆ. ಜನರು ವಿರೋಧಿಸಿದರು, ಮುಖಂಡರು ಮುನಿದರು, ಸಂಗಡಿಗರು ಸಂತಾಪ ಗೊಂಡರು, ರಾಷ್ಟ್ರದ ಘಾತವಾಗುವದೆಂದರು. ಆದರೆ ಮಹಾತ್ಮರು ಯಾರ ಮಾತಿಗೂ ಕಿವಿಗೊಡದೆ ಅಂತರಾತ್ಮನ ಕೂಗಿಗೆ ಕಿವಿಗೊಟ್ಟು ಚೌರಾಚೌರಿಯ ನಂತರ ಬಾರಡೋಲಿಯ ಸತ್ಯಾಗ್ರಹವನ್ನು ನಿಲ್ಲಿಸಿಯೇ ಬಿಟ್ಟರು. ಆ ಅಂತರಾತ್ಮನ ಪ್ರೇರಣೆಯಿಂದಲೇ ಇಂದು ರಾಜಕೀಯ ರಂಗದಲ್ಲಿ ಹರಿಜನ ಸೇವೆಯು ಬಂದಿದೆ.

ಮಹಾತ್ಮರು ತಮ್ಮ ಸಾಧ್ಯಸಾಧನ, ಒರೆಗಲ್ಲುಗಳ ಮೂಲಕವೆ ರಾಜಕಾರಣದಲ್ಲಿ ರಾಜಕಾರಣಿಗಳೆಂದು ಪ್ರಖ್ಯಾತರಿರದೆ, **ರಾಜಕಾರಣ ತತ್ವವೇತ್ತರೆಂದು** ಹೆಸರಾಗಿದ್ದಾರೆ. ರಾಜಕಾರಣಿಯು ಜನತೆಯ ಸಂಘಟನೆಗೆ ಹೆಚ್ಚು ಲಕ್ಷ್ಯಕೊಡುತ್ತಾನೆ. ತತ್ವವೇತ್ತನು ತನ್ನ ಜೀವನದ ಸಿದ್ಧಾಂತಗಳನ್ನು ತನ್ನ ಆಚರಣೆಯಿಂದ ರಾಷ್ಟ್ರೀಯ ಶಕ್ತಿಯನ್ನು

ಜಾಗೃತಗೊಳಿಸಲು ಯತ್ನಿಸುತ್ತಾನೆ. ತತ್ವವೇತ್ತನ ಕಾರ್ಯವು ರಾಜಕಾರಣಿಗಿಂತಲೂ ಹೆಚ್ಚಿನದಿರುತ್ತದೆ. ರಾಜಕಾರಣಿಯು ಶಾಸನಗಳ ಪರಿವರ್ತನದ ಉದ್ದೇಶದಿಂದ ಹೊರಡುತ್ತಾನೆ. ತತ್ವಜ್ಞಾನಿಯು ರಾಷ್ಟ್ರದ ಸಮಾಜದ ಜೀವನದಲ್ಲಿಯೇ ಪರಿವರ್ತನೆಯಾಗಿ ಸಿದ್ಧಾಂತಗಳ ಆಚರಣೆಗಾಗಿ ಪ್ರಯತ್ನಿಸುತ್ತಾನೆ.

ಈ ದೃಷ್ಟಿಯಿಂದ ಮಹಾತ್ಮರು ಜಗತ್ತಿನ ಪ್ರತಿಯೊಂದು ಕ್ಷೇತ್ರದಲ್ಲಿ ನಡೆದ ಆತ್ಮನನ್ನು ಹತ್ತಿಕ್ಕುವ ಪ್ರಯತ್ನದ ವಿರುದ್ಧವಾಗಿಯೇ ಅವಿಚ್ಛಿನ್ನವಾದ ನೈತಿಕ ಬಂಡೆನ್ನೆಬ್ಬಿಸಿದ್ದಾರೆ. ಯಾವ ಕಟ್ಟಳೆಯು ಮಾನವನ ವಿಕಾಸಕ್ಕೆ ಅವಕಾಶವನ್ನುಂಟುಮಾಡಿಕೊಡುವದಿಲ್ಲವೋ ಇಷ್ಟೇ ಅಲ್ಲ ಅದಕ್ಕೆ ತಡೆಯನ್ನುಂಟುಮಾಡುವದೋ ಅಂಥಕಾಯಿದೆಯನ್ನು ಮನ್ನಿಸುವದು ಪಾಪವಿದೆ. ಯಾವ ಧರ್ಮವು ವಿವೇಕಕ್ಕೆ ಅವಕಾಶಕೊಡುವದಿಲ್ಲವೋ ವ್ಯಕ್ತಿಯು, ಸಮಾಜದ,—ಮತ್ತು ಆತ್ಮದ ನೈತಿಕ ಉನ್ನತಿಗೆ ತಡೆಯನ್ನುಂಟುಮಾಡುವದೋ ಅಂತಹ ಧರ್ಮವು ತ್ಯಾಜ್ಯವು. ಇಂತಹ ನೈತಿಕ ಅತ್ಯಾಚಾರಗಳನ್ನು ಸಹನ ಮಾಡದಿರುವದು ಸತ್ಯ ಶೋಧಕನ ಕರ್ತವ್ಯವಾಗುವದು. ಈ ಕರ್ತವ್ಯದಲ್ಲಿ ಎಷ್ಟೋ ಎಡರುಗಳು ಬಂದರೂ ಕಷ್ಟವು ಕೊಡಲ್ಪಟ್ಟರೂ ಅದನ್ನು ಸಹನ ಮಾಡುವದು ಸತ್ಯಾಗ್ರಹಿಯ ಧರ್ಮವಾಗಿದೆ. ನಾವು ಪ್ರೇಮದಿಂದ ಜಗತ್ತನ್ನು ಬದಲಿಸಲು ಇಚ್ಛಿಸುತ್ತಿದ್ದರೆ, ಸಮಾಜದಿಂದ ಆಗುವ ಕಷ್ಟನಷ್ಟ, ಮಾನ ಅಪಮಾನ, ಬಹಿಷ್ಕಾರಗಳಿಗೆ ನಾವು ಸಿದ್ಧರಾಗಲೇಬೇಕು. ಇದರಿಂದಲೆ ಶುಭಪರಿಣಾಮವು ಉಂಟಾಗುವದು. ಯಾಕಂದರೆ, ತಮ್ಮ ಅನ್ಯಾಯವು ತಮಗೆ ತಿಳಿದು, ತಮ್ಮ ಕಾರ್ಯಗಳಲ್ಲಿಯೇ ತಪ್ಪಿರುವದೆಂದು ಅವರಿಗೆ ಹೊಳೆಯುವದು. ಮಹಾತ್ಮರು ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವದೆಂದರೆ, ಆ ಸಮಾಜದ ವ್ಯವಸ್ಥೆಯನ್ನು ಟೀಕಿಸಿದಂತೆಯೇ. ಯಾವ ಸಮಾಜದಲ್ಲಿ **ಡಾಯರನಂಥ ರಾಕ್ಷಸನಿಗೆ** ಸನ್ಮಾನವಾಗಿ, ಮಹಾತ್ಮರಂಥ ಸತ್ಪುರುಷರಿಗೆ ೬ ವರ್ಷದ ಕಠಿಣ ಶಿಕ್ಷೆಯು ವಿಧಿಸ

ಲ್ಪಟ್ಟು, ಸತ್ಯವನ್ನು ತಲೆ ಎತ್ತದಂತೆ ಮಾಡುವದೋ ಅವರ ಬುಡಕ್ಕೇ ಏನಾದರೂ ದೋಷವು ಇರಲೇಬೇಕು.

ಹೀಗೆ ಅಂತಃಕರಣವನ್ನೂ ಆತ್ಮನನ್ನೂ ಹತ್ತಿಕ್ಕುವ ಮತ್ತು ಆ ಶಕ್ತಿಗಳ ಅವಹೇಲನವನ್ನು ಮಾಡುವ ಶಕ್ತಿಗಳೊಂದಿಗೆ, ಪ್ರತಿಕ್ಷಣದಲ್ಲಿಯೂ ತಮ್ಮ ಸತ್ಯಮಯಜೀವನದಿಂದಲೂ ಸ್ವಯಂಕಷ್ಟಸಹನೆಯಿಂದಲೂ ಅಜೇಯರಾಗಿ ಹೋರಾಡುತ್ತಲಿದ್ದಾರೆ. ಶರೀರಬಲದಿಂದಲೂ ಶಶ್ತ್ರಾಸ್ತ್ರಗಳ ಸಾಮರ್ಥ್ಯದಿಂದಲೂ ಬಲಿಷ್ಠವಾದ ರಾಷ್ಟ್ರದೊಡನೆ, ರಾಷ್ಟ್ರದ ಆತ್ಮಿಕಶಕ್ತಿಯನ್ನು ಜಾಗೃತ ಮಾಡಿ ಅದರ ಮುಖಾಂತರ ಹೋರಾಡುತ್ತಲಿದ್ದಾರೆ. ಈ ಸಮಯದಲ್ಲಿ ನಡೆದ ಈ ಅದ್ಭುತಯುದ್ಧವು ಜಗತ್ತಿನ ಇತಿಹಾಸದಲ್ಲಿಯೇ ಇದರ ಹೊರ್ತು ಬೇರೆ ಉದಾಹರಣೆಯು ದೊರೆಯುವದಿಲ್ಲ. ಈ ಯುದ್ಧದಿಂದ ಜಗತ್ತಿಗೆ-ಯುದ್ಧದ ಭಯಭೀತವಾದ ಜನಾಂಗಕ್ಕೆ, ಒಂದೇ ಒಂದು ಆಶಾಕಿರಣವು ಕಾಣುತ್ತದೆ. ಬೆಳಕನ್ನು ನೀಡುತ್ತದೆ.

ಯಾರ ದೇಹವು ಅತ್ಯಂತ ಕೃಶವಾಗಿ ಗಾಳಿಗೆ ಕೂಡ ಹಾರಿ ಹೋಗುವಂತೆ ಆಗಿದೆಯೋ ಯಾರ ದೇಹವು ಅಖಂಡವಾಗಿ ಆಯುಷ್ಯವೆಲ್ಲ ಯುದ್ಧಮಾಡಿ ಜರ್ಜರಿತವಾಗಿದೆಯೋ ಯಾರ ಪ್ರೇಮದಿಂದ ಹಾವುಗಳು ಕೂಡ ನಿರ್ಭಯದಿಂದ ಆಶ್ರಮದಲ್ಲಿ ವಿಹರಿಸುವವೋ ಅಂಥ ಮಹಾತ್ಮರು ಒಂದು ಬೆರಳನ್ನೆತ್ತಿದ ಕೂಡಲೆ ಇಂಥ ಬಲಿಷ್ಠವಾದ ಬ್ರಿಟಿಶ ಸಾಮ್ರಾಜ್ಯವು ನಡುಗುವದೇಕೆ? ಭಾರತದ ಮೂಲೆ ಮೂಲೆಗಳಲ್ಲಿ ಕೂಡ ಚೈತನ್ಯವು ತುಂಬುವದೇಕೆ? ಇದರಲ್ಲೇನು ಮಂತ್ರವಿದೆ?

ಮಹಾತ್ಮರು ಇಂದು ಒಂದು ಲಂಗೋಟಿಯ ಫಕೀರರಾಗಿದ್ದರೂ, ಭಾರತ ರಾಷ್ಟ್ರದ ಸರ್ವಶಕ್ತಿಯನ್ನು ತಮ್ಮಲ್ಲಿ ಕೇಂದ್ರೀಕರಿಸಿಕೊಂಡಿದ್ದಾರೆ. ಬ್ರಿಟಿಶ ಸರಕಾರವು ಮೇಲೆ ಮೇಲೆ ಒಪ್ಪದಿದ್ದರೂ ಅಂತರಂಗಕ್ಕೆ ಮಹಾತ್ಮರಲ್ಲಿ ಭಾರತದ ಶಕ್ತಿಯು ಕೇಂದ್ರಿತವಾಗಿದೆ ಎಂಬುದು ಪೂರ್ಣ ಮನವರಿಕೆಯಾಗಿದೆ. ಭಾರತದಲ್ಲಿದ್ದ ಸೂಕ್ಷ್ಮ ರಹಸ್ಯಮಯವಾದ, ವಿಶಾಲವಾದ, ಅದ್ಭುತವಾದ ಎಂದೂ ಪಾಶ್ಚಾತ್ಯರ

ಶಕ್ತಿಗೆ ಒಳಗಾಗದ ಆತ್ಮಿಕ ಬಲದಿಂದ ಮಹಾತ್ಮರು ಇಂದು ಜಗತ್ತಿನ ಕ್ಷಿತಿಜದಲ್ಲಿ ಉದಯವಾಗಿದ್ದಾರೆ.

ಉಳಿದ ರಾಜಕೀಯ ಮುಖಂಡರಂತೆ, ರಾಜಕಾರಣದಲ್ಲಿಯ ದೋಷಗಳನ್ನು ತೋರಿಸಿ ಹೋರಾಡುವವರಿಗೆ ಸರಕಾರವು ಇಷ್ಟು ಭಯಭೀತವಾಗುತ್ತಿದ್ದಿಲ್ಲ. ಆದರೆ ಸೇರಿಗೆ ಸವ್ವಾಸೇರು ಗಂಟು ಬಿದ್ದಂತಾಗಿದೆ. ಅವರು ಪಾರತಂತ್ರ್ಯದ ಮೂಲಕ್ಕೆ ಕೈಹಾಕಿ ರಾಷ್ಟ್ರವನ್ನು ಜಾಗ್ರೃತಗೊಳಿಸಲು ಯತ್ನಿಸಹತ್ತಿದ್ದಾರೆ. ಜಗತ್ತಿನಲ್ಲಿಯ ಅನ್ಯಾಯದ ವಿರುದ್ಧವಾಗಿ ಬಂಡಾಯವನ್ನು ಹೂಡಿದ್ದಾರೆ. ಅವರ ಅಸ್ತ್ರವೆಂದರೆ ಅಹಿಂಸೆ. ವಿರೋಧಿಗಳಿಗೆ ಈ ಅಸ್ತ್ರದ ಗಂಧವು ಕೂಡ ಇಲ್ಲ. ಹಿಂಸೆಯ ಪ್ರವೃತ್ತಿಯಿಂದ ಹೋರಾಡುವವರು ಅಹಿಂಸೆಯ ಹಾಗು ಪ್ರೇಮದ ಮುಂದೆ ಯುದ್ಧದಲ್ಲಿ ಕೂಡ ನಿಸ್ತೇಜರಾಗುತ್ತಾರೆ. ಅವರ ಭೌತಿಕ ಬಲವು ನೈತಿಕ ಬಲದ ಮುಂದೆ ತುಚ್ಛವಾಗುತ್ತಿದೆ. ಇದರಿಂದ ಹಿಂಸಕರಿಗೆ ಅಹಿಂಸೆಯ ಪ್ರತಿಧ್ವನಿಯು ಭಯವನ್ನುಂಟುಮಾಡುತ್ತಾನೆ. ರೋಮ ಸಾಮ್ರಾಜ್ಯವು ಒಬ್ಬ ಅಹಿಂಸಾವಾದಿಯ ಫೂತ್ಕಾರಕ್ಕೆ ಹಾರಿ ಹೋಯಿತು. ಅವನ ರಕ್ತದಿಂದ ಹುಟ್ಟಿದ ಉರಿಯು ವಿರೋಧಿಗಳನ್ನು ಸುಟ್ಟುಬಿಟ್ಟಿತು. ಇದರಿಂದ ಮುಂದೆ ಹಿಂಸೆಯು ಭಯಭೀತವಾಗಿದೆ. ನಡುಗಹತ್ತಿದೆ.

ಭಾರತೀಯರ ಅಂತಃಕರಣವನ್ನು ತಿಳಿದು ಅವರ ಉದ್ಧಾರದ ಮಾರ್ಗವನ್ನು ಕಂಡು ಹಿಡಿದು ಅವರಿಗಾಗಿ ದೇಹವನ್ನು ಸವಿಸುವ ಮಹಾತ್ಮರನ್ನಲ್ಲದೆ ಭಾರತವು ಮತ್ಯಾರನ್ನು ಪ್ರೀತಿಸುವದು? ಮಹಾತ್ಮರು ಇಂದು ಭಾರತೀಯ ಪ್ರಾಣರಾಗಿದ್ದಾರೆ. ಭಾರತೀಯ ಅಂತಃಕರಣಗಳೆಲ್ಲವೂ ಅವರಲ್ಲಿ ನೆಲೆಯಾಗಿ ನಿಂತಿವೆ; ಅವರಿಂದಲೇ ಭಾರತಕ್ಕೆ ಜಗತ್ತಿಗೆ, ಮೋಕ್ಷವೆಂದು ನೋಡುತ್ತಿವೆ.

ಇಂದು ಜಗತ್ತಿನಲ್ಲಿ ಹಿಂಸೆಯು ಮಾನವ ಜನಾಂಗವನ್ನೇ ನುಂಗುತ್ತಲಿದೆ. ಭೌತಿಕ ಸುಧಾರಣೆಗಳು ಪ್ರಳಯಾಗ್ನಿಯ ಕಡೆಗೆ ಮಾನವ ಜನಾಂಗವನ್ನು ಎಳೆದೊಯ್ಯುತ್ತಲಿವೆ. ಬಡವರ ದೈನ್ಯವು

ಜೀವನವನ್ನು ತುಳಿದು ಅದರ ಮೇಲೆ ವಿಲಾಸವು ತಾಂಡವನೃತ್ಯವಾಡುತ್ತ ಲಿದೆ. ಹೊಟ್ಟೆಗಿಲ್ಲದೆ ಬಳಲುವ, ಪೀಡಿತವಾದ, ಅವಮಾನಿತವಾದ ದುರ್ಬಲವಾದ ಮಾನವ ಜನಾಂಗವು ಮಹಾತ್ಮರ ಕಡೆಗೆ ಆಶೆಯ ದೃಷ್ಟಿ ಯಿಂದ ನೋಡುತ್ತಲಿದೆ. ಶರೀರದಿಂದ ದುರ್ಬಲನಾದರೂ ಆತ್ಮಿಕ ಬಲ ದಿಂದ ಅತ್ಯಂತ ತೇಜಸ್ವಿಯಾದ ಮಹಾತ್ಮರಲ್ಲಿ ವಿಶ್ವದ ಆಸೆಯೂ ಮಾನವ ಜಾತಿಯ ಭವಿಷ್ಯವೂ ಕೇಂದ್ರಿತವಾಗಿವೆ. ಆದ್ದರಿಂದ ಅವರ ಅಹಿಂಸೆಯ ವ್ಯಾಪಕವಾದ ಪ್ರಯೋಗವು ಯಶಸ್ವಿಯಾಗದಿದ್ದರೆ, ಸಂಸಾರವೇ ಭಯ ಗ್ರಸ್ತವಾಗುವದು.

ಮಹಾತ್ಮರು ಇಂದು ಭಾರತದ ಉದ್ಧಾರಕರಾಗಿದ್ದಾರೆ. ಸ್ಫೂರ್ತಿಯ ಕಣಿಯಾಗಿದ್ದಾರೆ. ಸತ್ಯಧರ್ಮಪ್ರವರ್ತಕರಾಗಿದ್ದಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಭಾರತದ ಪ್ರಾಣವಾಗಿದ್ದಾರೆ.



# ಮಹಾತ್ಮರ ತತ್ವಜ್ಞಾನವು

ಮಹಾತ್ಮರು ಸತ್ಯ ಹಾಗು ಅಹಿಂಸೆಗಳ ಪ್ರಯೋಗವನ್ನು ಮಾಡಿ ಅವುಗಳಿಗೆ ತತ್ವಜ್ಞಾನದ ಸ್ವರೂಪವನ್ನು ಕೊಟ್ಟಿದ್ದಾರೆ. ಮಹಾತ್ಮರ ಜೀವನವೇ ಮೊದಲಿನಿಂದ ಕೊನೆಯವರೆಗೆ ಸತ್ಯದ ಒಂದು ನಿರಂತರವಾದ ಸಾಧನವಿದೆ. ಅವರ ಜೀವನದ ಪ್ರತಿಯೊಂದು ಶಾಖೆಗಳನ್ನು ನಿರೀಕ್ಷಿಸಿದರೆ, ಪ್ರತಿಯೊಂದರಲ್ಲಿಯೂ, ಪ್ರತಿಯೊಂದು ಕಾರ್ಯದಲ್ಲಿಯೂ ಸತ್ಯದ ಅಬಾಧಿತವಾದ ವಿಕಾಸವು ಕಂಡುಬರುತ್ತಲಿದೆ. ಕ್ಷಣಕ್ಷಣಕ್ಕೆ ದಿವ್ಯದೊಳಗಿಂದ ಹಾಯ್ದು ತೇಜೋವಂತರಾಗುತ್ತ ನಡೆದುದು ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತಲಿದೆ. ಅವರ ಕಾರ್ಯಕ್ರಮಗಳು ಬದಲಾಗುತ್ತಲಿವೆ. ಕಾರ್ಯಕ್ಷೇತ್ರವು ಬದಲಾಗುತ್ತಲಿದೆ. ಅವರ ಬಹಿರಂಗದ ಜೀವನದಲ್ಲಿ ಏರಿಳಿತಗಳು ಕಾಣುತ್ತಲಿವೆ. ಆದರೆ ಆಂತರಂಗಿಕ ಜೀವನವು ಮಾತ್ರ ಒಂದೇ ಸವನೆ ಸತ್ಯದ ಕಡೆಗೆ ಅರ್ಥಾತ್ ಸತ್ಯರೂಪಿ ಪರಮಾತ್ಮನ ಕಡೆಗೆ ಓಡುತ್ತ ನಡೆದುದು ಕಾಣುತ್ತಲಿದೆ.

ಮಹಾತ್ಮರ ಈ ತತ್ವವು ತ್ರಿಕಾಲಾಬಾಧಿತವಿದೆ. ಯಾವುದೇ ಜಾತಿ ಮತ ದೇಶಗಳಿಂದ ಬಂಧಿತವಾಗಿಲ್ಲ. ಮಾನವ ಜನಾಂಗಕ್ಕೆಲ್ಲ ತೆರೆದಿಡಲ್ಪಟ್ಟಿದೆ. ಅವರೇ ಒಮ್ಮೆ 'ತಮ್ಮ ಧರ್ಮಕ್ಕೆ ಯಾವ ಪ್ರಾದೇಶಿಕ ಬಂಧನವೂ ಇಲ್ಲ'ವೆಂದು ಹೇಳಿದ್ದಾರೆ. ಅವರ ತತ್ವಜ್ಞಾನವು ನೀತಿ ಪ್ರಧಾನವಾಗಿದೆ. ಆತ್ಮಸಾಕ್ಷಾತ್ಕಾರದ ದೃಷ್ಟಿಯಿಂದ ಯಾವ ಸದಾಚರಣೆಯ ಅವಶ್ಯಕತೆಯಿದೆಯೋ ಅದೆಲ್ಲವೂ ಧರ್ಮವೆನ್ನುತ್ತಾರೆ. ಆದ್ದರಿಂದ ಮಹಾತ್ಮರಿಗೆ ನೀತಿ ಮತ್ತು ಧರ್ಮವು ಬೇರೆಬೇರೆ ಎನಿಸುವದಿಲ್ಲ. ಜೀವನದ ಪ್ರತಿಯೊಂದು ಕೃತಿಯಲ್ಲಿಯೂ ನೀತಿಗೆ ಅವರು ಬಹಳ ಮಹತ್ವ ಕೊಡುತ್ತಾರೆ. ಇವರ ತತ್ವಜ್ಞಾನವು ನೀತಿಪ್ರಧಾನವಾಗಿದೆ. ಶುದ್ಧ ನೈತಿಕ ಆಚರಣೆಯಿಂದಲೆ ಆಧ್ಯಾತ್ಮಿಕದ ಜನ್ಮವಾಗುವದೆಂದು ಅವರು ಅನುಭವದಿಂದ ಹೇಳುತ್ತಲಿದ್ದಾರೆ. ಅವರ ಧರ್ಮವು ಆದರ್ಶ ಜೀವನವಿದೆ. ಶುದ್ಧ

**ನಿಃಸ್ವಾರ್ಥ ಸೇವೆಯೇ ಧರ್ಮದ ಸಾಧನವೆಂದು** ಅವರು ತಿಳಿಯುತ್ತಾರೆ. **ವಿಶ್ವಪ್ರೇಮವೇ, ವಿಶ್ವಬಂಧುತ್ವವೇ** ಈ ಧರ್ಮದ ಸಾಧ್ಯವೆನ್ನುತ್ತಾರೆ. ಇವರ ಧರ್ಮಕ್ಕೆ ಜಾತಿ ದೇಶಗಳಿಲ್ಲ. ಮರ್ಯಾದೆಯಿಲ್ಲ. ಇಡೀ ಮಾನವ ಜನಾಂಗವೇ ಈ ಧರ್ಮವನ್ನು ಆಚರಿಸಬಹುದು. **ಭಗವಾನ ಬುದ್ಧ** ದೇವನ ನಂತರ ಜಗತ್ತಿನ ಎದುರಿಗೆ ಇಷ್ಟು ಸುಲಭ ರೀತಿಯಿಂದ ಅಖಿಲ ಮಾನವ ಜನಾಂಗಕ್ಕೆ ಧರ್ಮತತ್ವಗಳನ್ನು ಹೇಳಿದವರೆಂದರೆ **ಮಹಾತ್ಮರೆ**.

**ಸತ್ಯವೇ** ಗಾಂಧಿಯವರ ತತ್ವಜ್ಞಾನದ ಗುರಿಯು. ಯಾಕಂದರೆ ಸತ್ಯವೇ ಪರಮಾತ್ಮನೆನ್ನುವರು. **ಅಹಿಂಸೆಯೇ** ಸತ್ಯಸಿದ್ಧಿಯ ಸಾಧನವು. ಅಹಿಂಸೆಯ ವಿಕಾಸ ಹಾಗು ಪರಿಣಾಮವೇ ಪ್ರೇಮವು. ಉಚ್ಚ ಪ್ರೇಮ (ಭಕ್ತಿ)ವೇ ಸಾಕ್ಷಾತ್ಕಾರದ ದಿವ್ಯ ಸಾಧನವೆಂದು ಅವರ ಶ್ರದ್ಧೆ. ಈ ಪ್ರೇಮದಿಂದಲೇ ಸಕಲಸಿದ್ಧಿ ಎಂದೆನ್ನುವರು. ಈ ಅಹಿಂಸೆ ಪ್ರೇಮಗಳು ಒಂದು ಬಗೆಯಿಂದ ಅಪರಿಣಿತ ಸತ್ಯವೇ. ಶತ್ರುಗಳ ಸಿಟ್ಟು ತೀರುವವರೆಗೆ ಅವರ ಆಘಾತಗಳನ್ನು ನಗುತ್ತ ನಗುತ್ತ ಸಹನ ಮಾಡಿ ಅಕ್ರೋಧದಿಂದ ಕ್ರೋಧವನ್ನು ಜಯಿಸಿ ಅಹಿಂಸೆಯಿಂದ ತಮ್ಮ ಹಾಗು ಶತ್ರುಗಳ ಕಲ್ಯಾಣವನ್ನು ಮಾಡುತ್ತಾರೆ. ಇದರಿಂದ ಇಬ್ಬರಲ್ಲಿಯೂ ಪ್ರೇಮ ಉದ್ಭವಿಸಿ ಅಂತರ್ಯಾಮಿಯಾದ **ಸತ್ಯನಾರಾಯಣನ** ದರ್ಶನಕ್ಕೆ ಅನುಕೂಲತೆಯಾಗುತ್ತದೆ. ಈ ಅಹಿಂಸೆಯ ಅವಲಂಬನದಿಂದ ಈರ್ಷ್ಯಾ, ದ್ವೇಷ, ಅಸೂಯಾ, ಭಯ, ಲೋಭ ಮೊದಲಾದ ತಾಮಸ ಗುಣಗಳು ಮಾಯವಾಗುತ್ತವೆ. ಮತ್ತು ಹೇಗೆ ಹೇಗೆ ಅಹಿಂಸೆಯು ಪೂರ್ಣವಾಗಿ ಪ್ರೇಮದಲ್ಲಿ ಪರಿಣತವಾಗುತ್ತದೆಯೋ ಹಾಗೆ ಹಾಗೆ ಸತ್ಯದ (ಪರಮಾತ್ಮನ) ಅನುಭವವು ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತದೆಂದು ಅನುಭವದಿಂದ ಹೇಳುತ್ತಿರುವರು. ತಮ ಹಾಗು ರಜಸ್ಸುಗಳು ಅಳಿಯುತ್ತ ಹೋದಂತೆಯೂ ಸತ್ಯವು ವಿಕಾಸಹೊಂದುತ್ತ ಹೋದಂತೆಯೂ ಆಧ್ಯಾತ್ಮಿಕ ಅನುಭೂತಿಯು ಹೆಚ್ಚುತ್ತ ಹೋಗುವದು. ಹೇಗೆ ಹೇಗೆ ಸಾಧಕನಲ್ಲಿ ಆ ಸತ್ಯಾನುಭವದ ಶಕ್ತಿಯು ಹೆಚ್ಚಾಗುವದೋ ಹಾಗೆಹಾಗೆ

ಅವನಲ್ಲಿ ಆತ್ಮದರ್ಶನದ ಕ್ಷಮತೆಯು ಹೆಚ್ಚುತ್ತ ಹೋಗುವದು. ಆಗ ಅವನು ಸರ್ವಾಂತರ್ಯಾಮಿಯಾದ ಪರಮಾತ್ಮನನ್ನು ನೋಡಹತ್ತುವನು. ಈ ಸರ್ವಾತ್ಮ ಭಾವವೇ ವಿಶ್ವರೂಪ ದರ್ಶನದ ಕೀಲಿಕೈಯು.

ಹೀಗೆ ಮಹಾತ್ಮರು ಸತ್ಯ ಹಾಗು ಅಹಿಂಸೆ, ಈ ಎರಡೂ ಸಾಮಾನ್ಯ ನೀತಿ ತತ್ವಗಳಿಗೆ ತಮ್ಮ ಜೀವನದ ಸಾಧನದಲ್ಲಿ ದಿವ್ಯ ಹಾಗು ತಾತ್ವಿಕ ಸ್ವರೂಪವನ್ನು ಕೊಟ್ಟಿದ್ದಾರೆ. ಅವರಿಗಂತೂ ಸತ್ಯವೇ ಪರಮಾತ್ಮ. ಸತ್ಯವು ಸರ್ವವ್ಯಾಪಕವಾಗಿದೆ. ಸತ್ಯವಿಲ್ಲದೆ ಯಾವ ವಸ್ತುವಿನ ಸ್ಥಿತಿಯೂ ಬಾಳುವದಿಲ್ಲ. ಆದ್ದರಿಂದಲೇ ಅದರ ಪ್ರಯೋಗವನ್ನು ಎಲ್ಲ ಕ್ಷೇತ್ರಗಳಲ್ಲಿಯೂ ಮಾಡಲು ಶಕ್ಯವಿದೆ. ಇದರಿಂದ ಮಾನವ ಜೀವನದ ವಿಕಾಸಕ್ಕೆ ಒಳ್ಳೇ ಅನುಕೂಲತೆಯಾಗಿದೆ. ಯಾಕಂದರೆ ಸತ್ಯದೊಡನೆ ಅಹಿಂಸೆಯು ಬೆರೆತಿರುವದರಿಂದ ಒಬ್ಬನು ತನ್ನ ಆತ್ಮಿಕ ವಿಕಾಸಕ್ಕಾಗಿ ಉಪಾಯಗಳನ್ನೂ ಅನುಕೂಲತೆಗಳನ್ನೂ ಯೋಜಿಸುವಾಗ ತನ್ನಿಂದ ಇತರರ ವಿಕಾಸಕ್ಕೆ ತೊಂದರೆಯುಂಟಾಗದಂತೆ ನೋಡಿಕೊಳ್ಳಬೇಕಾಗುತ್ತದೆ. ಮಹಾತ್ಮರ ಈ ಮಾರ್ಗದಿಂದ ವ್ಯಕ್ತಿ ವ್ಯಕ್ತಿಗಳ ವಿಕಾಸಕ್ಕೆ ಅನುಕೂಲತೆಯುಂಟಾಗಿ, ಮಾನವ ಜನಾಂಗದ ವಿಕಾಸಕ್ಕೇ ಒಳ್ಳೇ ಅನುಕೂಲತೆಯುಂಟಾಗುವದು. ಈ ರೀತಿಯಾಗಿ ಪಾಶ್ಚಾತ್ಯ ಪೌರ್ವಾತ್ಯ ತತ್ವಜ್ಞಾನಿಗಳಿಬ್ಬರಿಗೂ ಅನುಕೂಲವಾದ ದಾರಿಯನ್ನು ತೋರಿಸಿ ಐಕ್ಯಕ್ಕೆ ಮಾರ್ಗಮಾಡಿ ಕೊಟ್ಟಿದ್ದಾರೆ. ಆಧ್ಯಾತ್ಮ ಹಾಗು ಸಮಾಜ ಸೇವೆಯ ಸಮನ್ವಯವನ್ನು ಎಲ್ಲಿಯಾದರೂ ಸುಂದರ ರೀತಿಯಿಂದ ನೋಡಲು ಸಿಗುತ್ತಿದ್ದರೆ, ಅದು ಮಹಾತ್ಮರ ಜೀವನದಲ್ಲಿ.

ಅಹಿಂಸೆಯು ಅವರ ತತ್ವಜ್ಞಾನದಲ್ಲಿ ಅಪರಿಣತ ಸತ್ಯವಿರುವದಲ್ಲದೆ, ತಮ್ಮಿಂದ ಪ್ರಮಾದವು ಘಟಿಸಬಾರದೆಂದು ಇದರ ಕಡೆಗೆ ಹೆಚ್ಚು ಲಕ್ಷ್ಯವು ಪೂರೈಸಲ್ಪಡುತ್ತಲಿದೆ. ಯಾವಾಗ ತಮ್ಮ ಗುರಿಯಾದ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳಲು ಅಹಿಂಸೆಯನ್ನು ಸಾಧನವಮಾಡಿ ಕೊಂಡರೋ, ಆಗ ಅವರು ಸಾಧಕನ ಪಾವಿತ್ರತೆಗಾಗಿಯೂ ವಿಕಾರಗಳಿಂದ ರಕ್ಷಿಸಿಕೊಳ್ಳುವದಕ್ಕಾಗಿಯೂ, ಅನೇಕ ನಿರ್ಬಂಧಗಳನ್ನು

ಹಾಕಿಕೊಂಡಿರುವರು. ಇವುಗಳಲ್ಲಿ **ಅಪರಿಗ್ರಹವು ಮಹತ್ವವಾದುದು.** ಅವರ ತತ್ವಜ್ಞಾನದಲ್ಲಿಯೂ, ಸಾಮಾಜಿಕ ದೃಷ್ಟಿಯಿಂದ ಈ ತತ್ವವು ಅತ್ಯಂತ ಮಹತ್ವದ್ದಾಗಿವೆ. ಮನುಷ್ಯನು ತನ್ನ ಜೀವಿತವು ನಡೆಯುವದಕ್ಕೆ ಬೇಕಾಗುವಷ್ಟಕ್ಕಿಂತಲೂ ಹೆಚ್ಚಿಗೆ ಸಂಗ್ರಹಿಸಲು ಅವನಿಗೆ ಅಧಿಕಾರವೇ ಇಲ್ಲ. ಆದ್ದರಿಂದ **ಅಪರಿಗ್ರಹ** ವ್ರತವನ್ನು ಸ್ವೀಕರಿಸಿದ ದೇಶ ಸೇವಕನಿಂದ ಯಾವ ಅಂಜಿಕೆಯೂ ಇಲ್ಲ. ಅಲ್ಲದೆ ದೇಶ ಪ್ರೇಮದ ಉನ್ಮಾದದಿಂದ ಅವನು ವೈಮರೆಯುವಂತೆಯೂ ಇಲ್ಲ. ಈ ಅಪರಿಗ್ರಹ ವ್ರತದ ಕಾವಲು ಎಂದು ಅಸ್ತೇಯ ಮತ್ತು ಅಸ್ವಾದ ವ್ರತಗಳನ್ನು ಬೆನ್ನುಹಚ್ಚಿದ್ದಾರೆ. ಆಳವಾಗಿ ವಿಚಾರಿಸಿದರೆ ಈ ಎರಡೂ ವ್ರತಗಳು ಅಪರಿಗ್ರಹದಲ್ಲಿಯೇ ಅಡಕವಾಗುತ್ತವೆ. ಆದರೆ, ಬುದ್ಧಿಪೂರ್ವಕವಾಗಿ, ಅವುಗಳ ಮಹತ್ವವು ಎದ್ದು ಕಾಣುವದಕ್ಕಾಗಿ ಪ್ರತ್ಯೇಕವಾಗಿ ಹೇಳಲ್ಪಟ್ಟಿವೆ. ಇದಲ್ಲದೆ, ವ್ಯಕ್ತಿಗತ ಸಾಧನೆಗೆಂದೂ ಸಮಾಜದ ವಿಕಾಸಕ್ಕೆಂದೂ ಬ್ರಹ್ಮಚರ್ಯೆಯು ಒಂದು ಮಹಾವ್ರತವಾಗಿ ಪರಿಗಣಿಸಲ್ಪಟ್ಟಿದೆ. ಅವರ ಅಸ್ವಾದ ವ್ರತವು ಬ್ರಹ್ಮಚರ್ಯದಲ್ಲಿಯೂ ಬರಲು ಶಕ್ಯವಿದೆ. ಧಾರ್ಮಿಕ ಪ್ರಮಾದಗಳೂ ಸಾಧಕ ಮಾರ್ಗದಲ್ಲಿ ದೊಡ್ಡ ವಿಘ್ನಗಳು. ಆದುದರಿಂದಲೇ ಸರ್ವಧರ್ಮಗಳ ಸಮಭಾವವೂ ಅವರ ತತ್ವಜ್ಞಾನದಲ್ಲಿ ಮಹತ್ವ ಸ್ಥಾನಪಡೆದಿದೆ.

ಹೀಗೆ, ಸತ್ಯಕ್ಕಾಗಿ ಅಹಿಂಸೆ, ಅಹಿಂಸೆಗಾಗಿ ಅಪರಿಗ್ರಹ, ಅಪರಿಗ್ರಹಕ್ಕಾಗಿ ಬ್ರಹ್ಮಚರ್ಯ, ಬ್ರಹ್ಮಚರ್ಯಕ್ಕಾಗಿ ಅಸ್ವಾದ, ಅಸ್ವಾದಕ್ಕಾಗಿ ಅಸ್ತೇಯಗಳು ಅವಶ್ಯಕ. ಈ ದಿವ್ಯ ತತ್ವಗಳಮೇಲೆಯೇ ಗಾಂಧಿಯವರ ತತ್ವಜ್ಞಾನವೂ ನೀತಿಶಾಸ್ತ್ರವೂ ನಿಲ್ಲಿಸಲ್ಪಟ್ಟಿವೆ. ಹೀಗೆ ಗಾಂಧಿಯವರು ಆತ್ಮಸಾಕ್ಷಾತ್ಕಾರದ ಸುಸಂಬದ್ಧವಾದ ತತ್ವಜ್ಞಾನವನ್ನು ಏರ್ಪಡಿಸಿದ್ದಾರೆ.

---

# ದೀನದಯಾಳು ಮಹಾತ್ಮಾ

ಗಾಂಧಿಯವರು ದೀನದಯಾಳುವಾಗಿದ್ದಾರೆ. ಅವರನ್ನು ಕಂಡೊಡನೆಯೇ ಅವರ ಅಂತಃಕರಣವು ಕರಗಿ ಉಕ್ಕಿಬರುತ್ತದೆ. ದೀನರ ಹಾನಿಯೇ ಇಂದು ಮಹಾತ್ಮರನ್ನು ರಾಜಕೀಯ ರಂಗಕ್ಕೆ ಎಳೆದಿದೆ. ಇವರ ಸೇವೆಯಲ್ಲಿಯೇ ತಮ್ಮ ಜೀವನದ ಸಾರ್ಥಕತೆ ಎಂದು ಮಹಾತ್ಮರು ತಿಳಿಯುತ್ತಾರೆ. ಇವರ ಸೇವೆಯೇ ಪರಮಾತ್ಮನ ಉಪಾಸನೆ ಎಂದು ತಿಳಿಯುತ್ತಾರೆ. ಆದ್ದರಿಂದಲೇ ದರಿದ್ರನನ್ನು ನಾರಾಯಣನನ್ನು ಮಾಡಿದ್ದಾರೆ. ದರಿದ್ರನಾರಾಯಣನ ಅಖಂಡಸೇವೆಯನ್ನು ಕೈಕೊಂಡಿದ್ದಾರೆ. ಕೈಕೊಳ್ಳಲು ಉಪದೇಶಿಸುತ್ತಿದ್ದಾರೆ. ರಾತ್ರಿಹಗಲು ಈ ದರಿದ್ರನಾರಾಯಣನ ಧ್ಯಾನದಲ್ಲಿಯೇ ಮಗ್ನರಾಗಿದ್ದಾರೆ.

ದೀನರಾದರೂ ತಮ್ಮ ಉದ್ಧಾರಕ್ಕಾಗಿ ಅವತರಿಸಿದ ಮಹಾತ್ಮನೆನ್ನುತ್ತಾರೆ. ಅವರು ನೋಡಿರಲಿ, ನೋಡದಿರಲಿ, ಅವರಿಗೂ ಅವರ ಕಾರ್ಯಕ್ಕೂ ಅಂತಃಕರಣಪೂರ್ವಕವಾಗಿ ಹರಿಸುತ್ತಿದ್ದಾರೆ.

ಅವರ ವಿಷಯವಾಗಿ ಮಹಾತ್ಮರು ಮಾಡಿದ್ದಾದರೂ ಏನು? ಹರಿಜನೋದ್ಧಾರದ ಕಾರ್ಯದ ಪ್ರಾರಂಭವು. ಸಮಾಜದಿಂದ ತುಳಿಯಲ್ಪಟ್ಟು, ಎಂದೂ ಮೇಲಕ್ಕೇಳದ ಅವರ ದೀನ ಸ್ಥಿತಿಯನ್ನು ಕಂಡು ಮರುಗಿದ ಗಾಂಧಿಯವರ ಅಂತಃಕರಣವು ಅವರನ್ನು ಈ ಕಾರ್ಯಕ್ಕಾಗಿ ಹಚ್ಚಿತು. ಅವರ ಉದ್ಧಾರಕ್ಕಾಗಿ ಪ್ರಾಣವನ್ನು ಪಣಕ್ಕೆ ಹಚ್ಚಿದರು. ಬ್ರಿಟಿಶ ಸಾಮ್ರಾಜ್ಯವನ್ನು ನಡುಗಿಸಿಬಿಟ್ಟರು.

ಭಾರತೀಯರ ಬಡತನದ ಕರಳಿನ ಕೂಗು ಮಹಾತ್ಮರನ್ನು ಕಂಗೆಡಿಸಿತು. ಅಖಂಡವಾಗಿ ವಿಚಾರ ಮಾಡಿ, ರಾಟಿಯನ್ನು ರೈತರಿಗಾಗಿ ಕೊಟ್ಟರು. ಅರಹೊಟ್ಟೆಯಿಂದ ಉದ್ಯೋಗವಿಲ್ಲದೆ ನರಳುತ್ತಿರುವ ರೈತರ ಉಡಿಯಲ್ಲಿ ಎರಡು ಬಿಲ್ಲಿ ಬೀಳಲೆಂಬುದೇ ಅವರ ಬಯಕೆ. ಹಳ್ಳಿಯಲ್ಲಿರುವ ಸಾವಿರಾರು ಮುದುಕಿಯರು **ಅನ್ನದಾತನೆಂದು** ಮಹಾತ್ಮರಿಗೆ ಹರಿಸಿದರೆ ಇದರಲ್ಲಿ ಆಶ್ಚರ್ಯವೇನು? ಚರಖವು ಹಳ್ಳಿಯ ರೈತರಲ್ಲಿ

ಆತ್ಮವಿಶ್ವಾಸವನ್ನುಂಟುಮಾಡುತ್ತಲಿದೆ. ಸಾವಿರಾರು ಸ್ತ್ರೀಯರಿಗೆ ಜೀವನದ ಆಧಾರವಾಗಿದೆ. ಭಾರತೀಯ ಉದ್ಯೋಗದ ಪ್ರತಿಬಿಂಬವಾಗಿದೆ. ಹಳ್ಳಿಯ ಜೀವನದಲ್ಲಿ ಇಂದು ಮೆಲ್ಲಮೆಲ್ಲನೆ ಸ್ಥಾನವನ್ನು ಪಡೆಯುತ್ತಲಿದೆ.

ರಾಟಿಯು ಗಾಂಧಿಯವರ **ಸಹಚರಿ**ಯಾಗಿದೆ. ಅವರು ಹೊರಗಿರಲಿ, ಜೇಲಿನಲ್ಲಿರಲಿ, ಪ್ರವಾಸದಲ್ಲಿರಲಿ, ಮನೆಯಲ್ಲಿರಲಿ, ಯಾವಾಗಲು ಅವರನ್ನು ಬಿಟ್ಟು ಅಗಲುವದಿಲ್ಲ. ಅವರು ರಾಟಿಯ ಹುಚ್ಚರಾಗಿದ್ದಾರೆ. ಯಾಕಂದರೆ, ಹಳ್ಳಿಗರ ಉದ್ಧಾರವನ್ನು ಅದರಲ್ಲಿ ನೋಡುತ್ತಿದ್ದಾರೆ. ಅವರು ಖಾದಿಯಲ್ಲಿ ಭಾರತದ ಸ್ವಾತಂತ್ರ್ಯವನ್ನೂ ನಾರೀಮಣಿಯರ ಶೀಲವನ್ನೂ ಸತ್ಯಯುಗದ ದರ್ಶನವನ್ನೂ ಕಾಣುತ್ತಲಿದ್ದಾರೆ. ಈ ಮಾತುಗಳನ್ನು ಕೇಳಿ ಕೆಲವರು ನಾಚಬಹುದು, ಕೆಲವರು ಹುಚ್ಚನೆನಬಹುದು, ಅವ್ಯವಹಾರ್ಯವೆನಬಹುದು. ಆದರೆ ಚರಖದ ಪ್ರಸಾರವು ಮಾತ್ರ ಅಖಂಡವಾಗಿ ನಡೆದೇ ಇದೆ.

ಈ ರಾಟಿಯು ಭಾರತೀಯ ರೈತರ ಭಾಗ್ಯದೇವತೆ. ಇಷ್ಟೇ ಅಲ್ಲ ಯಂತ್ರಗಳ ವಿರುದ್ಧ ಎಬ್ಬಿಸಿದ ಬಂಡಿನ ಮೂರ್ತಿಯಾಗಿದೆ. ಯಂತ್ರ ರಾಕ್ಷಸನ ದವಡೆಯೊಳಗೆ ಸಿಕ್ಕು ನರಳುತ್ತಿರುವ ಕೋಟ್ಯಾವಧಿ ದೀನರ ಉದ್ಧಾರದ ಮಾರ್ಗವಾಗಿದೆ. ರಾಟಿಯು ಜೀವನದಲ್ಲಿ ಸಾದಾತನವನ್ನು ತಂದುಕೊಡುವದಲ್ಲದೆ, ಶ್ರೀಮಂತರು ಬಡವರು ಎಂಬ ಭೇದವನ್ನು ಅಳಿಸುವದು. ಇದರಿಂದ ಪಾಶ್ಚಾತ್ಯರಾಷ್ಟ್ರಗಳಲ್ಲಿ ನಡೆದ ವರ್ಗಕಲಹವು ಮಾಯವಾಗುವದು. ಈ ದೃಷ್ಟಿಯಿಂದ ರಾಟಿಗೆ ಅಂತರರಾಷ್ಟ್ರೀಯ ಮಹತ್ವವೂ ಇದೆ. ಅಮೇರಿಕೆಯವರು ಅಮೇರಿಕೆಗೆ ನಿಮ್ಮ ಸಂದೇಶವೇನೆಂದು ಕೇಳಿದಾಗ '**ರಾಟಿಯೇ ನನ್ನ ಸಂದೇಶ**'ವೆಂದು ಹೇಳಿದಾಗ ಮಹಾತ್ಮರ ಮನದಲ್ಲಿ ಈ ಎಲ್ಲ ಮಾತುಗಳು ಇದ್ದವು. ಜಗತ್ತಿನಲ್ಲಿ ಯಾಂತ್ರಿಕಯುಗದಿಂದ ಉತ್ಪನ್ನವಾದ ಅಶಾಂತತೆ, ಅಸಮಾನತೆ, ಪಾರತಂತ್ರಗಳನ್ನು ನಾಶಮಾಡಲು ಒಂದೇ ಒಂದು ಸಾಧನವಾದ ರಾಟಿಯು ಸತ್ಯಯುಗದ ಮಾರ್ಗವನ್ನು ತೋರಿಸುತ್ತಲಿದೆ.

---



ಪಂಡಿತ ಜವಾಹರಲಾಲ ನೆಹರು

# ಸ್ವಾತಂತ್ರ್ಯ ವೀರರಾದ ಪಂಡಿತ ಜವಾಹರಲಾಲ ನೆಹರು

ಜೀವನ ಚರಿತ್ರೆ.

ರಾಜಕಾರಣ.

ವ್ಯಕ್ತಿತ್ವ.

# ಸ್ವಾತಂತ್ರ್ಯ ವೀರರಾದ ಪಂಡಿತ ಜವಾಹರಲಾಲ ನೆಹರು

## ( ಜೀವನ ಚರಿತೆ )

‘In bravery he is not to be surpassed. Who can excel him in the love of the country? ‘He is rash and inpetuous’ say some. This quality is an additional qualification at the present moment. And if he has the dash of and the rashness of warrior, he has also the prudence of a statesman. A lover of discipline, he has shown himself to be capable of rigidly submitting to it even where it has seemed irksome. He is undoubtedly an extremist thinking far ahead of his sarroundings. X X He is pure as the crystel, he is truthful beyond suspicion. He is a knight sans peur, sans reproache. The nation is safe in his hands.’

*Mahatma Gandhi.*

‘ವೀರತ್ವದಲ್ಲಿ ಇವರನ್ನು ಸರಿಗಟ್ಟುವವರಾರು ? ದೇಶಪ್ರೇಮದಲ್ಲಿ ಇವರಿಗಿಂತ ಮುಂದೆ ಓಡುವವರಾರು ? ಹಲವರು ಇವರು ಚಂಚಲರೂ ದುಡುಕುವವರೂ ಇರುವರೆಂದು ಅನ್ನುತ್ತಾರೆ. ಆದರೆ ಸದ್ಯದ ಪ್ರಸಂಗದಲ್ಲಿ ಇವು ಅವಶ್ಯಕವಾದವು. ಇದಲ್ಲದೆ ಇವರಲ್ಲಿ ವೀರ ಯೋದ್ಧನ ತೇಜಸ್ಸು ದುಡುಕುವಿಕೆಯೂ ಇರುವವಲ್ಲದೆ ರಾಜನೀತಿಜ್ಞನ ವಿವೇಕವೂ ಇದೆ. X X ಇವರು ಸ್ಫಟಿಕ ಮಣಿಯಂತೆ ಪವಿತ್ರರಿದ್ದಾರೆ. ಇವರ ಸತ್ಯಶೀಲತೆಯು ಸಂಶಯಾತೀತವು ಇವರು ಅಹಿಂಸಕ ಮತ್ತು ಅನಿಂದನೀಯ ಯೋದ್ಧರಿದ್ದಾರೆ. ಇವರ ನೇತೃತ್ವದಲ್ಲಿ ರಾಷ್ಟ್ರವು ಸುರಕ್ಷಿತವಾಗಿದೆ.

ಮಹಾತ್ಮಾ ಗಾಂಧಿ

ಭಾರತೀಯರ ಯಾವುದೇ ಪ್ರಶ್ನೆಯನ್ನು ಅಖಿಲ ಮಾನವಜನಾಂಗದ ದೃಷ್ಟಿಯಿಂದ ವಿಚಾರ ಮಾಡುವ ಭಾರತೀಯರಲ್ಲಿ ಜವಾಹರಲಾಲರೇ

ಅಗ್ರಗಣ್ಯರು, ಮೊದಲಿಗರು, ಎಂದು ಹೇಳಬಹುದು. ಇವರ ದೃಷ್ಟಿಯು ವಿಶಾಲವಾದುದು. ಅಂತಃಕರಣವು ಪವಿತ್ರವಾದುದು. ಅಂತರ ರಾಷ್ಟ್ರೀಯ ರಾಜಕಾರಣವನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರಮಾಡಿ, ಭಾರತದ ರಾಜಕೀಯ ಸಮಸ್ಯೆಗಳನ್ನು ಬಿಡಿಸುವದರಲ್ಲಿ ಇವರು ಒಳ್ಳೇ ನಿಪುಣರು. ಅಂತರರಾಷ್ಟ್ರೀಯ ದೃಷ್ಟಿಯಿಂದ ಭಾರತವು ಮಹತ್ವದ ಸ್ಥಾನವನ್ನು ಪಡೆಯಬೇಕೆಂದು ಹಂಬಲಿಸುವವರಲ್ಲಿ ಇವರೇ ಮಿಗಿಲಾದವರು. ಅಖಿಲಭಾರತದ ಅಂತಃಕರಣವನ್ನು ಸೆಳೆದುಕೊಂಡವರಲ್ಲಿ ಮಹಾತ್ಮರನ್ನೊಬ್ಬರನ್ನು ಬಿಟ್ಟರೆ ಇವರನ್ನು ಸರಿಗಟ್ಟುವವರು ಮತ್ತೊಬ್ಬರಿಲ್ಲ. ಇವರ ವೀರಶ್ರೀಯೂ ಸ್ವದೇಶಾಭಿಮಾನವೂ ಇವರನ್ನು ಭಾರತೀಯ ರಣರಂಗಕ್ಕೆ ಎಳೆದಿವೆ. ಇವರ ದಯಾಪೂರ್ಣವಾದ ಹೃದಯವು ಇವರನ್ನು ಸಾಮ್ಯವಾದಿಯನ್ನಾಗಿ ಮಾಡಿದೆ. ಒಬ್ಬ ಯುರೋಪಿಯನ್ನರು **ಜವಾಹರಲಾಲರನ್ನು ಕಂಡು, ಭಾರತೀಯ ಲೇನಿನ್ನರೆಂದು ಭಾಸವಾಗುವದಲ್ಲದೆ** ಇವರ ತೇಜಸ್ಸು, ಕಷ್ಟಸಹಿಷ್ಣುತೆಯೂ ಭಾರತದ ಭವಿಷ್ಯವನ್ನು ಉಜ್ವಲ ಮಾಡುವದರಲ್ಲಿ ಸಂಶಯವಿಲ್ಲೆಂದು ಅಂದದ್ದು ನಿಜವಾಗಿಯೂ ಯಥಾರ್ಥವಾಗಿದೆ. ಮಹಾತ್ಮರಷ್ಟು ಭಾರತೀಯರ ವಿಶ್ವಾಸವನ್ನು ಸಂಪಾದಿಸಿದವರೆಂದರೆ ಇವರೇ. ಇನ್ನೊಬ್ಬರಿಲ್ಲ. ಇಷ್ಟೇ ಅಲ್ಲ, ಮಹಾತ್ಮರು ತಮ್ಮ ತರುವಾಯ ಭಾರತದ ನಾಯಕತ್ವವು ಇವರ ಕಡೆಗೇ ಬರಬೇಕೆಂದು ಅಂತಃಕರಣ ಪೂರ್ವಕವಾಗಿ ಬಯಸುತ್ತಾರೆ. ಭಾರತದ ಧ್ಯೇಯವು ಸಂಪೂರ್ಣ ಸ್ವಾತಂತ್ರ್ಯವೇ ಎಂದು ಘೋಷಿಸಿ, ಭಾರತದ ಸ್ಥಾನವನ್ನು ಅಂತರರಾಷ್ಟ್ರಿಯ ರಾಜಕಾರಣದಲ್ಲಿ ಮೇಲಂತಸ್ತಿಗೆ ಒಯ್ದ ಮಹಾವೀರರೆಂದರೆ ಜವಾಹರಲಾಲರೇ! ಮಾತೃಭೂಮಿಯ ಕಡೆಗೆ ಕಿವಿಗೊಟ್ಟು ರಾಜವೈಭವವನ್ನು ತೊರೆದ ತ್ಯಾಗಮೂರ್ತಿಗಳಿವರು.

ಪಂಡಿತ ಜವಾಹರಲಾಲರ ಜನ್ಮವು ೧೮೮೯ನೇ ನವ್ಹಂಬರದಲ್ಲಿ. ತಂದೆತಾಯಿಗಳ ಪ್ರೀತಿಯ ಪುತ್ರರು. ರಾಜಯೋಗ್ಯವಾದ ಭೋಗ ವಿಲಾಸಗಳಲ್ಲಿಯೇ ಬೆಳೆದವರು. ಇಂಗ್ಲೀಷ ದಾಸಿಯರ ಪಡಿನೆಳಲಲ್ಲಿ ಬೆಳೆದವರು. ಇಂಗ್ಲೀಷ ಸಖ್ಯೆಯನ್ನು ಮೆಚ್ಚಿದ ಮೋತಿಲಾಲರು

ಬ್ರಿಟಿಶರಿಗೂ ಕೂಡ ತಮ್ಮ ಮಗನು ಆದರ್ಶ ಪುರುಷನಾಗಬೇಕೆಂದು ಬಯಸುತ್ತಿದ್ದರು. ಬ್ರಿಟಿಶ ಸಂಸ್ಕೃತಿಯ ಹುಚ್ಚು ಬಹಳ ಅವರಿಗೆ. ಆದರೆ ಪರಮಾತ್ಮನ ಸಂಕಲ್ಪವೇ ಬೇರೆ ಇದ್ದಿತು. ಗಾಂಧಿಗುರುವಿನ ಸಹವಾಸ ದಿಂದ ಜವಾಹರಲಾಲರು ಕೃತ್ರಿಮವಾದ ಜೀವನದ ಪರೆಯನ್ನು ತೊರೆದು ಸ್ವತೇಜದಿಂದ ಇಂದು ಜಗತ್ತಿಗೆ ಆದರ್ಶರಾಗಿದ್ದಾರೆ. ಬೀಜದಲ್ಲಿದ್ದುದೇ ಬೆಳೆದುದರಲ್ಲಿಯೂ ಕಾಣುವದೆಂಬಂತೆ, ಇವರ ಚಿಕ್ಕತನದಲ್ಲಿಯೇ ಇವರ ಗುಣಗಳು ಕಂಡು ಬರಹತ್ತಿದವು. ಇವರ ಶಾಂತ, ಗಂಭೀರವಾದ ಸ್ವಭಾವವು ಎಲ್ಲರನ್ನೂ ಮುಗ್ಧಗೊಳಿಸುತ್ತಿತ್ತು. ತಮ್ಮ ಅಂತಃಕರಣದಲ್ಲಿ ನಟ್ಟ ಮಾತನ್ನು ಎಂದೂ ಆಚರಿಸದೆ ಬಿಡುತ್ತಿದ್ದಿಲ್ಲ.

೧೨ ವರ್ಷಗಳ ವರೆಗೆ ಮನೆಯಲ್ಲಿಯೇ ಶಿಕ್ಷಣವಾಯಿತು. ಹಾಯಸ್ಕೂಲಿಗೆ ಕಳಿಸಲ್ಪಟ್ಟರು. **ಶ್ರೀ. ಬ್ರೂಕ್ಸರು** ಇವರಿಗೆ ಮನೆಯಲ್ಲಿ ಪಾಠವನ್ನು ಹೇಳಿಕೊಡುತ್ತಿದ್ದರು. ಅವರ ವ್ಯಕ್ತಿತ್ವ ಪ್ರಭಾವವು ಜವಾಹರಲಾಲರ ಜೀವನದ ಮೇಲೆ ಬಹಳವಾಯಿತು.

ಬ್ರೂಕ್ಸರು ಇಂಗ್ಲೀಷರಾದರೂ ಮದ್ಯಮಾಂಸಗಳನ್ನು ಸೇವಿಸುತ್ತಿದ್ದಿಲ್ಲ. ಶಾಂತ ಸ್ವಭಾವದವರೂ ಕೋಮಲ ಹೃದಯರೂ ಆಗಿದ್ದರು. ಬಹಳ ಸಮಯವನ್ನು ಆಧ್ಯಾತ್ಮ ಚಿಂತನದಲ್ಲಿ ಕಳೆಯುತ್ತಿದ್ದರು. ಜವಾಹರಲಾಲರಿಗೆ ಕೇವಲ ಅಭ್ಯಾಸವನ್ನು ಮಾಡಿಸುವದೇ ಇವರ ಗುರಿಯು ಇರಲಿಲ್ಲ. ಶೀಲಸಂವರ್ಧನೆಯನ್ನು ಮಾಡುವದೇ ತಮ್ಮ ಕರ್ತವ್ಯವೆಂದು ಬಗೆದಿದ್ದರು. ಮಾಂಸಾಹಾರವು ತ್ಯಾಜ್ಯವೆಂದೂ ತಿನ್ನುವದು ಪಾಪವೆಂದೂ ಉಪದೇಶಿಸಿದರು. ಕೋಮಲ ನಿರ್ಮಲ ಹೃದಯದವರಾದ ಜವಾಹರಲಾಲರ ಮೇಲೆ ಒಳ್ಳೇ ಪರಿಣಾಮವಾಯಿತು. ಮರುದಿನ ಊಟಕ್ಕೆ ಕುಳಿತಾಗ ಮಾಂಸವನ್ನು ತಿನ್ನುವದು ಪಾಪವೆಂದೂ ತಾವು ಮುಟ್ಟುವದಿಲ್ಲೆಂದೂ ಅಂದಕೂಡಲೇ ತಂದೆತಾಯಿಗಳಿಬ್ಬರೂ ಆಶ್ಚರ್ಯ ಚಕಿತರಾದರು.

ಪಾಶ್ಚಾತ್ಯ ಸಂಸ್ಕೃತಿಯ ಪ್ರಿಯರಾದ ಮೋತಿಲಾಲರಿಗೆ ಇದು ರುಚಿಸಲಿಲ್ಲ. ಗುರುಶಿಷ್ಯರನ್ನು ಅಗಲಿಸಿದರು. ಜವಾಹರಲಾಲರ ಮನಃ

ಪ್ರವಾಹವು ಪಾಶ್ಚಾತ್ಯ ಸಂಸ್ಕೃತಿಯ ಕಡೆಗೆ ಹರಿಯುವಂತೆ ಮಾಡಿದರು.

ಈ ಸಮಯದಲ್ಲಾದ **ರಶಿಯಾ ಜಪಾನದ** ಯುದ್ಧವು ಇವರ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವನ್ನುಂಟುಮಾಡಿತು. ಜಪಾನಿನ ವೀರರ ಕಥೆಗಳು ಇವರನ್ನು ವೀರರನ್ನಾಗಿ ಮಾಡಿದವು. ಈ ವಿಷಯವಾಗಿ ತಮ್ಮ ಆತ್ಮಚರಿತ್ರೆಯಲ್ಲಿ ಹೀಗೆ ಬರೆಯುತ್ತಾರೆ.

‘ರಾಷ್ಟ್ರೀಯ ಭಾವನೆಗಳು ನನ್ನ ಮನಸ್ಸಿನಲ್ಲಿ ತುಂಬಿಕೊಂಡವು. ಐರೋಪ್ಯದ ದಬ್ಬಾಳಿಕೆಯಿಂದ ಮುಕ್ತವಾದ ಭಾರತವನ್ನು ಏಶಿಯಾಖಂಡವನ್ನು ಕುರಿತು ಧ್ಯಾನಿಸುತ್ತಿದ್ದೆ. ವೀರರ ಸಾಹಸಗಳನ್ನು ನೆನೆನೆನೆದು ನಾನು ಖಡ್ಗಧಾರಿಯಾಗಿ ಭಾರತದ ಬಂಧವಿಮೋಚನೆಗೆ ಹೋರಾಡುವ ಕನಸನ್ನು ಕಾಣುತ್ತಿದ್ದೆ.’

ಮೋತಿಲಾಲರು ಮಗನನ್ನು ಇಂಗ್ಲಂಡಕ್ಕೆ ಕಳಿಸಿ ಉಚ್ಚ ಶಿಕ್ಷಣವನ್ನು ಕೊಡಿಸಬೇಕೆಂದು ನಿಶ್ಚಯಿಸಿದರು. ೧೯೦೫ರಲ್ಲಿ ಇಂಗ್ಲಂಡಕ್ಕೆ ಹೋದರು. **ಹೈರೋ** ಎಂಬ ಶಾಲೆಯಲ್ಲಿ ಹೆಸರು ಹಚ್ಚಿದರು. ಈ ಶಾಲೆಯು ಅನೇಕ ಮುತ್ಸದ್ದಿಗಳಿಗೆ ಜನ್ಮವನ್ನು ಕೊಟ್ಟಿದೆ ಎಂದು ಇದರ ಕೀರ್ತಿ. ಜವಾಹರಲಾಲರ ವಿದ್ಯಾಭ್ಯಾಸವು ಮುಂದುವರಿಯಿತು. ಜವಾಹರಲಾಲರ ವಿಶಾಲ ದೃಷ್ಟಿಯನ್ನು ಕಂಡು ಅಲ್ಲಿಯ ಅಧ್ಯಾಪಕರು ಇವರನ್ನು ಬಹು ಮೆಚ್ಚಿದರು. ಇವರ ದೀರ್ಘವಾದ ವಾಚನವೂ ವಿಷಯಗ್ರಹಣ ಶಕ್ತಿಯೂ ಅಧ್ಯಾಪಕರನ್ನು ಮುಗ್ಧಗೊಳಿಸಿದವು. ೧೯೦೬ರಲ್ಲಿ ಪಾರ್ಲಿಮೆಂಟಿನ ಚುನಾವಣೆಯಾಯಿತು. ಹೊಸದಾಗಿ ಬಂದ ಮಂತ್ರಿಮಂಡಳಗಳ ವಿಷಯವಾಗಿ ಇವರು ಮಾಡಿದ ತರ್ಕಗಳು ಶಾಲೆಯಲ್ಲಿಯೇ ಕ್ರಾಂತಿಯನ್ನುಂಟುಮಾಡಿದವು. **ಗ್ಯಾರಿಬಾಲ್ಡಿಯ** ಚರಿತ್ರೆಯೂ ಅವನ ಕ್ರಾಂತಿಕಾರಕ ವಿಚಾರಗಳೂ ಜವಾಹರರ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವನ್ನುಂಟುಮಾಡಿದವು. ಇಟಲಿಗೂ ಭಾರತಕ್ಕೂ ಏನೂ ವೈಷಮ್ಯವು ಕಾಣಲಿಲ್ಲ. ಭಾರತದಲ್ಲಿಯೂ ಇಂಥ ಕ್ರಾಂತಿಯು ಏಕಾಗಬಾರದೆಂದು ತಮ್ಮಷ್ಟಕ್ಕೆ ತಾವೇ ಅನೇಕ ಸಲ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಿದ್ದರಂತೆ.

ಈ ಶಾಲೆಯಲ್ಲಿ **ಎಂಟ್ರೆನ್ಸ** ಪರೀಕ್ಷೆಯನ್ನು ಪಾಸಾದರು. ತಮ್ಮ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕೆಂಬ್ರಿಜ ವಿಶ್ವವಿದ್ಯಾಲಯದ **ಟ್ರನಿಟಿ** ಕಾಲೇಜಿನಲ್ಲಿ ಹೆಸರು ಹಚ್ಚಿದರು. ಪ್ರಾಣಿಶಾಸ್ತ್ರ, ವನಸ್ಪತಿ ಶಾಸ್ತ್ರ, ರಸಾಯನಶಾಸ್ತ್ರಗಳಲ್ಲಿ ಪ್ರಾವೀಣ್ಯತೆಯನ್ನು ತೋರಿಸಿ ಸನ್ಮಾನ ಪೂರ್ವಕವಾಗಿ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇವರಲ್ಲಿ ರುವ ಅಸಾಧಾರಣವಾದ ಯೋಗ್ಯತೆಯನ್ನು ಕಂಡು ಯುನಿವ್ಹರ್ಸಿಟಿ ಯವರು, ಪರೀಕ್ಷೆಯಿಲ್ಲದೆ ಎಂ. ಎ. ಆನರ್ಸ ಪದವಿಯನ್ನು ಕೊಟ್ಟರು. ಡಾ। ಕಿಚಲು, ಡಾ। ಮುಹಮ್ಮದ, ಶ್ರೀ ಶರವಾಣಿ, ಶ್ರೀ ಎಂ. ಎಂ. ಖ್ವಾಜಾ ಮೊದಲಾದವರು ಇವರೊಡನೆಯೇ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಲಿದ್ದರು. ಶ್ರೀ ಜೇ. ಎ. ಸೇನಗುಪ್ತರು ಕೂಡ ಇದೇ ಸಮಯದಲ್ಲಿಯೇ ಇಲ್ಲಿಂದಲೇ ಹೊರಬಿದ್ದರು. ೧೯೧೦ರಲ್ಲಿ ಪದವೀಧರ ರಾದನಂತರ ಮುಂದೆ ಯಾವ ಮಾರ್ಗವನ್ನು ಹಿಡಿಯಬೇಕೆಂಬುದೇ ಮುಖ್ಯ ಪ್ರಶ್ನೆ ಬಂದಿತು. ರಾಜಕೀಯ ವಿಚಾರಗಳು ಅವರ ಮನಸ್ಸನ್ನೆಲ್ಲ ವ್ಯಾಪಿಸಿದ್ದವು. ವಕೀಲಿಯ ಅಭ್ಯಾಸವನ್ನು ಮಾಡಬೇಕೆಂದು ತಂದೆಯವರ ಅಪೇಕ್ಷೆ. ಅವರ ಇಚ್ಛೆಯೇ ಪೂರ್ಣವಾಯಿತು.

ಕಾಯಿದೆಗಳ ಅಭ್ಯಾಸಕ್ಕಾಗಿ ಲಂಡನ್ನದ **ಇನರಟೆಂಪಲ**ವನ್ನು ಪ್ರವೇಶಿಸಿದರು. ಆದರೆ ಇವರ ಮನಸ್ಸೆಲ್ಲವನ್ನೂ ರಾಜಕಾರಣವು ಎಳೆದು ಕೊಂಡಿತ್ತು. ಮ್ಯಾಝಿನಿ, ಗ್ಯಾರಿಬಾಲ್ಡರ ಚರಿತ್ರೆಗಳು ಅವರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿದ್ದವು. ಅನೇಕ ಬಗೆಯ ರಾಜ್ಯ ಶಾಸ್ತ್ರಾಧ್ಯಯನವನ್ನು ಮಾಡಿದರು. ಅಂದಿನ ಯುರೋಪದ ಜೀವನ ವನ್ನು **ಫೆಬಿಯನ್** ಚಳವಳಿಯೂ, **ಸಾಮ್ಯವಾದದ** ಚಳವಳಿಯೂ ವ್ಯಾಪಿಸಿದ್ದವು. ಆ ತತ್ವಗಳನ್ನು ಅಭ್ಯಾಸ ಮಾಡಿದರು. ಅವುಗಳು ಜವಾ ಹರಲಾಲರ ಮನಸ್ಸನ್ನು ಮುಗ್ಧಗೊಳಿಸಿದವು. ಅವರ ಅಂತಃಕರಣದಲ್ಲಿ ಸಾಮ್ಯವಾದದ ಬೀಜಗಳು ಬಿತ್ತಲ್ಪಟ್ಟವು. **ಐರ್ಲೆಂಡಿನ** ರಾಜಕೀಯ ಚಳವಳಿಯೂ ಇವರ ಮನಸ್ಸನ್ನು ಆಕರ್ಷಿಸಿತು. ಇವರು ೧೯೧೦ರಲ್ಲಿ ಐರ್ಲೆಂಡಿಗೆ ಹೋದಾಗ **ಸಿನಫೇನ** ಚಳವಳಿಯೂ ಭರದಲ್ಲಿತ್ತು. ಕುತೂ

ಹಲಪೂರ್ವಕವಾಗಿ ಅದನ್ನು ನಿರೀಕ್ಷಿಸಿದರು. ಈ ಎಲ್ಲ ವಿಚಾರಗಳಿಂದ ತುಂಬಿದ ಈ ತರುಣಭಾರತೀಯರು ಭಾರತದ ವಿಷಯವಾಗಿ ಸವಿಗನಸು ಗಳನ್ನು ಕಾಣುತ್ತಿದ್ದರು. ೧೯೧೨ರಲ್ಲಿ **ಬಾರ ಎಟ್ ಲಾ** ಪರೀಕ್ಷೆ ಯಲ್ಲಿ ಸಾಮಾನ್ಯತರಗತಿಯಲ್ಲಿ ತೇರ್ಗಡೆ ಹೊಂದಿದರು. ಪರೀಕ್ಷೆಯನ್ನು ಮುಗಿಸಿಕೊಂಡು ಭಾರತಕ್ಕೆ ಮರಳಿದರು. ಬಂದೊಡನೆಯೇ ಬಂಕೀಪುರ ಕಾಂಗ್ರೆಸ್ಸಿಗೆ ಹೋದರು.

ತಂದೆಯವರೊಂದಿಗೆ ವಕೀಲಿಯನ್ನು ಪ್ರಾರಂಭಿಸಿದರು. ಸ್ವಾತಂತ್ರ್ಯಕ್ಕಾಗಿ ಇವರ ಅಂತಃಕರಣವು ತಳಮಳಗೊಳ್ಳುತ್ತಿತ್ತು. ಆದರೆ ಮಾರ್ಗವು ಕಾಣಲೊಲ್ಲದು. ಇಂಥ ಸ್ಥಿತಿಯಲ್ಲಿ ಆಯುಷ್ಯವು ಸಾಗಿತು. ೧೯೧೪ರಲ್ಲಿ ಫೀಜಿ ದ್ವೀಪಕ್ಕೂ ಆಫ್ರಿಕಾಕ್ಕೂ ಹೋದ ಭಾರತೀಯರಿಗೆ ಧನ ಸಹಾಯ ಮಾಡಬೇಕೆಂದು ದೇ. ಭ. ಗೋಖಲೆಯವರು ಪ್ರಕಟನೆಯನ್ನು ಹೊರಡಿಸಿದರು. ೫೦ ಸಾವಿರ ರೂಪಾಯಿಗಳನ್ನು ಕೂಡಿಸಿ ಕಳಿಸಿಕೊಟ್ಟರು.

ಮಹಾಯುದ್ಧವು ಪ್ರಾರಂಭವಾಯಿತು. ಭಾರತೀಯ ಮುಖಂಡರಾದ ಲೋಕಮಾನ್ಯರೂ ಆನೀಬಿಝಂಟರೂ ಹೋಮರೂಲ ಚಳವಳಿಯನ್ನು ಹೂಡಿದ್ದರು. ಜವಾಹರರಿಗೆ ಬಾಹುಸ್ಫುರಣವಾಗಹತ್ತಿತು. ನಿರ್ಜೀವಿಯಾದ ವಕೀಲಿ ಕ್ಷೇತ್ರದಿಂದ ಮೆಲ್ಲನೆ ರಾಜಕೀಯ ಕ್ಷೇತ್ರದಲ್ಲಿ ಕಾಲಿಟ್ಟರು. ಇವರ ತಂದೆಯವರೂ ಈ ಚಳವಳಿಯಲ್ಲಿ ಧುಮುಕಿದುದರಿಂದ ಇವರಿಗೆ ಮತ್ತಿಷ್ಟು ಅನುಕೂಲವಾಯಿತು. ಸಂಯುಕ್ತಪ್ರಾಂತದಲ್ಲಿ ಹೋಮರೂಲ ಚಳವಳಿಗೆ ಒಳ್ಳೇ ಕಳೆಯೇರಿತು. ಜವಾಹರಲಾಲರು ರಾಜಕೀಯ ಕ್ಷೇತ್ರದಲ್ಲಿ ಮಿನುಗಹತ್ತಿದರು. ಸಂಯುಕ್ತಪ್ರಾಂತದ ನಾಯಕತ್ವವು ಮೆಲ್ಲನೆ ಇದುರು ನೋಡತೊಡಗಿತು.

೧೯೨೦ರಲ್ಲಿ ಅಯೋಧ್ಯಾ ರೈತರ ಚಳವಳಿಯು ಪ್ರಾರಂಭವಾಯಿತು. ರೈತರು ಬಂದು ಗೋಳನ್ನು ಹೇಳಹತ್ತಿದರು. ಜವಾಹರಲಾಲರ ಅಂತಃಕರಣವು ಕರಗಿ ನೀರಾಯಿತು. ಚಳವಳಿಗೆ ಕೈಹಾಕಿದರು. ಸಂಘಟನೆಯನ್ನು ಮಾಡಿದರು. ನಿದ್ದೆನೀರಡಿಕೆಗಳಿಲ್ಲದೆ ರೈತರೊಡನೆ ಬಿಸಿಲಲ್ಲಿ ತಿರುಗಾಡಿದರು. ಚಳವಳಿಯನ್ನು ಶಿಖರಕ್ಕೆ ಮುಟ್ಟಿಸಿಯೇಬಿಟ್ಟರು.

ಚಳವಳಿಯು ಯಶಸ್ವಿಯಾಯಿತು. ಚಳವಳಿಯ ಪರಿಣಾಮವಾಗಿ **ಅಯೋಧ್ಯಾ ಟೆನನ್ಸಿ ಬಿಲ್ಲನ್ನು** ಪಾಸು ಮಾಡುವ ಭಾಗ ಬಿತ್ತು. ಇದರಿಂದ ರೈತರ ವಿಶ್ವಾಸವು ಜವಾಹರರ ಮೇಲೆ ಪೂರ್ಣ ಕುಳಿತಿತು.

ಇದೇ ಸಮಯದಲ್ಲಿ ರೌಲೆಟ್ ಕಾಯಿದೆಯು ಭಾರತದಲ್ಲಿ ಹಾಹಾಕಾರವನ್ನುಂಟುಮಾಡಿತು. ಮಹಾತ್ಮಾ ಗಾಂಧಿಯವರ ಸತ್ಯಾಗ್ರಹ ಆಂದೋಲನ, ಹರತಾಳ, ದಿಲ್ಲಿ ಮತ್ತು ಅಮೃತಸರಗಳಲ್ಲಿಯ ಗುಂಡಿನ ಸುರಿಮಳೆ, ಜಾಲಿಯನ್‌ವಾಲಾಬಾಗಿನ ಕೊಲೆ, ದಂಡಿನ ಆಳಿಕೆ ಇವೆಲ್ಲವುಗಳನ್ನು ಕಂಡು ಬ್ರಿಟಿಶರ ಕ್ರೂರ ಕೃತಿ ಹಾಗು ಅವರ ಕಾಡು ಸಂಸ್ಕೃತಿಯ ಬಗ್ಗೆ ಜವಾಹರಲಾಲರಲ್ಲಿ ತೀವ್ರವಾದ ಅನಾದರವೂ ಸಂತಾಪವೂ ಉಂಟಾಯಿತು. ಮಿತವಾದಿಗಳ ಬಗ್ಗೆ ಇವರಲ್ಲಿ ಹೇಯ ಬುದ್ಧಿಯು ಬಲಿಯಹತ್ತಿತು. **ಪ್ರತ್ಯಕ್ಷ ಕಾರ್ಯಕ್ರಮವನ್ನು ಕೈಕೊಳ್ಳದೆ ಗೊತ್ತುವಳಿಗಳಿಂದ ಏನೂ ಪ್ರಯೋಜನವಿಲ್ಲೆಂದು** ಇವರಿಗೂ ಮೋತಿಲಾಲರಿಗೂ ಮೇಲಿಂದ ಮೇಲೆ ಚಕಮಕಿಗಳಾಗಹತ್ತಿದವು.

ಪಂಜಾಬಿನ ಕೊಲೆಯ ಬಗ್ಗೆ ನಿಯಮಿಸಿದ ಕಾಂಗ್ರೆಸ ವಿಚಾರಣಾ ಸಮಿತಿಯಲ್ಲಿ ದೇ. ಬ. ದಾಸರ ಸಲಹೆಯ ಮೇರೆಗೆ ಅದರ ಸಹಾಯಕರಾಗಿ ಕಾರ್ಯ ಮಾಡಿದರು. ಈ ಕಾರ್ಯವು ಜವಾಹರಲಾಲರನ್ನು ರಾಜಕೀಯ ಕ್ಷೇತ್ರಕ್ಕೆ ಎಳದೇ ಬಿಟ್ಟಿತು. ಅಸಹಕಾರ ಆಂದೋಲನದಲ್ಲಿ ಪಿತಾಪುತ್ರರು ಧುಮುಕಿಯೇ ಬಿಟ್ಟರು. ಮಹಾತ್ಮರು ಮಾಡಿತೋರಿಸಿದ ಚಮತ್ಕೃತಿಗಳಲ್ಲಿ ಮೋತಿಲಾಲರು ಆಂದೋಲನದಲ್ಲಿ ಬಂದುದೂ ಒಂದು.

ಬಹು ದಿವಸಗಳಿಂದ ತಲೆಯಲ್ಲಿ ತುಂಬಿದ ವಿಚಾರಗಳಿಗೆ ಅವಕಾಶ ದೊರೆಯಿತು. ಮಹಾತ್ಮಾ ಗಾಂಧಿಯವರ ಬಲಗೈಯಾದರು. ೧೯೨೧ರಲ್ಲಿ ಇವರನ್ನು ೬ ತಿಂಗಳ ವರೆಗೆ ಸೆರೆಮನೆಗೆ ಕಳಿಸಿತು.

ಜೇಲಿನಿಂದ ಬಂದೊಡನೆಯೇ ಮತ್ತೆ ಅದೇ ಆಟ. ಇಮ್ಮಡಿ ಉತ್ಸಾಹದಿಂದ ಕಾರ್ಯಕ್ಕೆ ಪ್ರಾರಂಭಿಸಿದರು. ಪಂಡಿತರು ಸ್ವತಃ ಸರ್ಪಗಾವಲಿಗೆ ನಿಂತರು. ಕೂಡಲೆ ಚಳವಳಿಯು ಉಗ್ರಸ್ವರೂಪವನ್ನು ಧಾರಣ ಮಾಡಿತು. ೧೯೩೦ರಲ್ಲಿ ಜವಾಹರಲಾಲರು ಮತ್ತೆ ಹಿಡಿಯಲ್ಪಟ್ಟರು.

೨೮ ತಿಂಗಳ ಶಿಕ್ಷೆಯೂ ೫೦೦ ರೂ. ದಂಡವೂ ಆಯಿತು. ೧೯೩೩ರ ಪ್ರಾರಂಭಕ್ಕೆ ಇವರನ್ನು ಬಿಟ್ಟುಬಿಟ್ಟರು.

ಇದೇ ಸಮಯದಲ್ಲಿ ನಾಭಾದ ಮಹಾರಾಜನು ಪಟ್ಟದಿಂದ ತಳ್ಳಲ್ಪಟ್ಟಿದ್ದನು. ಅದರಿಂದ **ಅಕಾಲಿ ಸತ್ಯಾಗ್ರಹ** ಪ್ರಾರಂಭವಾಗಿತ್ತು. ಅದನ್ನು ನೋಡುವದಕ್ಕಾಗಿ ನಾಭಾಕ್ಕೆ ಹೋದರು. ೧೪೪ ನೇ ಕಲಮಿನ ಪ್ರಕಾರ ಅವರು ಸಂಸ್ಥಾನದಲ್ಲಿ ಸಂಚರಿಸಕೂಡದೆಂದು ಆಜ್ಞೆಯು ಹೊರಟಿತು. ತಾವು ಬಂದ ಉದ್ದೇಶವನ್ನು ವಿವರಿಸಿದರೂ ಕೇಳಲಿಲ್ಲ. ಹಿಡಿಯಲ್ಪಟ್ಟರು. ೧೪೪–೧೮೮ ನೇ ಕಲಮುಗಳ ಪ್ರಕಾರ ಖಟ್ಲೆಯು ನಡೆಯಿತು. ತಪ್ಪಿತಸ್ಥರೆಂದು ನಿರ್ಣಯವೇ ಆಯಿತು. ಎರಡೂ ವರೆ ವರ್ಷ ಶಿಕ್ಷೆಯೂ ವಿಧಿಸಲ್ಪಟ್ಟಿತು. ಆದರೆ ಅವರನ್ನು ಸಂಸ್ಥಾನದ ಹೊರಕ್ಕೆ ತಂದು ಬಿಟ್ಟುಬಿಟ್ಟರು. ಯಾಕೆ ಬಿಟ್ಟರು, ಏನು ಅಪ್ಪಣೆಯಾಗಿದೆ ಎಂಬುದು ತಿಳಿಯಲಿಲ್ಲ; ಇನ್ನೂವರೆಗೂ ತಿಳಿದಿಲ್ಲ.

೧೯೨೩ ರಲ್ಲಿ ಜವಾಹರಲಾಲರು ಅಲ್ಹಾಬಾದ ಮುನಸೀಪಾಲ್ಟಿಯ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ತಮ್ಮ ಕಾರ್ಯವನ್ನು ಒಳ್ಳೇ ದಕ್ಷತೆಯಿಂದ ನಡೆಯಿಸಿದರು. ಕೋಕೋನಾಡಾ ಕಾಂಗ್ರೆಸ್ಸಿನಲ್ಲಿ ಹಿಂದುಸ್ಥಾನೀ ಸೇವಾದಲಕ್ಕೆ ಜನ್ಮವನ್ನು ಕೊಟ್ಟರು. ಡಾ. ಹರ್ಡೀಕರರ ಕಾರ್ಯಕ್ಕೆ ನೆರವಾಗಿ ನಿಂತರು.

೧೯೨೬ ರ ಆರಂಭದಲ್ಲಿ ಹೆಂಡತಿಯ ಪ್ರಕೃತಿಯು ತೀರ ಕೆಟ್ಟದ್ದರಿಂದ ಡಾಕ್ಟರರ ಸಲಹೆಯ ಮೇರೆಗೆ, ಸ್ವಿಜ್ಝರ್ಲಂಡಕ್ಕೆ ತೆರಳಿದರು. ಅವರ ಪತ್ನಿಯ ಪ್ರಕೃತಿಯೂ ಸ್ವಲ್ಪ ಸುಧಾರಿಸಿತು. ರಾಷ್ಟ್ರೀಯ ಸಭೆಯ ಆಜ್ಞೆಯಂತೆ, ಭಾರತದ ಪ್ರತಿನಿಧಿಗಳೆಂದು ೧೯೨೭ ರಲ್ಲಿ ಬ್ರುಸೆಲ್ಸದಲ್ಲಿ ಜರುಗಿದ **ಸಾಮ್ರಾಜ್ಯ ವಿರೋಧಿ ಸಮ್ಮೇಳನಕ್ಕೆ** ಹೋದರು. ಭಾರತದ ದುರ್ದೆಶೆಯನ್ನು ವಿವರಿಸಿದರು. ಮತ್ತು ಆ ಸಮ್ಮೇಳನದ ಐದು ಜನ ಅಧ್ಯಕ್ಷರಲ್ಲಿ ಇವರೂ ಒಬ್ಬರು ಆರಿಸಲ್ಪಟ್ಟರು. (ಆಯಿನಸ್ಟೀನ, ರೋಮನ್ ರೊಲಾ, ಶ್ರೀಮತಿ ಸನಾಯತಸೇನ, ಜಾರ್ಜ ಲ್ಯಾಂಸಬರಿ,

ಪ. ಜವಾಹರಲಾಲ ನೆಹರು.) **ಸೋವಿಯಟ (ರಶಿಯಾದ) ಸರಕಾರದ** ಆಮಂತ್ರಣದ ಮೇರೆಗೆ ರಶಿಯಾಕ್ಕೆ ಹೋದರು. ಸಾಮ್ಯವಾದಿ ಸರಕಾರದ ೧೦ ನೇ ವರ್ಷದ ಉತ್ಸವದಲ್ಲಿ ಭಾಗವಹಿಸಿದರು. ಸಾಮ್ಯವಾದದ ವ್ಯಾವಹಾರಿಕ ಸ್ವರೂಪವನ್ನು ಸೂಕ್ಷ್ಮ ರೀತಿಯಿಂದ ನಿರೀಕ್ಷಿಸಿದರು. ಯುರೋಪದ ಸಾಮ್ರಾಜ್ಯವಾದೀ ರಾಷ್ಟ್ರಗಳ ಕುಟಿಲತಂತ್ರಗಳನ್ನು ಚನ್ನಾಗಿ ಅಭ್ಯಾಸಮಾಡಿ ಭಾರತಕ್ಕೆ ಮರಳಿಬಂದರು.

ಭಾರತಕ್ಕೆ ಮರಳಿ ಬಂದಾಗ ಮೊದಲಿನ ಜವಾಹರಲಾಲರಿರಲಿಲ್ಲ. ಅವರು ನವವಿಚಾರಗಳಿಂದ ತುಂಬಿದ ದಿವ್ಯತೇಜೋಮಯವ್ಯಕ್ತಿಗಳಾಗಿದ್ದರು. ಭಾರತವು ಹೊಸತನವನ್ನು ಅಪೇಕ್ಷಿಸುತ್ತಿತ್ತು. **ಝಾಂಸಿ**ಯಲ್ಲಾದ ಸಂಯುಕ್ತಪ್ರಾಂತದ ರಾಜಕೀಯ ಸಮ್ಮೇಲನ, ಪಂಜಾಬದ ರಾಜಕೀಯ ಸಮ್ಮೇಲನಗಳಲ್ಲಿ ಅವರು ಒಳ್ಳೇ ಉತ್ಸಾಹದಿಂದ ತಮ್ಮ ವಿಚಾರಗಳನ್ನು ಜನರ ಮುಂದೆ ಇಟ್ಟರು. ಇವರ ವಿಚಾರಗಳೆಲ್ಲವೂ ಸಾಮ್ಯವಾದದಿಂದ ತುಂಬಿತುಳುಕುತ್ತಿದ್ದವು. ಇವರ ಒಲುಮೆಯಿಂದ ಯುವಕರ ಚಳವಳಿಗೆ ಪುಟಕೊಟ್ಟಂತಾಯಿತು. ಯುವಕರು ಇವರೇ **ತಮ್ಮ ನಾಯಕರೆಂದು** ಭಾವಿಸಹತ್ತಿದರು. ಬಂಗಾಲ ಪ್ರಾಂತದ, ಮುಂಬಯಿಪ್ರಾಂತದ ಯುವಕ ಪರಿಷತ್ತಿನ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣಗಳಲ್ಲಿ ಇವರ ಕ್ರಾಂತಿಕಾರಕ ವಿಚಾರಗಳು ವಿಸ್ತಾರವಾಗಿ ಪ್ರಕಟವಾದವು. ಈ ವಿಚಾರಗಳು ರಾಷ್ಟ್ರದ ಮನಸ್ಸನ್ನು ತಮ್ಮ ಕಡೆಗೆ ಸೆಳೆದುಕೊಂಡವು. ೧೯೨೭ರಲ್ಲಿ ಜರುಗಿದ ಹಿಂದುಸ್ಥಾನೀ ಸೇವಾದಲದ ಹಾಗು ಮದ್ರಾಸದಲ್ಲಿ ಜರುಗಿದ ಮೊದಲನೆಯ ಪ್ರಜಾರಾಜ್ಯ ಸಂಘದ ಅಧ್ಯಕ್ಷರಾದರು.

೧೯೨೭ರಲ್ಲಿ ನಡೆದ ರಾಷ್ಟ್ರೀಯ ಸಭೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯವೇ ಹಿಂದುಸ್ಥಾನದ ಧ್ಯೇಯವೆಂಬ ಗೊತ್ತುವಳಿಯನ್ನು ಪಾಸುಮಾಡಿಕೊಂಡರು. ಇದರಿಂದ ಭಾರತೀಯ ಇತಿಹಾಸದಲ್ಲಿಯೇ ನವಮನ್ವಂತರವು ಪ್ರಾರಂಭವಾಯಿತು.

ಜವಾಹರಲಾಲರ ಕಾರ್ಯಕ್ಷೇತ್ರವು ವಿಸ್ತಾರವಾಗಹತ್ತಿತು.

ಯುವಕರ ಸಂಘಟನೆಯನ್ನು ಕೈಕೊಂಡಂತೆಯೇ ಕೂಲಿಕಾರರ ಸಂಘಟನೆಗೂ ಕೈಹಾಕಿದರು. ಅವರ ಸಮಸ್ಯೆಗಳನ್ನು ಅಭ್ಯಾಸ ಮಾಡಿದರು. ನಾಗಪೂರದಲ್ಲಿ ಜರುಗಿದ ೧೯೨೯ನೇ ಇಸ್ವಿಯ ಕೂಲಿಕಾರರ ಕಾಂಗ್ರೆಸ್ಸಿಗೆ ಅಧ್ಯಕ್ಷರಾಗಿ ಬಹಳ ಕುಶಲತೆಯಿಂದ ಅವರ ಚಳವಳಿಯನ್ನು ಮುಂದು ವರಿಸಿದರು. ಪ್ರಾಂತೀಯ ಮುಖಂಡರಾಗಿದ್ದ ಜವಾಹರಲಾಲರು ಈಗ ಭಾರತೀಯ ಮುಖಂಡರಾಗಿ ಬೆಳಗಹತ್ತಿದರು.

೧೯೨೮ರಲ್ಲಿ **ಸ್ವಾತಂತ್ರ್ಯ ಸಂಘವನ್ನು** ಸ್ಥಾಪಿಸಿದರು. ಅವರ ಚಳವಳಿಗೆ ಪ್ರಾರಂಭವಾಯಿತು. ಸಾಯಮನ್ ಕಮೀಶನ್ ಬಂದಿತು. ಬಹಿಷ್ಕಾರ ಚಳವಳಿಯೂ ಪ್ರಖರವಾಯಿತು. ದಬ್ಬಾಳಿಕೆಯೂ ಮಿತಿ ಮೀರಿತು. ಈ ಚಳವಳಿಯಲ್ಲಿ ಸೈನಿಕರ ಕುದುರೆಯ ತುಳಿತವನ್ನೂ ಪೋಲೀಸರ ಲಾಠಿ ಏಟುಗಳನ್ನೂ ಲೆಕ್ಕಿಸದೆ, **ಜನನಾಯಕರಾಗಿ ನಿಂತರು**.

ತಮ್ಮ ಮನಸ್ಸಿನ ವಿರುದ್ಧವಿದ್ದರೂ ರಾಷ್ಟ್ರದ ಆಜ್ಞೆಯನ್ನು ಮನ್ನಿಸಿ, ನೆಹರೂ ವರದಿಯನ್ನು ಸಿದ್ಧಪಡಿಸುವ ಕಾರ್ಯದಲ್ಲಿ ತಂದೆಯವರಿಗೆ ಸಂಪೂರ್ಣವಾಗಿ ನೆರವಾದರು. ಯೋಗ್ಯಸಮಯ ಒದಗಿದ ಕೂಡಲೆ ಅವರ ವಿರುದ್ಧವಾಗಿ ಬಂಡನ್ನು ಎಬ್ಬಿಸಿದರು. ಕಲಕತ್ತೆಯ ಕಾಂಗ್ರೆಸ್ಸಿನಲ್ಲಿ ಈ ವರದಿಯು ಸ್ವೀಕರಿಸಲ್ಪಡುವದಿತ್ತು. ಸಂಪೂರ್ಣ ಸ್ವಾತಂತ್ರ್ಯಕ್ಕಿಂತಲೂ ಭಾರತವು ಕೆಳಗಿಳಿಯಬಾರದೆಂಬುದೇ ಇವರ ಆಗ್ರಹ. ತಂದೆ-ಮಕ್ಕಳ ಜಗಳವು ವಿಕೋಪಕ್ಕೆ ಹೋಗುವ ಲಕ್ಷಣಗಳು ಕಂಡವು. ರಾಜಕೀಯ ಸನ್ಯಾಸವನ್ನು ವಹಿಸಿದ ಮಹಾತ್ಮರು ಸನ್ಯಾಸವನ್ನು ತ್ಯಜಿಸಿ ರಾಜಕೀಯ ರಂಗಕ್ಕೆ ಬಂದರು.

೧೯೨೯ನೇ ಇಸ್ವಿಯಲ್ಲಿ ರಾಷ್ಟ್ರವು ವಿವಿಧ ಚಟುವಟಿಕೆಗಳಿಂದ ತುಂಬಿತು. ಸರಕಾರದ ಘೋಷಣೆ ಪ್ರತಿಘೋಷಣೆಗಳಾದವು. ಜಗಪ್ರಸಿದ್ಧವಾದ **ಲಾಹೋರ ಕಾಂಗ್ರೆಸ** ಬಂದಿತು. ತಂದೆಯು ಮನೆಯ ಅಧಿಕಾರವನ್ನು ಮಗನಿಗೆ ಒಪ್ಪಿಸುವಂತೆ **ಮೋತಿಲಾಲರು ಜವಾಹರಲಾಲರಿಗೆ ಹಿಂದೀರಾಷ್ಟ್ರವನ್ನು ಒಪ್ಪಿಸಿದರು**. ಈ ಅದ್ಭುತ

ಸೋಟವು ಬಹಳ ರೋಮಾಂಚಕಾರಿಯಾಗಿತ್ತು. ಸ್ವಾತಂತ್ರ್ಯ ಪ್ರಿಯರಾದ ಜವಾಹರಲಾಲರು ಸ್ವಾತಂತ್ರ್ಯ ಸಂಗ್ರಾಮದ ಕಹಳೆಯನ್ನು ಊದಿಬಿಟ್ಟರು.

ಸ್ವಾತಂತ್ರ್ಯದ ಸಂಗ್ರಾಮವು ಅದ್ಭುತವಾಗಿ ಜರುಗಿ, ಗಾಂಧಿ ಆಯರ್ವಿನ ಒಪ್ಪಂದದಲ್ಲಿ ಪರಿಣಮಿಸಿತು. ಆದರೆ ಸಂಗ್ರಾಮವು ಬಹು ದಿವಸ ಬಾಳಲಿಲ್ಲ. ಸಂಯುಕ್ತಪ್ರಾಂತದಲ್ಲಿ ಸರಕಾರದವರು ನಡೆಯಿಸಿದ ದಬ್ಬಾಳಿಕೆಗೆ ಜವಾಹರಲಾಲರು ಆವ್ಹಾನವಿತ್ತರು. ಆರ್ಥಿಕ ಕರನಿರಾಕರಣೆಯು ಕೈಕೊಳ್ಳಲ್ಪಟ್ಟಿತು. ಮತ್ತು ಜವಾಹರಲಾಲರು ಸೆರೆಮನೆಯನ್ನು ಕಂಡರು. ಪುನಃ ಸತ್ಯಾಗ್ರಹವು ಮುಂದರಿಸಲ್ಪಟ್ಟಿತು. ಈ ಸ್ವಾತಂತ್ರ್ಯವೀರನ ಅದ್ಭುತವಾದ ತೇಜಸ್ಸೂ, ಕಾರ್ಯಶಕ್ತಿಯೂ ಈ ಸಂಗ್ರಾಮದಲ್ಲಿ ನಿದರ್ಶನಕ್ಕೆ ಬಂದವು.

ಸತ್ಯಾಗ್ರಹ ಚಳವಳಿಯು ನಿಲ್ಲಿಸಲ್ಪಟ್ಟನಂತರ ಜವಾಹರಲಾಲರು ಪತ್ನಿಯ ಆರೋಗ್ಯಕ್ಕಾಗಿ ಯುರೋಪದ ಯಾತ್ರೆಯನ್ನು ಕೈಕೊಂಡರು. ದುರ್ದೈವದಿಂದ ಇವರ ಪತ್ನಿಯು ಇವರನ್ನು ಬಿಟ್ಟು ಸ್ವರ್ಗಕ್ಕೆ ತೆರಳಿದಳು. ಯುರೋಪದಿಂದ ಮರಳಿ ಬಂದೊಡನೆಯೇ ಮತ್ತೆ ರಾಷ್ಟ್ರವು ೧೯೩೬ರಲ್ಲಿ ರಾಷ್ಟ್ರಾಧಿಪತಿಯನ್ನು ಮಾಡಿತು. ರಾಷ್ಟ್ರದಲ್ಲಿ ಉಂಟಾದ ಉಗ್ರವಾದಿ, ಸೌಮ್ಯವಾದಿಗಳಿಗೆ ಇವರೊಬ್ಬರೇ ಸೇತುವೆಯಂತಿರುವರು. ಇವರನ್ನೇ ರಾಷ್ಟ್ರವು ಮತ್ತೆ ಫೈಜಪೂರ ಕಾಂಗ್ರೆಸ್ಸಿಗೆ ಅಧ್ಯಕ್ಷರನ್ನಾಗಿ ಆರಿಸಿತು. ಫೈಜಪೂರ ಕಾಂಗ್ರೆಸ್ಸಿನ ಅಧ್ಯಕ್ಷ ಸ್ಥಾನದಲ್ಲಿದ್ದು ಇವರು ಮಾಡಿದ ಸೇವೆಯು ಅಪ್ರತಿಮವಾಗಿದೆ. ಚುನಾವಣೆಯಲ್ಲಿ ಸರಕಾರದವರು ಒಡ್ಡಿದ ಬಲೆಯನ್ನು ಹರಿದೊಗೆದು ಸರಕಾರವನ್ನು ಸೋಲಿಸಿ, ಅವರ ಬೆರಳನ್ನು ಅವರ ಕಣ್ಣಲ್ಲಿಯೇ ಚುಚ್ಚಿದ ಮಹಾವೀರರು.

ಈ ಚುನಾವಣೆಗಳು ಮುಗಿದನಂತರ ರಾಷ್ಟ್ರದಲ್ಲಿ ವ್ಯವಸ್ಥೆಯನ್ನುಂಟುಮಾಡಿ ಪ್ರಕೃತಿಯ ಅಸ್ವಸ್ಥತೆಯ ಮೂಲಕ ಮತ್ತೆ ೩೮ರಲ್ಲಿ ಯುರೋಪದ ಪ್ರವಾಸವನ್ನು ಕೈಕೊಂಡರು. ತೇಜಸ್ಸು ಎಲ್ಲಿದ್ದರೇನು? ಬೆಳಗದೆ ಬಿಡುವದೆ? ವಿಶ್ರಾಂತಿಗೆಂದು ಹೋಗಿದ್ದರೂ ಅವರು ಸುಮ್ಮನೆ

ಕೂಡಲಿಲ್ಲ. ಇಂಗ್ಲಂಡ, ಫ್ರಾನ್ಸ, ಬೆಲ್ಜಿಯಮ್, ಸ್ಪೇನ ಮೊದಲಾದ ದೇಶಗಳಲ್ಲಿ ಸಂಚರಿಸಿ, ಭಾರತದ ವಿಷಯಕ್ಕೆ ಜಾಗೃತೆಯನ್ನುಂಟುಮಾಡಿದರು. ಬ್ರಿಟಿಶ ಜನಾಂಗಕ್ಕೆ ಎಚ್ಚರ ಕೊಟ್ಟರು. ಹೊಸ ಘಟನೆಯನ್ನು ಭಾರತವು ಧ್ವಂಸ ಮಾಡುವದೆಂದು ಸಾರಿದರು. ಮೊನ್ನೆ ಮೊನ್ನೆ ಮರಳಿ ಬಂದಿದ್ದಾರೆ.

ಭಾರತವು ಆಶಾದೃಷ್ಟಿಯಿಂದ ಅವರ ಕಡೆಗೆ ನೋಡುತ್ತಲಿದೆ. ಮುಂದಿನ ಯುಗದ ನಾಯಕರು ಅವರೇ ಎಂದು ನಿರ್ಣಯವಾಗಿ ಹೋಗಿದೆ. ದೇವರು ಈ ಸ್ವಾತಂತ್ರ್ಯವೀರನಿಂದ ಭಾರತದ ಬಂಧವಿಮೋಚನೆಯನ್ನು ಮಾಡಿಸಲೆಂದು ಆತನನ್ನು ಪ್ರಾರ್ಥಿಸುತ್ತೇವೆ.



# ಪಂ. ಜವಾಹರಲಾಲರ ರಾಜಕಾರಣ

ಪಂಡಿತ ಜವಾಹರಲಾಲರು ಭಾರತೀಯ ರಾಜಕೀಯ ರಂಗದಲ್ಲಿ ಉದಯೋನ್ಮುಖತಾರೆಯಂತೆ ಹೊಳೆಯುತ್ತಿರುವದು ೧೯೨೦ರಿಂದ. ಮಹಾತ್ಮರ ಅನುಯಾಯಿಗಳಾಗಿ ಅಸಹಕಾರ ಆಂದೋಲನದ ಪುರಸ್ಕರ್ತರಾಗಿ ಒಮ್ಮೆಲೆ ಕಾಂಗ್ರೆಸ್ಸಿನ ಕ್ಷೇತ್ರದಲ್ಲಿ ಬೆಳಗಿದುದೇನೋ ನಿಜ. ಕಾಂಗ್ರೆಸ್ಸಿನ ಉನ್ನತವಾದ ತಪ್ಪಲಿನ ಮೇಲೆ ಬರಲು, ಹಿನ್ನೆಲೆಯೂ ಇದ್ದಿತು.

ಶಿಕ್ಷಣವನ್ನು ಮುಗಿಸಿಕೊಂಡು ಭಾರತಕ್ಕೆ ಬರುವಾಗ ಅವರು ಭಾರತ ಸ್ವಾತಂತ್ರ್ಯದ ಸವಿಗನಸುಗಳನ್ನು ಕಾಣುತ್ತಿದ್ದರು. ಗ್ಯಾರಿಬಾಲ್ಡಿ ಮ್ಯಾಝಿನಿಗಳ ಜೀವನ ಚರಿತ್ರೆಗಳೂ ಪ್ರತ್ಯಕ್ಷ ನೋಡಿದ ಅಯರ್ಲಂಡ ಹೋರಾಟವೂ ಇವರನ್ನು ಉತ್ತೇಜನಗೊಳಿಸಿದ್ದವು. ಆದರೆ ಭಾರತದ ನಿರುತ್ಸಾಹವಾದ ಪರಿಸ್ಥಿತಿಯು ಅವರನ್ನು ನಿರುಪಾಯರನ್ನಾಗಿ ಮಾಡಿತು. ಬೂದಿ ಮುಚ್ಚಿದ ಕೆಂಡದಂತೆ ಅವರ ಅಂತರಂಗವು ಒಳಗಿಂಡ ಒಳಗೇ ಹೊತ್ತುತ್ತಿತ್ತು.

ಹೋಮರೂಲಿನ ಚಳವಳಿಯ ಗಾಳಿಯು ಬೀಸಿದ ಕೂಡಲೇ ಈ ಸ್ವಾತಂತ್ರ್ಯದ ಕಲ್ಪನೆಯು ಮನೋಮಯ ಸರೋವರದಲ್ಲಿ ಮೇಲಕ್ಕೆ ಏಳಹತ್ತಿತು. ಆದರೆ ಮಂದಗಾಮಿಗಳ ಗೊಳ್ಳು ಗೊತ್ತುವಳಿಗಳಿಗೆ ಅವರು ಬೇಸತ್ತಿದ್ದರು. **ನಿಶ್ಚಿತವಾದ ಏರಿಕೆಯ ಧೋರಣದ ಕಾರ್ಯಕ್ರಮಗಳನ್ನು ಇವರ ಅಂತಃಕರಣವು ಬಯಸುತ್ತಿತ್ತು**. ಆದರೆ, ಪುತ್ರವತ್ಸಲರಾದ ಮೋತಿಲಾಲರು ಇವರ ಭಾವನೆಗಳನ್ನು ಮೇಲಿಂದ ಮೇಲೆ ಹತ್ತಿಕ್ಕುತ್ತಿದ್ದರು. ತಂದೆಮಕ್ಕಳಿಬ್ಬರಲ್ಲಿಯೂ ಈ ವಿಷಯವಾಗಿ ಅನೇಕ ಸಲ ಚರ್ಚೆಗಳಾಗುತ್ತಿದ್ದವು. ಚಕಮಕಿಗಳಾಗುತ್ತಿದ್ದವು. ಆದರೆ ಎಲ್ಲಿ ತಂದೆಯವರ ಮನ ನೊಯ್ಯುವದೊ ಎಂದು ದೀರ್ಘಕ್ಕೆ ಒಯ್ಯುತ್ತಿದ್ದಿಲ್ಲ. ಮೋತಿಲಾಲರಿಗೆ, ಎಲ್ಲಿ ತಮ್ಮ

ಮಗನು **ಕ್ರಾಂತಿಕಾರಕ ಚಳವಳಿಯಲ್ಲಿ** ಭಾಗ ವಹಿಸುವನೋ ಎಂಬ ಭೀತಿಯು ಉಂಟಾಗುತ್ತಿತ್ತು. ಯುವರಾಜನಾದ ಬುದ್ಧನನ್ನು ರಕ್ಷಿಸಿದಂತೆ ಮೋತಿಲಾಲರು ಜವಾಹರರನ್ನು ಕಾಯುತ್ತಿದ್ದರು.

ಆದರೆ ಕಾಲಪುರುಷನನ್ನು ಕಾಯುವವರಾರು? ಅವನು ಮಾನವರ ಸಂಕಲ್ಪಗಳನ್ನೆಲ್ಲ ಬುಡಮೇಲು ಮಾಡುವನು. ಹೋಮರೂಲ ಚಳವಳಿಯು ರಾಷ್ಟ್ರದ ವಾತಾವರಣವನ್ನೇ ಕಾಯಿಸಿತು. ರೌಲೆಟ್ ಕಾಯದೆಯು ಭಾರತೀಯರ ಅಂತಃಕರಣವನ್ನೆ ಕಲಕಿತು. ಮಹಾತ್ಮರ ಸತ್ಯಾಗ್ರಹದ ಕೂಗು ಜವಾಹರಲಾಲರನ್ನು ಕೆಣಕದೆ ಬಿಟ್ಟೀತೆ? ತಂದೆ ಮಕ್ಕಳೀರ್ವರಲ್ಲಿಯೂ ಚರ್ಚೆಗೆ ಆರಂಭವಾಯಿತು. ಜವಾಹರಲಾಲರಿಗಂತೂ ಭಾರತದ ಅಪಮಾನವು ಸಹನವಾಗದಂತಾಯಿತು. ದಿನದಿನಕ್ಕೆ ಅವರ ನಿಶ್ಚಯವು ಸ್ವಾತಂತ್ರ್ಯ ಸಮರ ದೀಕ್ಷೆಯನ್ನು ವಹಿಸಲು ಹಾತೊರೆಯುತ್ತಿತ್ತು. ಮೋತಿಲಾಲರಿಗಾದರೋ ಏಕಪುತ್ರ ವಿಷಯ. ಬಿಸಿಲಿನ ಮೋರೆಯನ್ನೂ ಕೂಡ ನೋಡದ ತಮ್ಮ ಮಗನು ಜೇಲಿನಲ್ಲಿ ಬಾಳುವ ಬಗೆ ಹೇಗೆಂದು ಕಳವಳಗೊಳ್ಳುತ್ತಿದ್ದರು. ನೆಲದ ಮೇಲೆ ಮಲಗಿದರೆ ಎಂತಹ ಕಷ್ಟವಾಗುವದೆಂಬುದನ್ನು ನೋಡುವದಕ್ಕಾಗಿ ಮೋತಿಲಾಲರು ನೆಲದ ಮೇಲೆ ಮಲಗಿ ದುಃಖಿಸಿದರಂತೆ. ತಂದೆಮಕ್ಕಳಿಬ್ಬರಲ್ಲಿ ಹೋರಾಟವಂತೂ ನಡೆದೇ ಇತ್ತು. ಕಡೆಗೆ ಅವನು ಕ್ರಾಂತಿಕಾರಿಯಾದರೂ ಆಗಬಾರದೆಂದು ಬಯಸುತ್ತಿದ್ದರು. ಮಹಾತ್ಮಾ ಗಾಂಧಿಯವರಿಂದ ಬುದ್ಧಿ ಹೇಳಿಸಬೇಕೆಂದು ಅವರನ್ನು ಕರೆಯಿಸಿ ಉಪದೇಶಿಸಿದರು. ದುಡುಕಿ ಪರಿಸ್ಥಿತಿಯನ್ನು ಕೆಡಿಸಕೂಡದೆಂದೂ ತಂದೆಯವರ ಮನಸ್ಸಿಗೆ ಕಳವಳ ಉಂಟಾಗುವ ಯಾವ ಕಾರ್ಯಕ್ಕೂ ಕೈಹಾಕಬಾರದೆಂದೂ ಹೇಳಿದರು. ಈ ಯಾವ ಮಾತುಗಳೂ ಜವಾಹರಲಾಲರಿಗೆ ಸಮಾಧಾನವನ್ನುಂಟುಮಾಡಲಿಲ್ಲ.

ಪಂಜಾಬದ ಅತ್ಯಾಚಾರವೂ ದಂಡಿನ ಆಳಿಕೆಯೂ ಜವಾಹರಲಾಲರನ್ನು ಕೆರಳಿಸಿದವು. ಈ ಅಪಮಾನವನ್ನು ಸಹನ ಮಾಡುವದು ಹೇಡಿತನವೆಂದು ಅವರಿಗೆ ಅನಿಸಹತ್ತಿತು. ಆದರೂ ಅವರಿಗೆ ಭಾರತದ ಪೂರ್ಣ ದರ್ಶನವಾಗಿರಲಿಲ್ಲ. ಇಷ್ಟರಲ್ಲಿಯೇ ಒಂದು ಸನ್ನಿವೇಶ ಉಂಟಾಯಿತು.

ಜಮೀನದಾರರ ಮತ್ತು ಮಾಮಲೇದಾರರ ಕಾಟವನ್ನು ತಾಳಲಾರದೆ ತಮ್ಮ ಗೋಳನ್ನು ಮುಖಂಡರಿಗೆ ತಿಳಿಸಬೇಕೆಂದು ಪ್ರತಾಪಗಡ ಜಿಲ್ಹೆಯಿಂದ ೨೦೦ ರೈತರು, ಕಾಲುನಡಿಗೆಯಿಂದ ಅಲ್ಹಾಬಾದಕ್ಕೆ ಬಂದರು. ಅವರು ೫೦ ಮೈಲು ಪ್ರವಾಸಮಾಡಿದ್ದರು. ಜವಾಹರಲಾಲರಿಗೆ, ಈ ಸುದ್ದಿಯು ಮುಟ್ಟಿದಕೂಡಲೆ, ಅವರಲ್ಲಿಗೆ ತೆರಳಿದರು. ತಾಲೂಕದಾರರೂ ಜಮೀನದಾರರೂ ತಮ್ಮನ್ನು ಕಾಡುತ್ತಿರುವದನ್ನೂ ತಾವು ಬಾಳುವದು ಅಸಾಧ್ಯವಾಗಿರುವದನ್ನೂ ತಮ್ಮನ್ನು ಪಶುಗಳಂತೆ ಸುಲಿಯುವದನ್ನೂ ಹೇಳಿಕೊಂಡರು. ತಾವು ಇಲ್ಲಿಗೆ ಬಂದುದರಿಂದ ಮಾಮಲೇದಾರರೆಲ್ಲರೂ ಕೋಪಗೊಂಡಿರುವರೆಂದೂ, ಅವರ ಸೇಡಿನಿಂದ ತಮ್ಮನ್ನು ರಕ್ಷಿಸಬೇಕೆಂದೂ ಬೇಡಿಕೊಂಡರು. ಈ ಕರುಣ ಕಥೆಯನ್ನು ಕೇಳಿ ಅವರ ಅಂತಃಕರಣವು ಕರಗಿತು. ಕೂಡಲೇ ಅವರು ನೇತೃತ್ವವನ್ನು ವಹಿಸಿದರು. ಅವರನ್ನು ಬೆನ್ನಿಗೆ ಹಾಕಿಕೊಂಡು ಹೋರಾಡಲು ಸಿದ್ಧರಾದರು.

ಮರುದಿನವೇ ರೈತರ ಗ್ರಾಮಗಳಿಗೆ ಸಹೋದ್ಯೋಗಿಗಳೊಡನೆ ಹೋದರು. ಅವರಿಗೆ ತಾವು ಹೊಸ ಜಗತ್ತಿನಲ್ಲಿ ಕಾಲಿಡುತ್ತಿರುವೆವೆಂದು ಭಾಸವಾಯಿತು. ಸರಿಯಾದ ದಾರಿಗಳಿಲ್ಲ; ಇರಲು ಸ್ವಚ್ಛವಾದ ಮನೆಗಳಿಲ್ಲ; ಕುಡಿಯಲು ನೀರಿಲ್ಲ; ಎಳೆಯ ಮಕ್ಕಳ ಹಸಿವೆಯ ಕೂಗು ಇವೆಲ್ಲವೂ ಜವಾಹರಲಾಲರನ್ನು ಕಂಗೆಡಿಸಿದವು. ಆದರೆ ಅವರ ಒಳಸಟ್ಟ ಕಣ್ಣುಗಳಲ್ಲಿ ವಿಲಕ್ಷಣವಾದ ತೇಜವು ಕಾಣಿಸಿತು. ಅತ್ಯಲ್ಪಕಾಲದಲ್ಲಿ ಜನರು ಕೂಡುತ್ತಿದ್ದರು. ಹಳ್ಳಿಯಿಂದಹಳ್ಳಿಗೆ ಸಂದೇಶವು ಕಳಿಸಲ್ಪಟ್ಟು, ಎಲ್ಲ ಹಳ್ಳಿಗಳ ಜನರು ತಮ್ಮ ಮನೆಮಾರುಗಳನ್ನು ಬಿಟ್ಟು ಒಂದೆಡೆ ಕೂಡುವದನ್ನು ಕಂಡು ಬೆರಗಾದರು. ಚಿಂದಿಬಟ್ಟೆಗಳನ್ನುಟ್ಟ ಅರೆಬತ್ತಲೆಯ ಗಂಡು–ಹೆಣ್ಣುಮಕ್ಕಳನ್ನು ಕಂಡು ಮರುಗಹತ್ತಿದರು. ಅವರ ಶ್ರದ್ಧೆ, ಕಾರ್ಯದಕ್ಷತೆ, ಆತುರತೆಗಳನ್ನು ಕಂಡು **ಭಾರತದಲ್ಲಿ ಕ್ರಾಂತಿಯನ್ನು ಮಾಡಲು ಈ ಪುರುಷರೇ ಯೋಗ್ಯರೆಂದೂ ಇವರಿಂದಲೇ ಭಾರತವು ಸ್ವತಂತ್ರವಾಗುವದೆಂದೂ ನಿಶ್ಚಯಿಸಿಕೊಂಡರು.**

ಅವರು ತಮ್ಮ ಮೇಲೆ ತೋರಿಸುವ ಪ್ರೇಮ ಭಕ್ತಿ ಶ್ರದ್ಧೆಗಳಿಗಾಗಿ ಜವಾಹರಲಾಲರು ಮುಗ್ಧರಾದರು. ತಮ್ಮ ಉದ್ಧಾರಕರೆಂಬ ಭಾವದಿಂದ ನೋಡುವ ಆ ಸರಳವಾದ ಅಂತಃಕರಣವನ್ನು ಕಂಡು ಜವಾಹರಲಾಲರ ಅಂತಃಕರಣವು ಉಕ್ಕಿಬಂದಿತು. ಅವರು ತೋರಿಸಿದ ಕೃತಜ್ಞತೆಗಾಗಿ ಅವಮಾನವೂ ದುಃಖವೂ ಏಕಕಾಲಕ್ಕೆ ಉಂಟಾದವೆಂದು ಅವರು ತಮ್ಮ ಆತ್ಮಚರಿತ್ರೆಯಲ್ಲಿ ಬರೆದಿದ್ದಾರೆ. ತಾವು ನೆಮ್ಮದಿಯಾಗಿ ಸಂತೃಪ್ತಜೀವನ ವನ್ನು ನಡೆಸುತ್ತಿದ್ದೇನಲ್ಲ, ಪಟ್ಟಣವಾಸಿಗಳಾದ ನಮ್ಮ ರಾಜಕಾರಣವು ಭಾರತದ ಅಸಂಖ್ಯಾತ ಅರೆಬತ್ತಲೆಯ ಗಂಡು-ಹೆಣ್ಣುಮಕ್ಕಳನ್ನು ಉಪೇಕ್ಷಿಸಿದೆಯಲ್ಲ, ಎಂದು ಅವರಿಗೆ ಅವಮಾನ, ಭಾರತದ ಅವನತಿ ಮತ್ತು ಬಡತನವನ್ನು ಕಂಡು ದುಃಖ. **ನಗ್ನಳಾದ, ಹೊಟ್ಟೆಗಿಲ್ಲದೆ ತುಳಿಯಲ್ಪಟ್ಟ, ಮತ್ತು ಅತ್ಯಂತ ದುಃಖಿನಿಯಾದ ಭಾರತ ಮಾತೆಯ ಕರುಣಾಜನಕ ಚಿತ್ರವೊಂದು ಅವರ ಮುಂದೆ ರೂಪ ಗೊಂಡು ನಿಂತಿತು.** ಎದೆಯೊಡೆಯಿತು, ಕಣ್ಣು ಮುಚ್ಚಿದರು. ಅದೇ ರೂಪ, ಅದೇ ನೋಟ, ಅತ್ಯಂತ ದುಃಖವಾಯಿತು. **ಭಾರತವು ಈ ದೆಸೆಗೆ ಈಡಾಗಿದೆಯೇ! ತಾಯೇ ಇದು ನಿನ್ನ ರೂಪವೇ!** ಎಂದು ಹಲವು ಸಲ ಮನದಲ್ಲಿ ಅಂದು ನೊಂದುಕೊಂಡರು. **ಅಂದೇ ಭಾರತದ ಬಂಧವಿಮೋಚನೆಗೆ ಸಂಕಲ್ಪಮಾಡಿದರು. ರೈತರ ರಾಜ್ಯವೇ ಸ್ವರಾಜ್ಯ**ವೆಂದು ನಿಶ್ಚಯಿಸಿದರು. ಸಾಮ್ಯವಾದವೇ ಸ್ವರಾಜ್ಯದ ಅಡಿಗಲ್ಲು ಎಂದು ಅವರಿಗೆ ಅನಿಸಹತ್ತಿತು. ನರಪತಿಯಂತಿದ್ದ ಜವಾಹರ ಲಾಲರು ನರಳುವ ರೈತರ ಸೇವೆಗೆ ಸಿದ್ಧರಾಗಿ ಅವರೊಡನೆ ಸಮರಸರಾದು ದನ್ನು ಕಂಡು ಆಳರಸರಿಗೂ ಜಗತ್ತಿಗೂ ಆಶ್ಚರ್ಯವಾಯಿತು. ರೈತರ ಸಂಘಟನೆಗೆ ಕೈಹಾಕಿದರು. ಹೀಗೆ ರೈತರ ಆಂದೋಲನವು ಸಾಗಿದಾಗಲೇ ಅಸಹಕಾರ ಚಳವಳಿಯು ಪ್ರಾರಂಭವಾಯಿತು. ತಂದೆಯವರೇ ಈ ಚಳ ವಳಿಯಲ್ಲಿ ಪ್ರಮುಖಭಾಗವನ್ನು ವಹಿಸಿದುದರಿಂದ ಜವಾಹರಲಾಲರಿಗೆ ಪರಮಾನಂದವಾಯಿತು. ಉತ್ಸಾಹದಿಂದ ಕಾರ್ಯವನ್ನು ಕೈಕೊಂಡರು. ಹಳ್ಳಿಹಳ್ಳಿಗೆ ಅಸಹಕಾರದ ಸಂದೇಶವನ್ನು ಮುಟ್ಟಿಸಿದರು. ಕಾಂಗ್ರೆಸ

ಕಮೀಟಿಗಳನ್ನು ಸಂಘಟಿಸಿದರು. ಅಲ್ಪಾವಧಿಯಲ್ಲಿಯೇ ಯುಕ್ತ ಪ್ರಾಂತೀಯ ಮುಖಂಡರಲ್ಲಿ ಮೇಲ್ತರಗತಿಯ ಸ್ಥಾನವನ್ನು ಪಡೆದರು. ೧೯೨೧ರಲ್ಲಿ ೬ ತಿಂಗಳ ಶಿಕ್ಷೆಯಾಯಿತು. ಮರಳಿ ಬಂದರು. ಮತ್ತೆ ಚಳವಳಿಯನ್ನು ಹೂಡಿದರು. ಮತ್ತೆ ಎರಡು ವರ್ಷ ಶಿಕ್ಷೆಯಾಯಿತು. ೧೯೨೩ರಲ್ಲಿ ಸರಕಾರದವರು ಇವರನ್ನು ಶಿಕ್ಷೆ ಮುಗಿಯುವದರೊಳಗಾಗಿಯೇ ಬಿಟ್ಟುಬಿಟ್ಟರು. ಜವಾಹರಲಾಲರು ಮತ್ತೆ ಕಾರ್ಯಕ್ಕೆ ಪ್ರಾರಂಭಿಸಿದರು. ಆದರೆ ಕಾಂಗ್ರೆಸ್ಸಿನ ಸ್ಥಿತಿಯು ಗುರುವಿಲ್ಲದ ಮಠವಂತಾಗಿತ್ತು. ದಿನದಿನಕ್ಕೆ ಬದಲಾವಣೆಗಳನ್ನು ಹೊಂದುತ್ತ ನಡೆದಿತ್ತು. ಜವಾಹರಲಾಲರಿಗೆ ಈ ಪರಿಸ್ಥಿತಿಯಿಂದ ಅತ್ಯಂತ ವೇದನೆಯಾಯಿತು. ೧೯೨೩ರಲ್ಲಿ ಕಾಂಗ್ರೆಸ್ಸಿನ ಪ್ರಧಾನಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ೨೩ರಿಂದ ೨೯ವರೆಗೆ ಪ್ರಧಾನಕಾರ್ಯದರ್ಶಿಗಳಾಗಿಯೇ ಇದ್ದರು. ಕಾಂಗ್ರೆಸ ಕಚೇರಿಯನ್ನು ಒಳ್ಳೇ ವ್ಯವಸ್ಥಿತವಾಗಿ ರೂಪಗೊಳಿಸಿದ ಶ್ರೇಯಸ್ಸು ಜವಾಹರಲಾಲರಿಗೇ ಇದೆ.

೧೯೨೬ರಲ್ಲಿ ಯುರೋಪಕ್ಕೆ ತೆರಳಿದರು. ಈ ಯುರೋಪದ ಯಾತ್ರೆಯು ಜವಾಹರಲಾಲರ ಜೀವನವನ್ನೇ ಬದಲು ಮಾಡಿತು. ೬-೭ ವರ್ಷ ಪ್ರತ್ಯಕ್ಷ ಭಾರತೀಯ ಸಂಗ್ರಾಮದಲ್ಲಿ ನಿಂತು ಹೋರಾಡಿದ್ದರಿಂದ ಭಾರತೀಯ ಶಕ್ತಿ ಲೋಪಗಳು ಚನ್ನಾಗಿ ಗೊತ್ತಾಗಿದ್ದವು. ಜೀವಂತ ರಾಜಕಾರಣದ ತವರುಮನೆಯಾದ ಯುರೋಪವು ಜವಾಹರಲಾಲರಿಗೆ ದಿವ್ಯದೃಷ್ಟಿಯನ್ನು ಕೊಟ್ಟಿತು. ಹೊರನಾಡುಗಳಲ್ಲಿ ಭಾರತಕ್ಕಿರುವ ಬೆಲೆಯನ್ನು ಅರಿತರು. ಇದೇ ಸಮಯದಲ್ಲಿ **ಬ್ರೂಸೆಲ್ಸದಲ್ಲಿ ಸಾಮ್ರಾಜ್ಯ ವಿರೋಧಿ ಪರಿಷತ್ತು** ನಡೆಯಿತು. ಅದರಲ್ಲಿ ಭಾರತವು ಭಾಗವಹಿಸುವದು ಸರಿಯೆಂದು ತೋರಿತು. ಅದರಂತೆ ಕಾಂಗ್ರೆಸ್ಸಿಗೆ ತಿಳಿಸಿದೊಡನೆಯೆ ಇವರನ್ನೇ ಪ್ರತಿನಿಧಿಗಳನ್ನಾಗಿ ಮಾಡಿತು. ಸಾಮ್ರಾಜ್ಯದಿಂದ ಪೀಡಿತವಾದ ರಾಷ್ಟ್ರಗಳೆಲ್ಲವೂ ಅಲ್ಲಿ ನೆರೆದಿದ್ದವು. ಸಾಮ್ರಾಜ್ಯತತ್ವವನ್ನು ಎದುರಿಸಿ ಸ್ವಾತಂತ್ರ್ಯಕ್ಕಾಗಿ ಹೋರಾಡುವದೇ ಈ ಕಾಂಗ್ರೆಸ್ಸಿನ ಗುರಿಯಾಗಿತ್ತು. ಪ್ರಸಂಗದಲ್ಲಿ ಪರಸ್ಪರರು ಯಾವ ರೀತಿಯಿಂದ

ನೆರವಾಗಬೇಕೆಂಬುದೇ ಇದರ ಎರಡನೇ ಉದ್ದೇಶವಿತ್ತು. ಈ ಪರಿಷತ್ತಿನಲ್ಲಿ ಜವಾಹರಲಾಲರು ಭಾಗವಹಿಸಿದರು. ಭಾರತೀಯ ಹೋರಾಟದ ನಿಜ ಸ್ವರೂಪವನ್ನು ಚರ್ಚಿಸಿದರು. ತಮ್ಮ ವ್ಯಕ್ತಿತ್ವದಿಂದ ಅದರ ಮಹತ್ವದ ಅಧ್ಯಕ್ಷಸ್ಥಾನದ ಮಾನವನ್ನು ಪಡೆದರು. ಸಾಮ್ಯವಾದೀ ಸರಕಾರದ ಆಮಂತ್ರಣದ ಮೇರೆಗೆ, ದಶವಾರ್ಷಿಕ ಉತ್ಸವಕ್ಕೆ ರಶಿಯಾಕ್ಕೆ ಹೋದರು. ಮನೋಮಯ ರಾಜ್ಯದಲ್ಲಿ ಸಾಮ್ಯವಾದದ ಸುಂದರವಾದ ಚಿತ್ರಗಳನ್ನು ಚಿತ್ರಿಸುತ್ತಿದ್ದುದನ್ನು ಪ್ರತ್ಯಕ್ಷ ನೋಡುವ ತವಕವು ಅವರಲ್ಲಿ ಬಹುದಿನಗಳಿಂದ ಇತ್ತು. ಸೂಕ್ಷ್ಮರೀತಿಯಿಂದ ಅದರ ಆಗುಹೋಗುಗಳನ್ನು ನಿರೀಕ್ಷಿಸಿದರು. ಅಹಿತವಾದ ಕೆಲವು ಕೊರತೆಗಳನ್ನು ಕಂಡರೂ ರಶಿಯಾದ ಸೋವ್ಹಿಯೆಟ ರಾಜ್ಯವನ್ನು ಅವರು ಮೆಚ್ಚಿದರು. ಜಗತ್ತಿನಲ್ಲಿ ಉಂಟಾಗುತ್ತಿರುವ ಸ್ಥಿತ್ಯಂತರಗಳನ್ನು ಅಭ್ಯಾಸಿಸಿದರು. ರಾಜನೀತಿ, ಸಂಸ್ಕೃತಿ, ವಿಜ್ಞಾನಗಳ ವಿಷಯವಾಗಿ ಚನ್ನಾಗಿ ಅಭ್ಯಾಸ ಮಾಡಿದರು. ಯುರೋಪ ಹಾಗು ಅಮೇರಿಕೆಗಳ ರಾಜಕೀಯ, ಆರ್ಥಿಕ, ಸಾಮಾಜಿಕ ಸಮಸ್ಯೆಗಳನ್ನು ಸೂಕ್ಷ್ಮರೀತಿಯಿಂದ ಪರಿಶೀಲಿಸಿದರು.

ಈ ಎಲ್ಲ ಅಭ್ಯಾಸದಿಂದಲೂ, ನಿರೀಕ್ಷಣೆಯಿಂದಲೂ, ಜವಾಹರಲಾಲರ ದೃಷ್ಟಿಯು ವಿಶಾಲವಾಯಿತು. ವಿಶಾಲವಾದ ಕ್ಷೇತ್ರದಲ್ಲಿ ನಿಂತು ಭಾರತೀಯ ಸಮಸ್ಯೆಗಳನ್ನು ನೋಡಹತ್ತಿದರು. ಜಗತ್ತಿನ ರಾಜಕಾರಣದಿಂದ ಭಾರತದ ಮೇಲೆ ಆಗುವ ಪರಿಣಾಮಗಳ ಪರಿಜ್ಞಾನ ಉಂಟಾದ್ದರಿಂದ ಭಾರತದ ಸಂಗ್ರಾಮವನ್ನು ಆ ದೃಷ್ಟಿಯಿಂದ ಮುಂದುವರಿಸಬೇಕೆಂಬ ದೃಷ್ಟಿಯುಂಟಾಯಿತು.

ರಾಷ್ಟ್ರೀಯತೆಯು ಕೇವಲ ಸಂಕುಚಿತವೂ ಅಪೂರ್ಣವೂ ಆದ ಶ್ರದ್ಧೆಯಂತೆ ಅವರಿಗೆ ತೋರಹತ್ತಿತು. ರಾಜಕೀಯ ಮತ್ತು ರಾಷ್ಟ್ರೀಯ ಸ್ವಾತಂತ್ರ್ಯಗಳು ಅತ್ಯಾವಶ್ಯವಾದರೂ ಕೇವಲ ಇವುಗಳಿಂದಲೇ ಮಾನವನ ಪ್ರಗತಿಯು ಪೂರ್ಣವಾಗಲಾರದೆಂದೂ ಇವು ಪ್ರಗತಿಯ ಸಾಧನಗಳೆಂದೂ ಸಾಮಾಜಿಕ ಸ್ವಾತಂತ್ರ್ಯ, ಸಮತೆಯ ತಳಹದಿಯ ಮೇಲೆ ರಚಿತವಾದ ಸಮಾಜ ಮತ್ತು ರಾಜ್ಯಗಳು ಇಲ್ಲವಾದರೆ, ಯಾವುದೇ

ರಾಷ್ಟ್ರವಾಗಲೀ ವ್ಯಕ್ತಿಯಾಗಲೀ ಪೂರ್ಣವಾಗಿ ಬೆಳೆಯಲು ಸಾಧ್ಯ ವಿಲ್ಲೆಂಬ ನಿಶ್ಚಿತವಾದ ಸಿದ್ಧಾಂತದಿಂದ ಹೊರಟರು. ಈ ದೃಷ್ಟಿಯಿಂದ ಭಾರತೀಯ ಸ್ವಾತಂತ್ರ್ಯಸಂಗ್ರಾಮವನ್ನು ನೋಡಹತ್ತಿದರು.

ಈ ಹೊಸ ವಿಚಾರ, ಹೊಸ ದೃಷ್ಟಿಯಿಂದ ಮರಳಿ ಬಂದ ಜವಾ ಹರಲಾಲರು ಭಾರತೀಯ ರಾಜಕಾರಣದಲ್ಲಿ ಕ್ರಾಂತಿಯನ್ನುಂಟುಮಾಡಿ ದರು. ಭಾರತವು ಅರ್ಥಾತ್ ಕಾಂಗ್ರೆಸ್ಸು ಅನುಸರಿಸುತ್ತಿದ್ದ ಧೋರಣ ವನ್ನು ಬದಲಿಸಿದರು. ಭಾರತಕ್ಕೆ ಹೊಸದೊಂದು ದೃಷ್ಟಿಯನ್ನುಂಟು ಮಾಡಿದರು. **ಇಲ್ಲಿಂದಲೇ ಜವಾಹರಲಾಲರ ನಿಜವಾದ ರಾಜ ಕಾರಣಕ್ಕೆ ಪ್ರಾರಂಭವಾಯಿತೆಂದು ನನ್ನ ಅಭಿಪ್ರಾಯ.** ಜವಾ ಹರಲಾಲರು ಇಲ್ಲಿಯ ವರೆಗೆ ರಾಜಕೀಯ ರಂಗದಲ್ಲಿಯೇ ಇದ್ದರು. ದುಡಿದಿದ್ದರು. ಆದರೆ ಅವರಿಗೆ ರಾಜಕಾರಣದಲ್ಲಿ ವ್ಯಕ್ತಿತ್ವವಿದ್ದಿಲ್ಲ. ಮಹಾತ್ಮರ ಅನುಯಾಯಿಗಳಾಗಿದ್ದರು. ಈಗಲೂ ಇದ್ದಾರೆ. ಆದರೆ, ಸಾಮ್ಯವಾದದ ತಳಹದಿಯ ಮೇಲೆಯೇ ಭಾರತದ ಸ್ವರಾಜ್ಯದ ಕಟ್ಟಡ ವನ್ನು ಕಟ್ಟಬೇಕೆಂಬ ನವಸಿದ್ಧಾಂತವನ್ನೂ ಭಾರತೀಯ ರಾಜಕಾರಣ ವನ್ನು ಜಾಗತಿಕ ರಾಜಕಾರಣವನ್ನು ಲಕ್ಷಿಸಿಯೇ ಸಾಗಿಸಬೇಕೆಂಬು ದನ್ನೂ ಭಾರತೀಯ ರಾಜಕಾರಣದಲ್ಲಿ ತಂದವರೆಂದರೆ ಇವರೇ. ಮಹಾ ತ್ಮರ ದಿವ್ಯಯುಗದಲ್ಲಿ ಕೂಡ ನವಯುಗ ನಿರ್ಮಾಣದ ಭಾಗ್ಯವು ಸಾಮಾನ್ಯವಾದುದಲ್ಲ. **ಈ ನವಯುಗದ ಪ್ರವರ್ತಕರೂ ನಾಯ ಕರೂ ಇವರೇ.**

ಯುರೋಪದಿಂದ ಮರಳಿ ಬಂದೊಡನೆ ಈ ದಿವ್ಯ ದೃಷ್ಟಿಯಿಂದ ಕಾಂಗ್ರೆಸ್ಸಿನಲ್ಲಿ ಕಾಲಿಟ್ಟರು. ಭಾರತವನ್ನು ಜಗತ್ತಿನ ಉನ್ನತ ಸ್ಥಾನಕ್ಕೆ ಏರಿಸಬೇಕೆಂಬುದೇ ಅವರ ಆಗಿನ ಆಕಾಂಕ್ಷೆ. ಈ ದೃಷ್ಟಿಯಿಂದ ರಾಜ ಕೀಯ ಸ್ವಾತಂತ್ರ್ಯದ ಗುರಿಯು ನಿಸ್ಸಂದಿಗ್ಧವಾಗಿರಬೇಕೆಂದು ಅಪೇಕ್ಷಿ ಸಿದರು. ಸಂಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಗುರಿಯಾಗಬೇಕೆಂದೂ ಇಲ್ಲದಿದ್ದರೆ ಭಾರತದ ಬೆಳೆಯು ಹೆಚ್ಚಲಾರದೆಂದೂ ಬಗೆದರು. ಅವರ ತಲೆಯಲ್ಲಿ ತಿರುಗುವ ಎರಡನೆಯ ಪ್ರಶ್ನೆಯೆಂದರೆ ಸಮಾಜದ ಪುನರ್ಘಟನೆ.

ಕಾಂಗ್ರೆಸ್ಸು ಇಲ್ಲಿಯ ವರೆಗೆ, ಶುದ್ಧ ರಾಜಕೀಯ ಸಂಸ್ಥೆಯಾಗಿತ್ತು. ಈ ಎರಡನೆಯ ಮಾತನ್ನು ಸ್ವೀಕರಿಸುವದು ಕಠಿಣವಿತ್ತು. ಆದುದರಿಂದ ಈ ಕಲ್ಪನೆಗಳನ್ನು ಮೊದಲು ಸಾಮಾನ್ಯ ಜನರಲ್ಲಿಯೂ ಯುವಕ ಜನರಲ್ಲಿಯೂ ಹರಡಬೇಕೆಂದೂ ಆಲೋಚಿಸಿದರು.

ಮದ್ರಾಸ ಕಾಂಗ್ರೆಸ್ಸಿಗೆ ಪ್ರಾರಂಭವಾಯಿತು. ವರ್ಕಿಂಗ ಕಮೀಟಿಯಲ್ಲಿ **ಸಂಪೂರ್ಣ ಸ್ವಾತಂತ್ರ್ಯ, ಯುದ್ಧದ ಭೀತಿ, ಸಾಮ್ರಾಜ್ಯವಿರೋಧಕ ಸಂಸ್ಥೆಯ ಸಂಬಂಧಗಳ** ಗೊತ್ತುವಳಿಗಳನ್ನಿಟ್ಟರು. ಅವು ಮಾನ್ಯ ಮಾಡಲ್ಪಟ್ಟವು. ಬಹಿರಂಗ ಅಧಿವೇಶನದಲ್ಲಿ ಪ್ರಚಂಡ ಬಹುಮತದಿಂದ ಸ್ವೀಕರಿಸಲ್ಪಟ್ಟವು. ಸಾಮ್ರಾಜ್ಯ ಭಕ್ತರಾದ ಆನಿಬೆಜಂಟರು ಸಂಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಗೆ ಬೆಂಬಲವಾಗಿ ನಿಂತು ಸಮರ್ಥಿಸಿದುದು ಅತ್ಯಂತ ಆಶ್ಚರ್ಯವು. ಸ್ವಾತಂತ್ರ್ಯದ ಗೊತ್ತುವಳಿಯು ಪಾಸಾದೊಡನೆಯೇ ತರುಣರಲ್ಲಿ ಪ್ರಚಂಡವಾದ ಜಾಗೃತೆಯಾಯಿತು. ಉತ್ಸಾಹವು ಉಕ್ಕೇರಹತ್ತಿತು. ಆದರೆ ರಾಷ್ಟ್ರಕ್ಕೆ ಆಗ ಅದರ ಮಹತ್ವವು ಹೊಳೆದಂತೆ ತೋರಲಿಲ್ಲ. ಭಾರತದ ಸರ್ವಪಕ್ಷೀಯರೂ ಕೂಡಿ ಸ್ವರಾಜ್ಯದ ಘಟನೆಯನ್ನು ನಿರ್ಮಿಸಬೇಕೆಂದೂ ಗೊತ್ತುವಳಿಯಾಯಿತು. ಮಂದಪಕ್ಷೀಯರೂ ಇದರಲ್ಲಿ ಸಹಕಾರ ಮಾಡುವರೆಂದರೆ ಸಂಪೂರ್ಣ ಸ್ವಾತಂತ್ರ್ಯದ ಗಾಳಿ ಕೂಡ ಅದಕ್ಕೆ ತಗಲಕೂಡದು ಎಂದರ್ಥ. ಜವಾಹರಲಾಲರು ಇದನ್ನು ಕಂಡು ಮರುಗಿದರು. ಮಹಾತ್ಮಾ ಗಾಂಧಿಯವರಿಗೆ ಮಾತ್ರ ಈ ಗೊತ್ತುವಳಿಯ ಅರ್ಥವು ಹೊಳೆಯಿತು. ಇದು ಅಕಾಲಿಕವೆಂದು ಟೀಕಿಸಿದರೂ ಕೂಡ. ಗೊತ್ತುವಳಿಯು ಆಗಿಹೋಯಿತು. **ಜವಾಹರಲಾಲರಿಗೆ ವ್ಯಕ್ತಿತ್ವವನ್ನುಂಟುಮಾಡಿತು.** ಸಂಪೂರ್ಣ ಸ್ವಾತಂತ್ರ್ಯಪ್ರಿಯರೆಂದು ಜನತೆಯು ಅವರನ್ನೇ ಬೆನ್ನುಹತ್ತಿತು. ಜವಾಹರಲಾಲರು ಇದರಿಂದ ಯುವಕರಿಗೆ ಬಹಳೇ ಪ್ರಿಯರಾದರು. ಯುವಕರ ಚಳವಳಿಯೂ ರಾಷ್ಟ್ರದಲ್ಲಿ ಬೆಳೆಯಿತು. ಅವರ ಸಂಘಟನೆಗೆ ಪ್ರೋತ್ಸಾಹನೆ ಕೊಟ್ಟರು. ಅವರಲ್ಲಿ ಹೊಸ ವಿಚಾರಗಳನ್ನು ತುಂಬಿದರು. ಬಂಗಾಲ ಮುಂಬಯಿ ಪ್ರಾಂತೀಯ

ಯುವಕ ಪರಿಷತ್ತುಗಳಲ್ಲಿ ಇವರು ಮಾಡಿದ ಭಾಷಣಗಳು ಭಯಂಕರವಾದ ಆಂದೋಲನವನ್ನೆಬ್ಬಿಸಿದವು.

ಸ್ವಾತಂತ್ರ್ಯಸಂಘವನ್ನು ಪ್ರತ್ಯೇಕವಾಗಿ ಸ್ಥಾಪಿಸಿದರು. ಕೂಲಿಕಾರರ ಸಂಘಟನೆಗೆ ಕೈಹಾಕಿದರು. ಸಂಪೂರ್ಣ ಸ್ವಾತಂತ್ರ್ಯದ ಕಲ್ಪನೆಯು ಭರದಿಂದ ಹಬ್ಬಿತು. ಭಾರತೀಯ ವಾತಾವರಣವೆಲ್ಲವೂ ಒಂದು ವರ್ಷದಲ್ಲಿ ಸ್ವಾತಂತ್ರ್ಯದ ಕಲ್ಪನೆಯಿಂದ ತುಂಬಿಹೋಯಿತು.

ಕಾಂಗ್ರೆಸ್ಸು ಸರ್ವಪಕ್ಷೀಯ ವರದಿಯನ್ನು ಪ್ರಸಿದ್ಧಪಡಿಸಿತು. ಅದು ಮೊದಲು ತರ್ಕಿಸಿದಂತೆ, ಸಾಮ್ರಾಜ್ಯಾಂತರ್ಗತ ಧ್ಯೇಯವನ್ನೇ ಮುಂದಿಟ್ಟುಕೊಂಡು ಘಟನೆಯನ್ನು ಸಿದ್ಧಪಡಿಸಿತು.

ಇದೇ ಸಮಯದಲ್ಲಿ ಇನ್ನೊಂದು ಮಹತ್ವವಾದ ಸನ್ನಿವೇಶವು ಒದಗಿತು. **ಸಾಯಮನ್ ಕಮೀಶನ್ ಬಂದಿತು**. ಕಾಂಗ್ರೆಸ್ಸು ಅದನ್ನು ಬಹಿಷ್ಕರಿಸಬೇಕೆಂದು ನಿರ್ಣಯಿಸಿತ್ತು. ಜವಾಹರರು ಸ್ವಾತಂತ್ರ್ಯ ಮಂತ್ರದಿಂದ ತರುಣರನ್ನು ಹುರಿದುಂಬಿಸಿದ್ದರು. ಪ್ರಚಂಡವಾದ ಹರತಾಳಗಳಾದವು. ಸರಕಾರವು ದಬ್ಬಾಳಿಕೆಯನ್ನು ಪ್ರಾರಂಭಿಸಿತು. ಜನರ ಉತ್ಸಾಹಕ್ಕೆ ಉಕ್ಕು ಬಂದಿತು. ಎಲ್ಲಿ ಹೋದಲ್ಲಿ **ಸಾಯಮನ್ ಗೋ ಬ್ಯಾಕ್** ಎಂಬ ಧ್ವನಿಯೇ ಧ್ವನಿ. ಸರಕಾರವು ರೊಚ್ಚಿಗೆದ್ದಿತು. ಎಷ್ಟೋ ಲಾಠಿ ಹೊಡೆತಗಳಾದವು. ಪಂಜಾಬದಲ್ಲಿ ಲಾಠಿ ಹೊಡೆತಕ್ಕೆ ದೇ. ಭ. ಲಾಲಾ ಲಜಪತರಾಯರು ತುತ್ತಾದರು. ಇದರಿಂದ ಬಹಿಷ್ಕಾರವು ಮತ್ತಿಷ್ಟು ಹೆಚ್ಚಾಯಿತು.

ಲಖನೌ ಪಟ್ಟಣಕ್ಕೆ ಕಮೀಶನ್ ಬರುವದಿತ್ತು. ಅದರ ಸಿದ್ಧತೆಗೆಂದು ಜವಾಹರಲಾಲರ ಪ್ರೇರಣೆಯಿಂದ ೮ ದಿವಸ ಮೊದಲೇ ಮೆರವಣಿಗೆಗೆ ಪ್ರಾರಂಭವಾಗಿತ್ತು. ಪ್ರಯಾಣಿಕರಿಗೆ ತೊಂದರೆಯಾಗುವದೆಂಬ ನೆವದಿಂದ ಮೆರವಣಿಗೆಗಳು ಪ್ರತಿಬಂಧಿಸಲ್ಪಟ್ಟಿದ್ದವು. ಆದರೆ ೧೬–೧೬ ಜನರ ಗುಂಪುಗೂಡಿದ ಮೆರವಣಿಗೆಗಳನ್ನು ತೆಗೆದು ಕೂಟದಲ್ಲಿ ಎಲ್ಲರೂ ಕೂಡುವಂತೆ ಏರ್ಪಡಿಸಲಾಯಿತು. ಮರುದಿವಸವೇ ಸಾಯಮನ್ ಕಮೀಶನ್ ಬರುವದಿತ್ತು. ಚಿಕ್ಕ ಪುಟ್ಟ ಸಾವಿರಾರು ಮೆರವಣಿಗೆಗಳು ಹೊರಟವು. ಅವೆಲ್ಲವುಗಳ ಮುಂಭಾಗದಲ್ಲಿ ಧ್ವಜವನ್ನೆತ್ತಿಕೊಂಡು

ಜವಾಹರರು ಹೊರಟರು. ಮೆರವಣಿಗೆಯು ಸ್ಟೇಶನ್ನು ಅರ್ಧ ಮೈಲು ದೂರ ಇರುವಾಗ ತಡೆಯಲ್ಪಟ್ಟಿತು. ಲಕ್ಷಾವಧಿ ಜನರು ನೆರೆದಿದ್ದರು. **ಸಾಯಮನ್ ಗೋ ಬ್ಯಾಕ** ಎಂಬ ನಿನಾದವು ಆಕಾಶವನ್ನೇ ಭೇದಿಸಿತ್ತು. ಕುದುರೆ ಸ್ವಾರರೂ ಕಾಲಾಳುಗಳೂ ಚದುರಿಸಲು ಬಂದರು; ಜನರು ಚದುರಲಿಲ್ಲ. ಕುದುರೆಗಳನ್ನು ಜನರ ಮೇಲೆ ಹಾಯಿಸಿದರು. ಲಾಠಿಯಿಂದ ಥಳಿಸಿದರು. ಈ ಸಮಯದಲ್ಲಿ ಜವಾಹರರು ತೋರಿಸಿದ ಧೈರ್ಯವು ಆಶ್ಚರ್ಯಕರವಾದುದು. ಲಾಠಿ ಏಟುಗಳು ಬೀಳಹತ್ತಿದ್ದರೂ ಮೈಮೇಲೆ ಕುದುರೆಯು ಏರಿ ಬಂದರೂ **ನಿಶ್ಚಲವಾದ ಮೇರುಪರ್ವತದಂತೆ, ನಿಂತುಬಿಟ್ಟರು. ಇವರಿಗೆನ್ನಬೇಕು ಧೀರರೆಂದು, ವೀರರೆಂದು.** ಸಭೆಗಳನ್ನು ಮಾಡಲಿಕ್ಕೆ ಹೇಳಿ, ಪೋಲಿಸರ ಸುಳುವನ್ನು ಕಂಡು ಮನೆಯ ಹಿತ್ತಲಲ್ಲಿ ಅಡಗುವ ಹೇಡಿ ಮುಖಂಡರವರಲ್ಲ. ಆದುದರಿಂದಲೇ ಇಂದು ನಿಜವಾಗಿ ಭಾರತಕ್ಕೆ ಮುಂದಾಳುಗಳಾಗಿರುವರು. ಈ ಅವರ ಧೈರ್ಯವು ಭಾರತೀಯ ತರುಣರ ಅಂತಃಕರಣವನ್ನು ಸೆಳೆಯಿತು. ಇವರ ಮುಂದಾಳುತನದಲ್ಲಿ ಪ್ರಾಣವನ್ನು ಕೊಡಲು ಕೂಡ ಸಿದ್ಧರಾದರು.

ಹೀಗೆ ಸಾಯಮನ್ ಕಮೀಶನ್ನಿನಿಂದ ಕಾಯ್ದ ವಾತಾವರಣದಲ್ಲಿಯೇ ಕಲಕತ್ತೆಯ ಕಾಂಗ್ರೆಸ್ಸು ನೆರೆಯಿತು. ಸರ್ವ ಪಕ್ಷೀಯ ವರದಿಯು ಸ್ವೀಕರಿಸಲ್ಪಡುವದಿತ್ತು. ಸ್ವಾತಂತ್ರ್ಯಪ್ರಿಯರಾದ ಜವಾಹರಲಾಲರು ಇದರ ವಿರುದ್ಧ ಬಂಡನ್ನು ಎಬ್ಬಿಸಿದರು. ಮೋತಿಲಾಲರೇ ಈ ಅಧಿವೇಶನಕ್ಕೆ ಅಧ್ಯಕ್ಷರು. ಅವರೇ ವರದಿಯನ್ನು ಸಿದ್ಧಪಡಿಸಿದ್ದರು. ತಂದೆಮಕ್ಕಳ ಈ ಹೋರಾಟವು ಅದ್ಭುತರಮ್ಯವಾಗಿತ್ತು. ಕೊನೆಗೆ ಮಹಾತ್ಮರ ಮಧ್ಯಸ್ತಿಕೆಯಿಂದ ಸರಕಾರವು ಒಂದು ವರ್ಷದಲ್ಲಿ ಈ ಬೇಡಿಕೆಯನ್ನು ಪೂರೈಸದಿದ್ದರೆ, ಸ್ವಾತಂತ್ರ್ಯಯುದ್ಧವು ಹೂಡಲ್ಪಡುವದೆಂದೂ ಸಾರಿತು.

ಜವಾಹರಲಾಲರು, ಯುದ್ಧದ ಸಿದ್ಧತೆಯನ್ನು ನಡೆಯಿಸಹತ್ತಿದರು. ತರುಣರ ಸಂಘಟನೆಗೆ ಪ್ರಾರಂಭವಾಯಿತು. ಹಿಂದುಸ್ಥಾನೀ ಸೇವಾದಲವು ಶಿಬಿರಗಳನ್ನು ತೆಗೆದು ಸೈನಿಕರನ್ನು ಸಿದ್ಧಪಡಿಸಹತ್ತಿತು. ಕೂಲಿಕಾರರ

ಚಳವಳಿಗೆ, ಜವಾಹರಲಾಲರು ಕೈಹಾಕಿದರು. ಗೆಶ್ತಿನೇ ಇಸ್ವಿಯ ಮುಂಬರುವ ಯುದ್ಧದ ಸೂಚನೆಯನ್ನು ಮಾಡುವಂತಿತ್ತು. ಸಮಯ ವನ್ನು ಸಾಧಿಸಿ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವ ಹವಣಿಕೆಯು ಜವಾಹರಲಾಲರಿಗೆ ಒಳ್ಳೇ ಚನ್ನಾಗಿ ಸಾಧಿಸಿದೆ. ರಾಷ್ಟ್ರದ ವಾತಾವ ಣವು ಕೂಲಿಕಾರರ ಚಳವಳಿಯಿಂದ ತುಂಬಿದಾಗ, ಅ. ಭಾ. ಕಾ. ಕಮೀಟಿ ಯಲ್ಲಿ ಕೆಳಗಿನ ಗೊತ್ತುವಳಿಯನ್ನು ಪಾಸುಮಾಡಿಕೊಂಡರು.

'ಭಾರತೀಯರ ದಾರುಣವಾದ ದುಃಖದಾರಿದ್ರ್ಯಗಳಿಗೆ ವಿದೇಶಿಯರ ಸುಲಿ ಯೊಂದೇ ಅಲ್ಲದೆ ಸಮಾಜದ ಆರ್ಥಿಕಘಟನೆಯೂ ಕಾರಣವಾಗಿದೆ. ತಮ್ಮ ಸುಲಿಗೆಯು ತಡೆಯಿಲ್ಲದೆ ನಡೆಯಬೇಕೆಂದು, ಬ್ರಿಟಿಶರು ಈ ಆರ್ಥಿಕಘಟನೆಯ ಸಮರ್ಥನೆಯನ್ನು ಮಾಡುತ್ತಾರೆಂದು ಈ ಕಮೀಟಿಯು ಅಭಿಪ್ರಾಯ ಪಡುತ್ತದೆ. ಈ ದುಃಖದಾರಿದ್ರ್ಯ ಗಳನ್ನು ಪರಿಹರಿಸಿ, ಹಿಂದೀ ಜನತೆಯನ್ನು ಸುಧಾರಿಸಬೇಕಾದರೆ, ಭಾರತೀಯ ಜನಾಂಗದ ಸದ್ಯದ ಆರ್ಥಿಕ ಮತ್ತು ಸಾಮಾಜಿಕ ಘಟನೆಯಲ್ಲಿಯೇ ಮೂಲಭೂತವಾದ ಬದಲಾವ ಗಳನ್ನು ಮಾಡಿ ಮಹತ್ತರವಾದ ಅಸಮಾನತೆಗಳನ್ನು ನಿರ್ಮೂಲಿಸಬೇಕು'

ಇದು ಸರಳವಾಗಿ ಸಾಮ್ಯವಾದವನ್ನು ಒಪ್ಪಿಕೊಂಡಂತೆ ಇತ್ತು. ಇದರಿಂದ ಕಾಂಗ್ರೆಸ್ಸಿನ ದೃಷ್ಟಿಕೋನವು ಬದಲಾಯಿತು. ಮೆಲ್ಲಮೆಲ್ಲನೆ ರಾಷ್ಟ್ರದ ವಿಚಾರಗಳು ಈ ದಿಶೆಯಲ್ಲಿ ಹರಿಯಹತ್ತಿದವು. **ಇದ ಮೂಲಪುರುಷರು ಇವರೇ.**

ಭಾರತದಲ್ಲಿ ಒಂದೊಂದೇ ಸಂಗತಿಗಳು ಭಾರತೀಯರನ್ನು ಕೆರಳಿಸ ಹತ್ತಿದವು. ಭಗತಸಿಂಗರ ಬಾಂಬಿನ ಸ್ಫೋಟ, ಸ್ಯಾಂಡರ್ಸರ ಕೊಲೆ, ಮೀರತ ಖಟ್ಲೆ, ಕೂಲಿಕಾರರ ಮುಷ್ಕರಗಳು ಇವೆಲ್ಲವೂ ಭಾರತೀಯ ಅಂತಃಕರಣ ವನ್ನು ಕೆರಳಿಸುತ್ತ ನಡೆದಿದ್ದವು. ವ್ಹಾಯಿಸರಾಯರ ಘೋಷಣೆ ಪ್ರತಿ ಘೋಷಣೆಗಳಾದವು. ಭಾರತೀಯರ ಬೇಡಿಕೆಯು ಧಿಕ್ಕರಿಸಲ್ಪಟ್ಟಿತು. ಲಾಹೋರ ಕಾಂಗ್ರೆಸ ಸಮೀಪಿಸಿದಂತೆ ರಾಷ್ಟ್ರದಲ್ಲಿ ಉತ್ಸಾಹವು ಹೆಚ್ಚುತ್ತ ಬಂದಿತು. ರಾಷ್ಟ್ರಕ್ಕೆ ತನ್ನ ಪ್ರತಿಜ್ಞೆಯ ಅರಿವು ಉಂಟಾ ಗಿತ್ತು. ಸ್ವಾತಂತ್ರ್ಯಪ್ರಿಯ ತರುಣರು ತಮ್ಮ ಕಾಲವು ಸಮೀಪಿಸಿತೆಂದು ಹುರುಪಿನಿಂದ ಮುಂದಡಿ ಇಡಹತ್ತಿದರು. ಲಾಹೋರ ಕಾಂಗ್ರೆಸ್ಸಿಗೆ **ಸ್ವಾತಂತ್ರ್ಯಪ್ರಿಯರಾದ ಪಂ. ಜವಾಹರಲಾಲರೇ ಅಧ್ಯಕ್ಷರಾಗಿ**

ಆರಿಸಲ್ಪಟ್ಟಿದ್ದರು. ಆದರಿಂದ ಯುವಕರ ಉತ್ಸಾಹಕ್ಕೆ ಮಿತಿಯೇ ಇರಲಿಲ್ಲ. ಕಾಂಗ್ರೆಸ್ಸಿನ ಇತಿಹಾಸದಲ್ಲಿಯೇ ಈ ಕಾಂಗ್ರೆಸ್ಸು ಮಹತ್ವವಾದುದೆಂದು ಹೇಳಬಹುದು. ರಾಷ್ಟ್ರವು ಧೀರ ಗಂಭೀರವಾದ ಪರಿಸ್ಥಿತಿಯಲ್ಲಿತ್ತು. **ನೂತನ ಯುಗದ ಸೂರ್ಯೋದಯವಾಗಬೇಕಿತ್ತು.** ವಾತಾವರಣವೆಲ್ಲವೂ ವಿದ್ಯುತ್ಪ್ರವಾಹದಿಂದ ತುಂಬಿತುಳುಕುತ್ತಿತ್ತು.

ಕಾಂಗ್ರೆಸ್ಸಿನ ಅಧ್ಯಕ್ಷಸ್ಥಾನದಲ್ಲಿ ನಿಂತು ಜವಾಹರಲಾಲರು, **ನಾನು ಸಾಮ್ಯವಾದಿಯು, ಸಂಪೂರ್ಣ ಸ್ವಾತಂತ್ರ್ಯವಾದಿಯು.** ಎಂದು ಸಾರಿದರು. ಹೀಗೇ ಡಿಶೆಂಬರದ ರಾತ್ರಿಯು ಮುಗಿಯುತ್ತ ಬಂದಿತು. ರಾತ್ರಿ ೧೨ ಘಂಟೆಗೆ ಸ್ವಾತಂತ್ರ್ಯದ ಘೋಷಣೆಯು ಮಾಡಲ್ಪಟ್ಟಿತು. ಆ ಕ್ಷಣದ ಆನಂದ, ಉತ್ಸಾಹ, ವೀರ ನಿನಾದಗಳು ರೋಮಾಂಚಕಾರಿಯಾಗಿದ್ದವು. ತರುಣರೆಲ್ಲರೂ ಪಂಜರದೊಳಗಿನ ಗಿಳಿಯು ಹೊರಬಿದ್ದೊಡನೆ ವಿಶಾಲವಾದ ಗಗನದಲ್ಲಿ ಮನಬಂದಷ್ಟು ಹಾರಾಡುವಂತೆ ಸಾಮ್ರಾಜ್ಯದಿಂದ ಹೊರಬಿದ್ದೆವೆಂದು ಕುಣಿದಾಡಿದರು. ಗರ್ಜಿಸಿದರು. ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಆನಂದೋದ್ರೇಕದಲ್ಲಿ ಮೈಮರೆತರು. ಬ್ರಿಟಿಶ ಸಾಮ್ರಾಜ್ಯವನ್ನೇ ಏಕೆ ಜಗತ್ತನ್ನೇ ಗೆಲ್ಲುವೆವೆಂಬ ಹುಮ್ಮಸವು ಕಾಣಿಸುತ್ತಿತ್ತು. ಆ ಕ್ಷಣವನ್ನು ಅಲ್ಲಿದ್ದು ಅನುಭವಿಸಿದವರು ಬಲ್ಲರೇ ವಿನಃ ಅನ್ಯರಿಗೆ ಅದರ ಕಲ್ಪನೆಯಾಗುವದು ಕಠಿಣ.

**ಸಂಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಧ್ಯೇಯ**ವೆಂದು ಸಾರಲ್ಪಟ್ಟಿತು. ದುಂಡುಮೇಜಿನ ಪರಿಷತ್ತಿನಿಂದ ಏನೂ ಪ್ರಯೋಜನವಾಗುವದಿಲ್ಲೆಂದೂ, ಸ್ವಾತಂತ್ರ್ಯದ ಹೋರಾಟದ ಪ್ರಾರಂಭವೆಂದು ಕೌನ್ಸಿಲ ಸಭಾಸದರೆಲ್ಲರೂ ಹೊರಗೆ ಬರಬೇಕೆಂದೂ ರಾಷ್ಟ್ರವು ವಿಧಾಯಕ ಕಾರ್ಯಕ್ರಮವನ್ನು ಮುಂದರಿಸಿ, ಯೋಗ್ಯ ಸಮಯವೆಂದೆನಿಸಿದಾಗ ಅ. ಭಾ. ಕಾಂಗ್ರೆಸ ಕಮಿಟಿಯು ಕರಬಂದಿಯನ್ನೊಳಗೊಂಡ ಸತ್ಯಾಗ್ರಹ ಸಮರವನ್ನು ಹೂಡಬೇಕೆಂದು ನಿರ್ಣಯಿಸಿತು. ಈ ವೇಳೆಯ ಗೊತ್ತುವಳಿಗಳು ಕೇವಲ ಟೀಕೆಗಳಾಗಲೀ ಅಥವಾ ಅಭಿಪ್ರಾಯಗಳ ಪುನರುಚ್ಚಾರಣೆಯಾಗಲಿ ಇರದೆ, ಅವು ಕಾರ್ಯ

ಸ್ಫೂರ್ತಿಯನ್ನು ಕೆರಳಿಸುವ ಸಿಂಹನಾದಗಳಾಗಿ, ನಾಡನ್ನು ವೀರಭೂಮಿಯನ್ನಾಗಿ ಮಾಡುವ ಕೋಟ್ಯಂತರ ಜೀವರಾಸಿಗಳನ್ನು ಹುರಿದುಂಬಿಸುವಂತಹಗಳೂ ಆದವು.

ಮರುದಿನವೇ ವರ್ಕಿಂಗ ಕಮಿಟಿಯ ಸಭೆಯಾಗಿ, ಅಖಿಲಭಾರತದಲ್ಲೆಲ್ಲ ಜನವರಿ ೨೬ನೇ ತಾರೀಖಿಗೆ ಸ್ವಾತಂತ್ರ್ಯದಿನವೆಂದು ಪಾಲಿಸಲ್ಪಡಬೇಕೆಂದು ನಿರ್ಣಯಿಸಿತು. ಸ್ವಾತಂತ್ರ್ಯದ ಘೋಷಣೆಯು ಮಾಡಲ್ಪಟ್ಟಿತು.

## ಸಂಪೂರ್ಣ ಸ್ವಾತಂತ್ರ್ಯ ಪ್ರತಿಜ್ಞೆ

ಸ್ವಾತಂತ್ರ್ಯವನ್ನು ಉಪಭೋಗಿಸುವ, ತಮ್ಮ ಶ್ರಮದ ಫಲವನ್ನು ದೊರಕಿಸುವ ಮತ್ತು ಮಾನವೀ ಜನಾಂಗಕ್ಕೆ ಅವಶ್ಯವಿರುವ ವಸ್ತುಗಳನ್ನು ಸಂಪಾದಿಸುವ ಹಕ್ಕು ಜಗತ್ತಿನ ಇತರ ಜನಾಂಗದವರಿಗಿರುವಂತೆ ಹಿಂದುಸ್ತಾನದ ಜನತೆಗಾದರೂ ಉಂಟು. ಜನತೆಯ ಈ ಹಕ್ಕನ್ನು ಕಸಿದುಕೊಂಡು ದಬ್ಬಾಳಿಕೆಯನ್ನು ನಡಿಸುವಂಥ ಯಾವದೇ ಸರಕಾರವನ್ನು ಬದಲು ಮಾಡುವ ಅಥವಾ ನಾಶಗೊಳಿಸುವ ಅಧಿಕಾರವು ಜನತೆಗುಂಟು. ಬ್ರಿಟಿಶ ಸರಕಾರದವರು ಹಿಂದೀಯರ ಸ್ವಾತಂತ್ರ್ಯವನ್ನು ನಷ್ಟಗೊಳಿಸಿದ್ದಲ್ಲದೆ ಸಾಮಾನ್ಯ ಜನತೆಯ ರಕ್ತಶೋಷಣೆಯನ್ನು ಮಾಡಿ ತಮ್ಮ ಅಸ್ತಿತ್ವವನ್ನು ಇಲ್ಲಿ ನೆಲೆಗೊಳಿಸಿದ್ದಾರೆ; ಮತ್ತು ಹಿಂದುಸ್ತಾನದ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಹಾಗು ಆಧ್ಯಾತ್ಮಿಕ ನಾಶವನ್ನು ಈ ಸರಕಾರದವರು ಮಾಡಿದ್ದಾರೆ. ಆದಕಾರಣ ಬ್ರಿಟಿಶ ಸಾಮ್ರಾಜ್ಯದ ಸಂಪೂರ್ಣ ಸಂಬಂಧವನ್ನು ಕಡಿದು ಹಾಕಿ ಹಿಂದುಸ್ತಾನವು ಪೂರ್ಣ ಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂಬುದರಲ್ಲಿ ನಮ್ಮ ವಿಶ್ವಾಸವಿದೆ.

'ನಮ್ಮ ಸ್ವಾತಂತ್ರ್ಯ ಸಂಪಾದನೆಗೆ ಅತ್ಯಂತ ಪ್ರಭಾವಶಾಲಿಯಾದ ಮಾರ್ಗವು 'ಅಹಿಂಸಾಮಯವೆಂದು' ನಾವು ತಿಳಿಯುತ್ತೇವೆ. ಹಿಂದುಸ್ತಾನವು ಶಕ್ತಿಯನ್ನು ಸ್ವಾವಲಂಬಿತ್ವವನ್ನು ಶಾಂತ ಮತ್ತು ಯೋಗ್ಯಉಪಾಯಗಳಿಂದ ದೊರಕಿಸಿ ಸ್ವಾತಂತ್ರ್ಯ ಪಥದಲ್ಲಿ ಹೆಚ್ಚಾಗಿ ಮುಂದಡಿ ಇಟ್ಟಿದೆ. ಮತ್ತು ಈ ಮಾರ್ಗಗಳನ್ನು ಅನುಸರಿಸುವದರಿಂದಲೇ ನಮ್ಮ ದೇಶವು ಸಂಪೂರ್ಣ ಸ್ವಾತಂತ್ರ್ಯವನ್ನು ಸಂಪಾದಿಸುತ್ತದೆ.'

'ಸಂಪೂರ್ಣ ಸ್ವಾತಂತ್ರ್ಯವು ನಮಗೆ ದೊರೆಯುವವರೆಗೆ ನಾವು ಈ ಅಹಿಂಸಾಮಯವಾದ ಯುದ್ಧವನ್ನು ಮುಂದರಿಸುವೆವು ಎಂಬ ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಇಂದು ನಾವು ಮಾಡುವೆವು.

ಮುಂದೆ ಮಾರ್ಚದಲ್ಲಿ ದಾಂಡಿ ಪ್ರಯಾಣದಿಂದ ಪ್ರಾರಂಭವಾದ

ಸ್ವಾತಂತ್ರ್ಯ ಯುದ್ಧವು ಇನ್ನೂ ನಡೆದೇ ಇದೆ. ಜವಾಹರಲಾಲರು ರಾಷ್ಟ್ರದಲ್ಲಿ ಮಾಡಿದ ಈ ಕ್ರಾಂತಿಯೇನು ಸಾಮಾನ್ಯವಾದುದಲ್ಲ. ರಾಷ್ಟ್ರದ ದೊಡ್ಡ ಹೆಜ್ಜೆಯು ಮುಂದೆ ಬಿದ್ದಿತು.

ರಾಷ್ಟ್ರೀಯ ಹೋರಾಟವು ೩೪ರಲ್ಲಿ ರೂಪಾಂತರವನ್ನು ಹೊಂದಿತು. ಶತ್ರುಗಳು ಯುದ್ಧಕ್ಷೇತ್ರವನ್ನು ಬದಲಿಸಿದೊಡನೆಯೇ ನಮಗೂ ಅಲ್ಲಿಯೇ ಎದುರಾಗಬೇಕಾಯಿತು. ರಾಷ್ಟ್ರವು ತನ್ನ ಹೋರಾಟವನ್ನು ಕೌನ್ಸಿಲ್ಲಿನ ಮುಖಾಂತರ ನಡೆಯಿಸಿತು. ಸ್ವಾತಂತ್ರ್ಯ ಪ್ರಿಯರಾದ ಜವಾಹರಲಾಲರು, ಯಾವಾಗಲು ರಾಷ್ಟ್ರವು ರಾಷ್ಟ್ರದ ಗುರಿಯಿಂದ ಕೆಳಗಿಳಿಯಬಾರದೆಂದು ನೋಡಿಕೊಳ್ಳುತ್ತಿರುವರು. ಮಹಾತ್ಮರು ರಾಜಕೀಯ ಸನ್ಯಾಸವನ್ನು ಸ್ವೀಕರಿಸಿದ್ದರಿಂದ ಭಾರತದಲ್ಲಿ ಇವರನ್ನು ಬಿಟ್ಟರೆ ಮತ್ತೊಬ್ಬರಿಲ್ಲ. ಆದ್ದರಿಂದಲೇ **ಲಖನೌ, ಫೈಜಪೂರ** ಕಾಂಗ್ರೆಸ್ಸುಗಳಿಗೆ ಇವರನ್ನೇ ಅಧ್ಯಕ್ಷರನ್ನಾಗಿ ಆರಿಸಿತು. ತಮ್ಮ ಸಿಂಹ ನಾದದಿಂದ ಶತ್ರುಗಳ ಎದೆಗೆಡೆಸಿದರು. ಚುನಾವಣೆಯಲ್ಲಿ ಇವರು ಮಾಡಿದ ಕಾರ್ಯವು ಅವರ್ಣನೀಯವಾಗಿದೆ. ಇವರ ಸಂಘಟನಾ ಶಕ್ತಿಯೂ ಕರ್ತೃತ್ವಶಕ್ತಿಯೂ ಕಾರ್ಯದಕ್ಷತೆಯೂ ಜನರನ್ನು ಮುಗ್ಧಗೊಳಿಸಿದೆ. ಚುನಾವಣೆಯೆಂದು ಸರಕಾರವು ಹೂಡಿದ ಆಟವನ್ನು ಚೂರು ಚೂರು ಮಾಡಿದರು. ಶತ್ರುಗಳು ಕೂಡ ಇವರ ಕಾರ್ಯಕ್ಕೆ ಬೊಟ್ಟು ಕಚ್ಚಿದರು. ಹೋರಾಟದ ದಿಶೆಯನ್ನು ಸ್ಪಷ್ಟವಾಗಿ ತೋರಿಸುತ್ತ ಮುಂದೆ ಸಾಗಿದ್ದಾರೆ. ಮುಂದಿನ ಹೋರಾಟದ ಗರ್ಜನೆಯನ್ನು ಮಾಡತೊಡಗಿದ್ದಾರೆ. ಅವರ ದಿವ್ಯವಾದ ವ್ಯಕ್ತಿತ್ವವೂ, ಸ್ವಾತಂತ್ರ್ಯ ಪ್ರೇಮವೂ ಮುಂಧೋರಣವೂ ಅವರ್ಣನೀಯವಾಗಿವೆ. ಭಾರತೀಯರ ಆಶೆ ಆಕಾಂಕ್ಷೆಗಳೆಲ್ಲ ಇವರಲ್ಲಿ ನೆಟ್ಟಿವೆ. **ಇವರೇ ಮುಂದಿನ ಯುಗದ ನಾಯಕರೆಂದು** ಭಾರತವು ದಾರೀ ನೋಡುತ್ತಲಿದೆ. ತಮ್ಮ ತರುವಾಯ ಭಾರತದ ಹೋರಾಟವು ಇವರಿಂದಲೇ ಸುರಕ್ಷಿತವಾಗಿ ನಡೆಯಬಲ್ಲದೆಂದು ಮಹಾತ್ಮರೂ ನಂಬಿದ್ದಾರೆ.

---

# ಪಂ. ಜವಾಹರಲಾಲರ ವ್ಯಕ್ತಿತ್ವ

ಭಾರತೀಯರ ಅಂತಃಕರಣವನ್ನೆಲ್ಲ ಸೆಳೆದುಕೊಂಡ ಪಂ. ಜವಾಹರಲಾಲರ ವೈಶಿಷ್ಟ್ಯವೇನು? ಅವರ ಯಾವ ಗುಣಗಳು ಜನರನ್ನು ಮುಗ್ಧಗೊಳಿಸಿವೆ? ಅವರನ್ನು ಈ ಸ್ಥಾನಕ್ಕೆ ತಂದಿವೆ? ಎಂಬುದು ವಿಚಾರಾರ್ಹವಾಗಿದೆ.

ಪಂಡಿತ ಜವಾಹರಲಾಲರಲ್ಲಿರುವ **ತೇಜಸ್ವಿತೆಯೇ** ಅವರನ್ನು ಈ ಮಟ್ಟಕ್ಕೆ ತಂದು ಮುಟ್ಟಿಸಿದೆ. ಈ ಗುಣವು ಅವರಲ್ಲಿ ಮೊದಲಿನಿಂದಲೂ ಕಂಡುಬರುತ್ತಿದೆ. ೧೯೧೭ರಲ್ಲಿ ಆನಿಬಿಝೆಂಟರನ್ನು ಸ್ಥಾನಬದ್ಧರನ್ನಾಗಿ ಮಾಡಿದಾಗ ಲಖನೌದಲ್ಲಿ ಹೋಂರೂಲಿನ ವಿಶೇಷ ಅಧಿವೇಶನವು ನಡೆಯಿತು. ಅದಕ್ಕೆ ಪಂಡಿತ ಮೋತಿಲಾಲರು ಅಧ್ಯಕ್ಷರಾಗಿದ್ದರು. ಅವರು ತಮ್ಮ ಭಾಷಣದಲ್ಲಿ ಸರಕಾರವು ಮಾಡಿದ ಅನ್ಯಾಯಗಳನ್ನೆಲ್ಲ ವರ್ಣಿಸಿ ನಾವು ಇಷ್ಟೆಲ್ಲ ಚಳವಳಿಯನ್ನು ಮಾಡುತ್ತಿದ್ದರೂ, ಬ್ರಿಟಿಶ ಜನರ ಸದ್ಭಾವನೆಯ ಮೇಲೆ ನಾವು ವಿಶ್ವಾಸವಿಡಲೇಬೇಕು. ಯಾಕಂದರೆ, ನಮ್ಮ ಭಾಗ್ಯವನ್ನು ನಿರ್ಣಯಿಸುವ ಕೊನೆಯ ಅಧಿಕಾರವು ಅವರ ಕೈಯಲ್ಲಿಯೇ ಇದೆ ಎಂದರು. ಪ. ಜವಾಹರಲಾಲರಿಗೆ ಸಹಸವಾಗಲಿಲ್ಲ. ಕೂಡಲೆ '**ಪ್ರಶ್ನೆಯಿದೆ**' ಎಂದು ಕೂಗಿದರು. ಮೋತಿಲಾಲರಿಗೆ ಪರಿಚಯಧ್ವನಿ ಎನಿಸಿತು. ತನ್ನನ್ನು ತಡೆಯುವವರಾರು? ಎಂದು ಸಿಟ್ಟಿಗೆದ್ದು ಮೇಜನ್ನು ಅಪ್ಪಳಿಸಿ, ನನ್ನ ಮಾತುಗಳನ್ನು ಅಲ್ಲಗಳೆಯುವ ಸಾಹಸವನ್ನು ಮಾಡುವವರು ಯಾರು? ಎಂದರು. ಮತ್ತೆ ಮೆಲ್ಲಗೆ **ಪ್ರಶ್ನೆಯಿದೆ,** ಎಂಬ ಧ್ವನಿಯು ಬಂದಿತು. ಅವರು ಮುಂದೆ ಬರಬೇಕೆಂದರು. ಅವರು ಜವಾಹರಲಾಲರೆಂದು ಗೊತ್ತಾಯಿತು. ಅವರ **ತೇಜಸ್ಸೇ ಅವರನ್ನು ದೊಡ್ಡವರನ್ನಾಗಿ ಮಾಡಿದೆ** ಎಂಬುದರಲ್ಲಿ ಸಂಶಯವಿಲ್ಲ.

ಜವಾಹರಲಾಲರು ಚಿಕ್ಕಂದಿನಲ್ಲಿ ಇಂಗ್ಲಂಡದಲ್ಲಿಯೇ ಬೆಳೆದುದರಿಂದ ಆ ಜನಾಂಗದ **ಸಾಹಸವೂ** ಇವರ ಮೈಯ್ಯಲ್ಲುಂಡಿದೆ. ಇವರು

ಯಾವಾಗಲೂ ಸಾಹಸಪ್ರಿಯರು. ಸಾಹಸ ಮಾಡುವದರಲ್ಲಿಯೇ ಇವರಿಗೆ ಆನಂದವೆನಿಸುವದು. ಆದುದರಿಂದಲೇ ಅಸಾಧ್ಯಕಾರ್ಯಗಳಿಗೆ ಕೈ ಹಾಕುವ ಸಾಹಸಮಾಡುತ್ತಾರೆ. ಒಮ್ಮೆ ಹಿಮಾಲಯದ ಯಾತ್ರೆಗೆ ಹೋದಾಗ **ಅಮರನಾಥ** ಶಿಖರವನ್ನೇರಹೊರಟರು. ಹಿಮವು ಬೀಳುತ್ತಿತ್ತು. ಅದನ್ನು ನೋಡಬೇಕೆಂಬ ಲವಲವಿಕೆ. ಹಗ್ಗಗಳನ್ನು ಒಬ್ಬರಿಗೊಬ್ಬರು ಕಟ್ಟಿಕೊಂಡು ಹೊರಟಿದ್ದರು. ಕಾಲಲ್ಲಿಯ ಹಿಮವು ಕತ್ತರಿಸುತ್ತಿತ್ತು. ನಡೆಯುವದು ಕಷ್ಟವಾಯಿತು. ಉಸಿರಾಡಿಸುವದು ಕೂಡ ಕಠಿಣವಾಯಿತು. ಆದರೆ ಹಿಮಾಚ್ಛಾದಿತವಾದ ಶಿಖರಗಳ ಸಾಲು ದೇವತೆಗಳ ಕ್ರೀಡಾಂಗಣದಂತೆ, ಮನೋಹರವಾಗಿದ್ದವು. ಹೊರಟರು, ಮುಂದೆ ಹೊರಟರು. ೧೮೦೦೦ ಅಡಿ ಎತ್ತರ ಪ್ರದೇಶದಲ್ಲಿದ್ದರು. ಇನ್ನೂ ಅರ್ಧ ಮೈಲು ಮುಂದೆ ಹೋಗಿದ್ದರೆ, ಇಚ್ಛಿತ ಸ್ಥಾನವನ್ನು ಮುಟ್ಟುತ್ತಿದ್ದರು. ಆದರೆ ಕಾಲಲ್ಲಿಯ ಹಿಮವು ಕತ್ತರಿಸಿತು. ಕಂದರದೊಳಗೆ ಉರುಳಿದರು. ಅಕಸ್ಮಾತ ಒಂದು ಕಂಟಿಗೆ ಸಿಕ್ಕರು. ಅವರ ಹಗ್ಗವು ಅವರನ್ನು ಉಳಿಸಿತು. ಹಗ್ಗದಿಂದ ಮೇಲಕ್ಕೆ ಜಗ್ಗಿಕೊಂಡರು. ಇವರ ಈ ಸಾಹಸವೃತ್ತಿಯೇ ಇಂದು ರಾಜಕಾರಣದಲ್ಲಿ ನೃತ್ಯವಾಡುತ್ತಲಿದೆ. ಅನೇಕ ಸಾಹಸದ ಕಾರ್ಯಕ್ಕೆ ನುಗ್ಗಿಸುತ್ತಲಿದೆ. ಸಶಸ್ತ್ರ ಪೋಲೀಸರ ದಳವನ್ನು ನುಗ್ಗುವದರಲ್ಲಿ ಇವರಿಗೆ ಎಳ್ಳಷ್ಟೂ ಭಯವೆನಿಸುವದಿಲ್ಲ.

ಸಂಕಟಗಳನ್ನು ಸಹಿಸುವದರಲ್ಲಿಯೇ ಇವರಿಗೆ ಆನಂದವೆನಿಸುತ್ತದೆ. **ಸಂಕಟದಲ್ಲಿಯೇ ಬಾಳಿನ ಬೆಳಕು ಎಂಬುದೇ** ಇವರ ಸಿದ್ಧಾಂತ. ಸಂಕಟ ಬಂದೊಡನೆಯೇ ಇವರಿಗೆ ಬಾಹು ಸ್ಫುರಣವಾಗುತ್ತದೆ. ವೀರತೆಯು ಹೆಚ್ಚುತ್ತದೆ. ಇವರ ಧೈರ್ಯ ಸಾಹಸಗಳಿಗೆ ಉಕ್ಕು ಬರುತ್ತದೆ. ೧೯೩೦ರಲ್ಲಿ **ಕುಂಭಮೇಳಾ** ಪರ್ವಣಿಯು ಬಂದಿತು. ಲಕ್ಷಾವಧಿ ಜನ ಸಾಧುಗಳು ತ್ರಿವೇಣಿ ಸ್ನಾನಕ್ಕೆ ಬಂದರು. ಆದರೆ ಸರಕಾರವು ನೀರು ಆಳವಾಗಿರುವದೆಂಬ ನೆವತೋರಿಸಿ, ತಡೆಗಟ್ಟಿದರು. ಕಾಲಾಳುಗಳೂ, ಕುದುರೆಸ್ವಾರರೂ ಬಂದು ಎಲ್ಲರನ್ನೂ ನಿಲ್ಲಿಸಿದರು. ಪಂ. ಮಾಲವೀಯರೂ ಈ ಮೇಳದಲ್ಲಿದ್ದರು. ಮಾಲವೀಯರು ಸರಕಾರದ ಸಂಗಡ ಪತ್ರ

ವ್ಯವಹಾರವನ್ನು ಮಾಡಿದರು. ಹೇಳಿದರು, ಕೇಳಿದರು, ಯಾವುದಕ್ಕೂ ಬಗೆಹರಿಯಲಿಲ್ಲ. ಈ ಸುದ್ದಿಯು ಜವಾಹರಲಾಲರಿಗೆ ಹತ್ತಿತು. ನೂರಾರು ಸ್ವಯಂಸೇವಕರೊಡನೆ ಹೊರಟರು. ಮಾಲವೀಯರ ಮಾತಿಗೆ, ತಲೆಬಾಗಿ ಸುಮ್ಮನೆ ಕುಳಿತರು. ಬಿಸಿಲು ರಣಗುಟ್ಟಿ ಹೊಡೆಯುತ್ತಿತ್ತು. ಬೆವರು ಇಳಿಯುತಿತ್ತು. ಮೇಲೆ ದಂಡಾಳುಗಳ ದರ್ಪ. ಮೂರು ಹೊಡೆಯಿತು ನಾಲ್ಕು ಹೊಡೆಯಿತು. ಮುಂದೆ ಸಹನ ಮಾಡುವದು ಜವಾಹರಲಾಲರಿಗೆ ಆಗಲಿಲ್ಲ. ರಾಷ್ಟ್ರಧ್ವಜವನ್ನೆತ್ತಿಕೊಂಡವರೆ ಮುಂದಕ್ಕೆ ನುಗ್ಗಿದರು. ಪೋಲೀಸರು ಬೆನ್ನು ಹತ್ತಿದರು. ಕೇಳಲಿಲ್ಲ; ನೆಟ್ಟಗೆ ಹೋದವರೆ ತಟ್ಟೆಯನ್ನೊದ್ದರು. ಸ್ನಾನಕ್ಕೆ ಮಾರ್ಗ ಮಾಡಿದರು. ತ್ರಿವೇಣಿಯಲ್ಲಿ ಮಿಂದರು. ಇಷ್ಟಾಗುವದೊಂದೇತಡ ಎಲ್ಲರೂ ಹೋಗಿ ಸ್ನಾನಮಾಡಿದರು. ಸಂಕಟದಲ್ಲಿ ಧುಮುಕುವ ಈ ವೃತ್ತಿಯೇ ಇಂದು ಇವರನ್ನು ಯುದ್ಧಕ್ಕೆ ಆಹ್ವಾನಿಸುತ್ತದೆ. ಅದನ್ನೇ ಅವರ ಮನವೂ ಮೆಚ್ಚುತ್ತದೆ.

ಇವರ ವ್ಯಕ್ತಿತ್ವಕ್ಕೆ ಮಹತ್ವವಾದ ಕಾರಣವು ಇನ್ನೊಂದು ಉಂಟು. **ನಿಸ್ಸೀಮವಾದ ದೇಶಪ್ರೇಮ**. ದೇಶಸೇವೆಯ ಮುಂದೆ ಎಲ್ಲವೂ ಇವರಿಗೆ ತುಚ್ಛವೆನಿಸುತ್ತದೆ. ಹೆಂಡರು-ಮಕ್ಕಳು, ತಂದೆ-ತಾಯಿ ಇವರೆಲ್ಲರೂ ಅವರ ಮುಂದೆ ಏನೂ ಎನಿಸುವದಿಲ್ಲ. ಮಾತೃಭೂಮಿಯ ಕರೆಯು ಇವರನ್ನು ಮರಳುಮಾಡಿ ಬಿಟ್ಟಿದೆ. ಅದೇ ಇವರ ವಕೀಲಿಗೆ ತಿಲಾಂಜಲಿಯನ್ನು ಕೊಡಿಸಿತು. ಸುಖೋಪಭೋಗವನ್ನು ತ್ಯಜಿಸ ಹಚ್ಚಿತು. ಅದೇ ರಾಜಕುಮಾರರಂತಿದ್ದ ಜವಾಹರಲಾಲರನ್ನು ರೈತರ ಸೇವಕರನ್ನಾಗಿ ಮಾಡಿತು. ಹೆಂಡತಿಯು ಕ್ಷಯರೋಗದಿಂದ ಬಳಲುತ್ತಿದ್ದರೂ, ತಾಯಿಯು ತೀರ ಮುದುಕೆಯಾಗಿದ್ದರೂ ಮಾತೃಭೂಮಿಯ ಕರೆಬಂದೊಡನೆಯೇ ಜೇಲಿಗೆ ಹೊರಟೇಬಿಟ್ಟರು. ಇವರು ದೇಶಸೇವೆಯ ವೃತಬದ್ಧರಾಗಿರುವರು. ಹಗಲು ಇರಳು ಅದೇ ಚಿಂತೆ. ಈ ತ್ಯಾಗವೃತ್ತಿ, ಈ ದೇಶಪ್ರೇಮಗಳೇ ಇಂದು ಜವಾಹರರನ್ನು ಈ ಅಂತಸ್ತಿಗೆ ಏರಿಸಿವೆ.

ಇವರಲ್ಲಿ ಸಾಹಸ, ವೀರ, ಉತ್ಸಾಹಗಳಿದ್ದಂತೆಯೇ ಇವರಿಗೆ ನಿರ್ಮಲವಾದ ಮೃದುಹೃದಯವಿದೆ. ಬಡವರ ಕರಳಿನ ಕೂಗು ಇವರನ್ನು

ಕರಗಿಸುತ್ತದೆ. ದರಿದ್ರಭಾರತದ ದರ್ಶನವೇ ಇವರ ಅಂತಃಕರಣವನ್ನು ಕಲಕುಮಲಕು ಮಾಡಿದುದು. **ಭಾರತದ ಭವಿಷ್ಯವು ರೈತರ ಕೈಯಲ್ಲಿಯೇ ಇದೆ** ಎಂಬ ಸಿದ್ಧಾಂತದಿಂದಲೇ ಮುಂದೆ ಸಾಗಿದ್ದಾರೆ. ಈ ಪ್ರಬಲವಾದ ಬ್ರಿಟಿಶ ಸರಕಾರವೂ ಸಾಮ್ರಾಜ್ಯವೂ ಈ ರೈತರ ರಕ್ತ ದಿಂದಲೇ ಬದುಕಹತ್ತಿದೆ. ಪಟ್ಟಣನಿವಾಸಿಗಳು ಚಕ್ಕಂದದಿಂದ ನಲಿಯು ವದು ರೈತರಿಂದಲೇ. ನಿಜವಾದ ಸ್ವಾತಂತ್ರ್ಯವೆಂದರೆ, ಈ ಸಮಾಜದಲ್ಲಿಯ ಅಸಮಾನತೆಯು ಹೋಗಿ, ಸಾಮ್ಯವಾದ ತಳಹದಿಯ ಮೇಲೆ ರಾಜ್ಯವು ಸ್ಥಾಪಿಸಬೇಕೆಂಬುದೇ ಇವರ ಅರ್ಥ. ಈ ದೃಷ್ಟಿಯಿಂದ ರಾಜಕಾರಣವನ್ನು ರೂಪುಗೊಳಿಸುವದರಲ್ಲಿಯೇ ಇವರ ವೈಶಿಷ್ಟ್ಯವಿದೆ.

ಇವರ ವ್ಯಕ್ತಿತ್ವಕ್ಕೆ ಇವರ ತತ್ವನಿಷ್ಠೆಯೂ ಒಂದು ಮಹತ್ತರ ವಾದ ಕಾರಣವು. ಇವರಿಗೆ ಮಹಾತ್ಮರ ಅಹಿಂಸಾ ತತ್ವದಲ್ಲಿಯೂ, ಅಸಹಕಾರದಲ್ಲಿಯೂ ಸಂಪೂರ್ಣವಾದ ಶ್ರದ್ಧೆಯು. ಅದರಂತೆ ಸಂಪೂರ್ಣ ಸ್ವಾತಂತ್ರ್ಯವೇ ನಿಚ್ಚಳವಾದ ಗುರಿಯು. ರಾಷ್ಟ್ರದ ಜೀವನದಲ್ಲಿ ಅನೇಕ ಬಗೆಯ ಪರಿಳಿತಗಳು ಆಗಿಹೋದವು. ಸಮಯವು ಬಂದಂತೆ ಸಂಚರಿ ಸುವ ಮುಖಂಡರೂ ಆಗಿಹೋದರು. ಆದರೆ ಇವರು ಮಾತ್ರ ತಮ್ಮ ಗುರಿಯಿಂದ ಎಳ್ಳುಕಾಳಷ್ಟು ಕದಲಿಲ್ಲ. ಹೆಜ್ಜೆಯನ್ನು ಮುಂದಿಡುತ್ತ ಹೊರಟಿರುವರೇ ವಿನಃ ಹಿಂದಕ್ಕೆ ತಿರುಗಿ ಸಹ ನೋಡಿಲ್ಲ. ಸ್ವಾತಂತ್ರ್ಯ ಕ್ಕಾಗಿ ಹೋರಾಡುತ್ತಿರುವರು. ರಾಷ್ಟ್ರವು ತನ್ನ ಧ್ಯೇಯದಿಂದ ಚ್ಯುತ ವಾಗದಂತೆ ಯಾವಾಗಲೂ ಜಾಗರೂಕರಾಗಿರುವರು. ಪ್ರಸಂಗದಲ್ಲಿ ಹೊಣೆಗಾರಿಕೆಯನ್ನು ಹೊತ್ತು ರಾಷ್ಟ್ರವನ್ನು ಮುಂದಕ್ಕೆ ಒಯ್ಯು ತ್ತಿರುವರು.

ಇವರ ಶಿಸ್ತು ಜಗತ್ಪ್ರಸಿದ್ಧವಾದುದು. ಅದಕ್ಕೆ ಭಂಗಬಂದರೆ ಇವರ ತಲೆ ಏಳುವದು. ಇವರ ಅಚ್ಚುಕಟ್ಟುತನವೇ ಇವರ ಆಯುಷ್ಯಕ್ಕೆ ರೂಪುಗೊಟ್ಟಿದೆ. ಸಾವಿರಾರು ಕಾರ್ಯಗಳು ಇವರ ಅಚ್ಚುಕಟ್ಟು ತನದ ಮೂಲಕವೇ ಒಳ್ಳೇ ವ್ಯವಸ್ಥಿತವಾಗಿರುತ್ತವೆ. ಇವರಲ್ಲಿ ಮಹತ್ವ ವಾದ ಇನ್ನೊಂದು ಗುಣವೆಂದರೆ, **ಶೀಘ್ರ ನಿರ್ಣಯವು**. ಯಾವುದೇ

ಕಾರ್ಯದಲ್ಲಿ ಶೀಘ್ರವಾಗಿಯೇ ನಿರ್ಣಯಕ್ಕೆ ಬರುತ್ತಾರೆ, ಕಾರ್ಯಕ್ಕೆ ಹತ್ತುತ್ತಾರೆ. ಅಲ್ಲದ ಸಲ್ಲದ ತರ್ಕಕ್ಕೆ ಇವರಲ್ಲಿ ಎಡೆಯೇ ಇಲ್ಲ. ದೀರ್ಘ ಸೂತ್ರಿಗಳಲ್ಲಿ, ಮಹಾತ್ಮರೊಬ್ಬರು ಮಾತ್ರ ಇವರ ಜೀವನದ ತಿರುಳನ್ನು ತಿಳಿದಿರುವರು. ದುಂಡು ಮೇಜಿನ ಪರಿಷತ್ತಿನ ಕಾಲಕ್ಕೆ 'ಕೊನೆಗೆ ಜವಾಹರಲಾಲರನ್ನಾದರೂ ನಿಮ್ಮೊಡನೆ ಕರೆದುಕೊಂಡು ಹೋಗಿರಿ.' ಎಂದು ಮಿತ್ರರು ಆಗ್ರಹಪಡಿಸಿದಾಗ, ಅವರು **ಯಂಗ ಇಂಡಿಯಾ** ದಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

'ನನ್ನ ಮಿತ್ರರಾದ ರೇನಾಲ್ಡ ಮೊದಲಾದವರು ನನ್ನೊಡನೆ ಕೊನೆಗೆ ಜವಾಹರಲಾಲರನ್ನಾದರೂ ಕರೆದುಕೊಂಡು ಹೋಗಲು ಆಗ್ರಹಪಡಿಸುತ್ತಿದ್ದಾರೆ. ಅವರು ನಿರ್ಭಯರಿದ್ದಾರೆ. ವಿನಯಶಾಲಿಗಳೂ ಇದ್ದಾರೆ. ಅವರು ಎಂದೂ ನಿರಾಶೆಯನ್ನು ಅರಿಯದವರು. ಆದುದ ರಿಂದಲೇ ನಿರಾಶೆಯ ಮೂಲ ಕಾರಣವನ್ನು ಕೂಡಲೆ ಕಂಡುಹಿಡಿಯು ವರು. ಕುಟಿಲ ನೀತಿಯು ಇವರಿಗೆ ತ್ಯಾಜ್ಯವಿರುವದರಿಂದ ಮರಳು ಮಾಡುವ ಸವಿಮಾತುಗಳನ್ನು ಇವರು ನಿಷೇಧಿಸುವರು. ಮತ್ತು ಸರಳ ಮಾರ್ಗವನ್ನು ಸಮರ್ಥಿಸುವರು. ನಾನು ನಾನೇ ಆದರ್ಶವಾದಿ ಎಂದು ಬಗೆದಿದ್ದೆ. ಆದರೆ, ಜವಾಹರರು ನನ್ನಕಿಂತಲೂ ಈ ವಿಷಯದಲ್ಲಿ ಮುಂದೆ ಗಾಡಿ ಹೊಡೆಯುವದರಲ್ಲಿರುವರು. ಆದುದರಿಂದ ಜವಾಹರರು ನನ್ನನ್ನು ಹಾದೀ ತಪ್ಪಿಗೊಡರೆಂದೂ ಸಂದೇಹದ ಸಮಯದಲ್ಲಿ ತಮ್ಮ ಶೀಘ್ರ ನಿರ್ಣಯಗಳಿಂದ ನನ್ನನ್ನು ಎತ್ತಿ ಹಿಡಿಯುವರೆಂದೂ ತಿಳಿದು ಮಿತ್ರರ ಅಭಿಪ್ರಾಯವನ್ನು ನಾನು ಹೃತ್ಪೂರ್ವಕವಾಗಿ ಸಮರ್ಥಿಸು ತ್ತೇನೆ. ಆದರೆ, ಅವರನ್ನು ನಾನು ಕರೆದುಕೊಂಡು ಹೋದರೆ, **ಭಾರತ ವನ್ನು ಹೊಣೆಗಾರಿಕೆಯಿಂದ ರಕ್ಷಿಸುವವರಾರು? ಅವರ ಮೇಲೆ ಭಯಂಕರವಾದ ಹೊಣೆಗಾರಿಕೆಯಿದೆ**'. ಮಹಾತ್ಮರ ಈ ಮಾತು ಎಷ್ಟು ಸತ್ಯವಿದೆ ಎಂಬುದನ್ನು ವಾಚಕರೇ ವಿಚಾರಿಸಬೇಕು. **ಮಹಾತ್ಮರ ಭವಿಷ್ಯವಾಣಿಯಿದು.**

ಕ್ರಾಂತಿ, ಯುದ್ಧಪ್ರಿಯತೆ, ಉಗ್ರತೆ ಇವು ಅವರ ತಂದೆಯಿಂದ

ಬಂದ ಗುಣಗಳು. ಅಪರಿಮಿತ ಕಾರ್ಯಶಕ್ತಿಯೂ ಕೂಡ ಇವರ ತಂದೆಯಿಂದಲೇ ಬಂದುದು. ಆದರೆ ಇದರೊಡನೆಯೇ ಅವರ ಹೃದಯವು ಅತ್ಯಂತ ಕೋಮಲವಿದೆ. ದಯಾ ಪ್ರೇಮಗಳಿಂದ ತುಂಬಿ ತುಳುಕುತ್ತಿದೆ.

ವ್ಯಕ್ತಿತ್ವದಲ್ಲಿಯೂ ಕಾಯಕತ್ವದಲ್ಲಿಯೂ ಜವಾಹರಲಾಲರನ್ನು ಸರಿಗಟ್ಟುವ (ಮಹಾತ್ಮರನ್ನು ಬಿಟ್ಟು) ಮುಖಂಡರು ಭಾರತದಲ್ಲಿ ಯಾರೂ ಇಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಭಾರತದ ರಾಜಕಾರಣವನ್ನು ಜಾಗತಿಕ ದೃಷ್ಟಿಯಿಂದ ನೋಡುವ ಮತ್ತು ಬಿಡಿಸುವ ರಾಜನೀತಿಯು ಇವರೊಬ್ಬರಲ್ಲಿಯೆ ಕಾಣುವದು. ಇದೇ ಇವರ ವ್ಯಕ್ತಿತ್ವಕ್ಕೆ ಮಹತ್ತರ ಕಾರಣವು. ಇದಕ್ಕಾಗಿ ಭಾರತಕ್ಕೆ ಒಳ್ಳೇ ಅಭಿಮಾನವೆನಿಸುತ್ತದೆ.

ಸ್ವತಂತ್ರ ಕೂಲಿಕಾರ ಪಕ್ಷದ ಮುಖಂಡರಾದ ' ಫೆನ್ನರ ಬ್ರಾಕವೆ ' ಯವರು ಜವಾಹರಲಾಲರ ವ್ಯಕ್ತಿತ್ವದ ವಿಷಯವಾಗಿ ಹೀಗೆ ಬರೆಯುತ್ತಾರೆ. (೧೯೩೧)

" ಇಂದಿನ ಜಗತ್ತಿನಲ್ಲಿ ಅತ್ಯಂತ ಶಕ್ತಿಶಾಲಿಗಳೂ ಪ್ರಭಾವಶಾಲಿಗಳೂ ಆದ ವ್ಯಕ್ತಿಗಳಲ್ಲಿ ಪಂ. ಜವಾಹರಲಾಲರು ಒಬ್ಬರೆಂದು ನನ್ನ ಕಲ್ಪನೆಯಿದೆ. ಭಾರತದ ಯುವಕರಲ್ಲಿ ಹರಿಯುತ್ತಿರುವ ನವ ವಿಚಾರಗಳ ಪ್ರತಿಮೆಯೇ ಪಂ. ಜವಾಹರಲಾಲರು. ಇಪ್ಪತ್ತು ವರ್ಷಗಳ ಹಿಂದೆ, ಭಾರತೀಯ ಮುಖಂಡರು ಪಟ್ಟಣಗಳಲ್ಲಿ ವಾಸಿಸುವ ಶ್ರೀಮಂತರಿಗಾಗಿ ಕೆಲವು ಹಕ್ಕುಗಳನ್ನು ಕೇಳುತ್ತಿದ್ದರು. ಈಗ ಹತ್ತು ವರ್ಷಗಳ ಹಿಂದೆ ಮಹಾತ್ಮಾ ಗಾಂಧಿಯವರು ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಡಹತ್ತಿದರು. ಆದರೆ ಇಂದು ಜವಾಹರಲಾಲರು ರಾಜಕೀಯ ಹಾಗು ಸಾಮಾಜಿಕ ಸ್ವಾತಂತ್ರ್ಯಗಳಿಂದ ತೃಪ್ತರಾಗದೆ ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಹೋರಾಡಹತ್ತಿದ್ದಾರೆ. ನವ ಭಾರತವನ್ನು ಆತ್ಮಶಕ್ತಿಯಿಂದ ವೀರ ಭಾರತವನ್ನು ಮಾಡಲು ಯತ್ನಿಸುತ್ತಿದ್ದಾರೆ. ಇದಲ್ಲದೆ ಬಲಿಷ್ಠವಾದ ಬ್ರಿಟಿಶ ಸಾಮ್ರಾಜ್ಯವನ್ನು ಕೆಣಕಿ ಹೋರಾಡುವ ಹವಣಿಕೆಯಲ್ಲಿದ್ದಾರೆ. ಆದರೆ ಭಾರತದಲ್ಲಿರುವ ಅನೈಕ್ಯ, ಅಂಧಶ್ರದ್ಧೆಯಿಂದ ತುಂಬಿದ

ರೂಢಿ, ಇವುಗಳೊಡನೆ ಹೋರಾಡುವ ಕಠಿಣ ಕಾರ್ಯವೂ ಅವರೆದುರಿಗೆ ಇದೆ. ಇವೆಲ್ಲವುಗಳನ್ನು ನಿರ್ಮೂಲನ ಮಾಡಲು ಯುವಕರಿಗೆ ಸಂದೇಶ ವನ್ನು ಕೊಡಹತ್ತಿದ್ದಾರೆ. ಕೂಲಿಕಾರರ ಹಾಗು ರೈತರನ್ನು ಬಂಧ ಮುಕ್ತ ಮಾಡುವ ಸಾಮಾಜಿಕ ಹಾಗು ಆರ್ಥಿಕ ಕ್ರಾಂತಿಯನ್ನೂ ರಾಜಕೀಯ ಕ್ರಾಂತಿಯನ್ನೂ ಮಾಡಲು ಹವಣಿಸುತ್ತಿದ್ದಾರೆ. ಸಂಘ ಟನೆ ಮಾಡುತ್ತಿದ್ದಾರೆ. ಇನ್ನೂ ಎಷ್ಟೋ ಪಾಶ್ಚಾತ್ಯರು ಭಾರತವು ಪತಿತ ರಾಷ್ಟ್ರವೆಂಬ ಮಬ್ಬಿನಲ್ಲಿದ್ದಾರೆ. ಆದರೆ ಇಂದು ಭಾರತದಲ್ಲಿ ನಡೆದ ಸಾಮಾಜಿಕ, ರಾಜಕೀಯ, ಆರ್ಥಿಕ ಚಟವಟಿಕೆಗಳು ಜಗತ್ತಿನಲ್ಲಿ ಮತ್ತಾವ ರಾಷ್ಟ್ರದಲ್ಲಿಯೂ ಇಷ್ಟು ತೀವ್ರವಾಗಿ ನಡೆದಿಲ್ಲವೆಂದು ಹೇಳಬಹುದು. ಪಂ. ಜವಾಹರಲಾಲರು ಆ ಎಲ್ಲ ಶಕ್ತಿಗಳ ಪ್ರತಿಮೂರ್ತಿ ಯಾಗಿದ್ದಾರೆ. **ಆದ್ದರಿಂದಲೇ ನಾನು ಅವರನ್ನು ನವಭಾರತದ ನಿರ್ಮಾಣಕ್ಕಾಗಿ ಅವತರಿಸಿದ ಮಹಾಪುರುಷರೆಂದು ತಿಳಿಯು ತ್ತೇನೆ.** ಅವರನ್ನು ಪ್ರತ್ಯಕ್ಷ ನೋಡುವ ಸೌಭಾಗ್ಯವು ನನಗೆ ದೊರಕಿದೆ. ಅವರಲ್ಲಿರುವ ವೀರತೆ, ತ್ಯಾಗ, ಆದರ್ಶಭಾವನೆಗಳು ಭಾರತವನ್ನು ಸ್ವತಂತ್ರ ಮಾಡಲುಸಂದೇಹವಿಲ್ಲ.'

ಇವರ ವ್ಯಕ್ತಿತ್ವದ ವಿಷಯವಾಗಿ ಮಹಾತ್ಮರ ಉಕ್ತಿಗಳಿಂದಲೇ ಇವರ ಚರಿತ್ರೆಯನ್ನು ಪ್ರಾರಂಭಮಾಡಿದ್ದೇನೆ. ಅವರ ಆಶೀರ್ವಾದದಂತೆ ಪಂ. ಜವಾಹರಲಾಲರ ಕೈಯಲ್ಲಿ ಭಾರತವು ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದು ಸುರಕ್ಷಿತವಾಗಿರಲಿ.

**ವಂದೇಮಾತರಂ**

# ಆಧಾರ ಗ್ರಂಥಗಳು

೧) ಕಾಂಗ್ರೆಸ್ಸಿನ ಇತಿಹಾಸ — ಡಿ. ಕೆ. ಭಾರದ್ವಾಜ

೨) ,, — ಪಟ್ಟಾಭಿ ಸೀತಾರಾಮಯ್ಯ

೩) ಕಾಂಗ್ರೆಸ್ಸಿನ ಕತೆ — ಡಿ. ಪಿ. ಕರಮರಕರ

೪) ಮಹಾತ್ಮಾ ಗಾಂಧಿಯವರ ಆತ್ಮಚರಿತ್ರೆ

೫) ಪಂಡಿತ ಜವಾಹರಲಾಲರ ,,

೬) ಲೋಕಮಾನ್ಯ ಟಿಳಕರ ಚರಿತ್ರೆ — ಎನ್. ಸಿ. ಕೇಳಕರ

೭) ಇಂಡಿಯನ್ ನೇಶನ್ ಬಿಲ್ಡರ್ಸ — ನಟೇಶನ್

೮) ಹಮಾರೆ ಭಾರತ ರಾಷ್ಟ್ರ ನಿರ್ಮಾತಾ — ರಾಮಲಾಲ ಸುಮನ್

# ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩೩ | ೧ | ಸ್ವಾತಂತ್ರ್ಯ | ಸ್ವಾತಂತ್ರ್ಯದ |
| ೪೧ | ೧೮ | ನಿಂತದದ್ದು | ನಿಂತದ್ದು |
| ,, | ೨೧ | ಆರಿಸಲ್ಪಟ್ಟರೂ | ಆರಿಸಲ್ಪಟ್ಟರು. |
| ೪೭ | ೩ | ಶಿಕ್ಷಣವು | ಇಂಗ್ಲೀಷ ಶಿಕ್ಷಣವು |
| ೫೦ | ೮ | ರಾಸ್ವಗೋಘಟಾರ | ರಾಸ್ತ್ರಗೋಘಾರ |
| ೫೬ | ೨ | ಬೀಳುವದೂ | ಬೀಳುವದು. |
| ,, | ೧೪ | ಇಂಗ್ಲಂಡಕ್ಕೆ | ಇಂಗ್ಲಂಡದ |
| ೫೯ | ೧೧ | ತುದಿಯನ್ನೇ | ಕುದಿಯನ್ನೇ |
| ,, | ೨೦ | ೧೭ | ೨೭ |
| ೮೯ | ೪ | ಬೊಂಬು | ಬಾಂಬು |
| ೯೩ | ೧೮ | ವಂಗಭಂಗವು | ವಂಗಭಂಗವನ್ನು |
| ೯೫ | ೧೨ | Baffings | Bafflings |
| ೯೬ | ೧೩ | ಮುರಿಯಬೆಂದಿರಲಿಲ್ಲ | ಮುರಿಯಬೇಕೆಂದಿರಲಿಲ್ಲ |
| ,, | ೧೭ | ಅರವಿಂಘೋಷ | ಅರವಿಂದಘೋಷ |
| ೧೪೪ | ೬ | ಜೋಶಿಯೂ | ಜೋಸೆಫ್ |
| ೧೫೮ | ೫ | ಹಿತಕ್ಕೂ | ಭಾಗಕ್ಕೂ |
| ೨೦೦ | ೨೨ | ೧೮೧೯ | ೧೮–೧೯ |
| ೨೨೯ | ೨೬ | ೧೯೩೨ | ೧೯೨೨ |

# ದಿ ಯುನಾಯಿಟೆಡ್
# ಕರ್ನಾಟಕ ಇನ್ಸೂರೆನ್ಸ ಕಂಪನಿ, ಲಿ.

ಪ್ರಧಾನ ಕಾರ್ಯಾಲಯ—**ಧಾರವಾಡ**



ಕಂಪನಿಯು ಸುಮಾರು ೨೦೦ ಜನ ಯುವಕರಿಗೆ
ಉದ್ಯೋಗವನ್ನು ಕಲ್ಪಿಸಿದೆ.

**ಈಗಾಗಲೇ ಸರಕಾರದ ಆಧಾರಪತ್ರಗಳಲ್ಲಿ ತೊಡಗಿಸಿದ**
**ಹಣ ೫೮೦೦೦ ರೂಪಾಯಿಗಳಿಗೆ ಮಿಕ್ಕಿದೆ.**

ಈ ವರ್ಷದ ಕೊನೆಗೆ ೧೬೦೦೦೦೦ ರೂಪಾಯಿಗಳಿಗೆ
ಮಿಕ್ಕಿದ ವಿಮಾ ಕಾರ್ಯವಾಗಿದೆ.

**ಕನ್ನಡಿಗರ ಅಭಿಮಾನದ ಸಂಸ್ಥೆ**

**ಭರದಿಂದ ಬೆಳೆಯುತ್ತಿರುವ ವಿಮಾ ಕಂಪನಿ**

ಲಾಭದಾಯಕ ಕಮೀಶನ್ ಕರಾರುಗಳು. ವ್ಯವಹಾರ
ಕುಶಲರೂ ಉದ್ಯಮಿಗಳೂ ಆದ ಏಜಂಟರು ಬೇಕು.

ವಿಶೇಷ ವಿವರಕ್ಕೆ ಬರೆಯುವದು.

**ಎಂ. ಗೋವರ್ಧನರಾವ್,**
ಮ್ಯಾನೇಜರ,
ಯು. ಕ. ಇ. ಕಂ. ಲಿ. ಧಾರವಾಡ.